# ನಿರಂಜನ

ಸಂಪಾದಕರು

ಎ. ಎಸ್. ಹೂಗಾರ
ಎಚ್. ಪಿ. ಹುಲ್ಯಾಳ

೧೯೭೪

# 'ನಿರಂಜನ'ದ ನಿವೇದನೆ

ನಿರಂಜನನೊಡಗೂಡಿ,
ಮಾಯಾರಂಜನೆಯಳಿದು,
'ನಿರಂಜನ'ನಾಗಿರ್ದನು, ಕಾಣಾ !

— ತೋಂಟದ ಸಿದ್ಧಲಿಂಗರು

ಪರಶಿವನ ಶಿಖಾ ಚಕ್ರದಲ್ಲಿ ಥಳಥಳಿಸುವ ಚಿಚ್ಛಕ್ತಿಯೇ ಚೈತನ್ಯ. ಆ ಚೈತನ್ಯ ತಾನೆ ಸಾಕಾರದಲ್ಲಿ ತೋರುವದೇ ನಿರಂಜನ ಜಂಗಮ. ನಿರಂಜನ ನಿರಾಭಾರಿಗೆ ಮಾಯಾಮೋಹದ ಅಂಜನ - ರಂಜನೆಗಳೆಲ್ಲಿಯವು ? ಇಂತಹ ನಿರಂಜನನಲ್ಲಿ ಸಮರಸಗೊಳ್ಳಬೇಕು. ಅಂಜನ - ರಂಜನೆಗಳ ಅತ್ತತ್ತ ನಿಲ್ಲಬೇಕು-ಎಂದಾಗಳೆ ನಿರಂಜನನಾಗಲು ಅರ್ಹತೆ ಬರುವುದು. ಇದುವೆ ನಿರಂಜನ ನಿರಾಭಾರ ಜಗದ್ಗುರು ತೋಂಟದ ಸಿದ್ಧಲಿಂಗರ ಸ್ವಾನುಭಾವದ ನುಡಿ.

ಈ ಸೂತ್ರವಿಡಿದು ಸ್ಥಾಪಿತವಾಗಿರುವ ಡಂಬಳ-ಗದಗ ನಿರಂಜನ ಜಗದ್ಗುರು ತೋಂಟದಾರ್ಯ ಪೀಠದ ನಿರಾಭಾರ ಪಟ್ಟಾಭಿಷೇಕ ಮಹೋತ್ಸವದ ಸುಮಧುರ ಸಂಸ್ಮರಣೆಗಾಗಿ ಸಾಹಿತ್ಯ ಕೃತಿಯೊಂದನ್ನು ಬೆಳಕಿಗೆ ತರುವದೆ 'ನಿರಂಜನ' ಸಂಚಿಕೆಯ ನಿರಿ-ಗುರಿ. ಇದನ್ನು ಮನದಂದು 'ನಿರಂಜನ'ದ ಮೇಲೆ ಡಾ. ಶ್ರೀಜ. ಚ. ನಿ. ಅವರಿಂದ ಆಶೀರ್ವಾದವಾಗಿ ಬಂದ ವಿಮರ್ಶಾತ್ಮಕ ಲೇಖನ ಸುಧೆಯನ್ನು ವಾಚಕ ಲೋಕಕ್ಕೆ ಮೊದಲು ಎಡೆಮಾಡಲಾಗಿದೆ.

ಈ ಸಂಸ್ಮರಣ ಸಂಚಿಕೆಯನ್ನು ಹೊರತರುವ ಅವಧಿ ಅತ್ಯಲ್ಪ: ಬರಿ ಹದಿನೈದು ದಿನ. ಆದರೂ 'ಮನವಿದ್ದಲ್ಲಿ ಮಾರ್ಗವುಂಟು' ಎಂಬ ಜಾಣ್ಣುಡಿಯಿಂದ ಸ್ಫೂರ್ತಿಗೊಂಡು, ಕಾರ್ಯ ಕೈಗೆತ್ತಿಕೊಂಡೆವು. ಕೆಲಸ ಮಾಡಿದಂತೆಲ್ಲ ಯಾವುದೋ ಅವ್ಯಕ್ತ ಚೈತನ್ಯ ನಮಗೆ ಆಸರವಾಗಿ ನಿಂತು, ನಮ್ಮನ್ನು ಕಾರ್ಯ ಪೂರ್ತಿಯತ್ತ ಎಳೆದೊಯ್ಯುತ್ತಿದ್ದಂತೆ ಭಾಸವಾಗುತ್ತಿತ್ತು. ಕೊನೆಗೆ ನಮ್ಮ ಆತ್ಮ ವಿಶ್ವಾಸ ಫಲಿಸಿತು.

ಇಲ್ಲಿಯ ಪಟ್ಟಾಭಿಷೇಕ ಮಹೋತ್ಸವ ಸಮಿತಿಯವರು ಹುರಪು ಹುಮ್ಮಸದಿಂದ ಮುಂಬಂದು, ಈ ಸಂಚಿಕೆಯನ್ನು ಹೊರಡಿಸುವ ಸಂಕಲ್ಪ ಮಾಡಿದರು.

ನಮ್ಮ ಮೇಲೆ ಅದರ ಹೊಣೆಯನ್ನು ಹೊರಿಸಿದರು. ಈ ದಿಶೆಯಲ್ಲಿ ಸಮಿತಿಯವರು ನಮ್ಮ ಮೇಲಿರಿಸಿದ ಪ್ರೀತಿ–ವಿಶ್ವಾಸಗಳೇ ಕಾರಣ. ಅದಕ್ಕಾಗಿ ಅವರನ್ನು ನಾವು ಹೃತ್ಪೂರ್ವಕ ಅಭಿನಂದಿಸುತ್ತೇವೆ.

ನಮ್ಮೀ ಕಾರ್ಯದ ಜೀವ ಜೀವಾಳವಾಗಿರುವ ಆವಶ್ಯಕ ಸಾಹಿತ್ಯ ಸಾಮಗ್ರಿಯನ್ನು ಸಕಾಲಕ್ಕೆ ಒದಗಿಸಿಕೊಡುವಲ್ಲಿ ನಮಗೆ ಸಹಕಾರವಿತ್ತ, ಎಲ್ಲ ಕವಿಗಳ ಲೇಖಕರ ಹೃದಯ ನಿಜಕ್ಕೂ ದೊಡ್ಡದು. ಅವರ ಸಹೃದಯತೆಗೆ ನಮ್ಮ ನಮನಗಳು.

ಔಚಿತ್ಯ ಪೂರ್ಣವಾದ ಹೆಸರನ್ನು ಗ್ರಂಥಕ್ಕೆ ಸೂಚಿಸಿದ ಡಾ. ಎಂ. ಎಂ. ಕಲಬುರ್ಗಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಅಲ್ಲದೆ ಈ ಕಾರ್ಯ ನಿರ್ವಹಣೆಯಲ್ಲಿ ನಮಗೆ ನೆರವಾದ ಶ್ರೀ ವಿ. ಎಂ. ಯಕ್ಕುಂಡಿಮಠ ಧಾರವಾಡ ಹಾಗೂ ಪಂ. ಕಲ್ಲೂರು ಸಂಗಣ್ಣ ಅವರಿಗೆ ಮರೆಯದೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸಲು ಸಂತೋಷವಾಗುತ್ತದೆ.

ಪಡಿಯಚ್ಚುಗಳಿಗಾಗಿ ಚಿತ್ರಗಳನ್ನು ಅಣಿಗೊಳಿಸಿಕೊಟ್ಟ ಕಲಾವಿದ – ಶ್ರೀ ಸಿ. ಎನ್. ಪಾಟೀಲ, ಗದಗ ಅವರಿಗೂ, ಪಡಿಯಚ್ಚುಗಳನ್ನು ಸಿದ್ಧಗೊಳಿಸಿ ಕೊಟ್ಟ ಎಸ್. ಬಿ. ಪ್ರೊಸೆಸ್, ಹುಬ್ಬಳ್ಳಿ ಅವರಿಗೂ, ಹಾಗೂ ವಿಶೇಷ ಪರಿಶ್ರಮ ವಹಿಸಿ ಮುದ್ರಣ ಕಾರ್ಯವನ್ನು ನಿರ್ದಿಷ್ಟ ವೇಳೆಗೆ ಮುಗಿಸಿಕೊಟ್ಟ ಶ್ರೀ ತೋಂಟದಾರ್ಯರಲ್ಲಿ ನಿಷ್ಠೆ ಇಟ್ಟ ಪ್ರಭು ಮುದ್ರಣಾಲಯದ ಒಡೆಯರಾದ ಶ್ರೀ ಬ. ಪ್ರ. ಜಂಗಮನಿ ಅವರಿಗೂ ನಾವು ಋಣಿಯಾಗಿರುತ್ತೇವೆ.

ನಮ್ಮೀ ಲಘು ಸಾಹಸದಲ್ಲಿಯ ಅಭಾವಕ್ಕೆ ವಾಚಕರ ಸಹೃದಯತೆ ಜೋಡಾಗಿರಲಿ.

— ಸಂಪಾದಕರು

ಆದಿ ನಿರಂಜನನೆ ಮೇದಿನಿಯೊಳು ಬಂದು
ಬೋಧಿಸುತೆ ಶರಣ ಸಂತತಿಗೆ ಗುರುವಾದ
ನಾದಮಯ ಸಿದ್ಧ ದಯವಾಗು



ಶ್ರೀಮದನಾದಿ ನಿರಂಜನ ಜಗದ್ಗುರು

ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು

ಯಡೆಯೂರು

# ಪರಿವಿಡಿ

ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು

ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ

## ನಿರಂಜನ ಪಟ್ಟಾಧಿಕಾರ ಮಹೋತ್ಸವದ

ಸವಿ ನೆನಹಿಗಾಗಿ

**ಸೋಮವಾರ, ದಿನಾಂಕ ೨೯–೭–೧೯೭೪**



ಅನಾದಿ ನಿರಂಜನ ಜಗದ್ಗುರು
ಶ್ರೀ ತೋಂಟದ ಶ್ರೀ ಸಿದ್ಧಲಿಂಗೇಶ್ವರರ ನಿರ್ವಿಕಲ್ಪ ಸಮಾಧಿ,ಯಡೆಯೂರ

ಉಭಯ ಕವಿತಾವಿಶಾರದ
ಷಡಕ್ಷರದೇವ ವಿರಚಿತ

# ಶ್ರೀಮದನಾದಿ ಸಿದ್ಧಲಿಂಗಸ್ತವನಮ್

ಜಗಜ್ಜಾಲಪಾಲಂ ಜನಸ್ತುತ್ಯಶೀಲಂ ।
ಭವಾರಣ್ಯದಾವಂ ಭೃತ ಸ್ವಾನುಭಾವಂ ॥
ಶಿವಾನಂದಕೋಶಂ ದಿನೇಶಪ್ರಕಾಶಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೧॥

ಸ್ವತಂತ್ರ ಸ್ವಲೀಲಂ ಗಣೇಂದ್ರಾನುಕೂಲಂ ।
ಮಿಲನ್ಮೂಲಮಂತ್ರಂ ಪ್ರಣೀತೇಶ ತಂತ್ರಂ ॥
ಶಿವಧ್ಯಾನಸಕ್ತಂ ಪರಾನಾದಿಮುಕ್ತಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೨॥

ಪರಿವ್ರಾಡ್ವರೇಣ್ಯಂ ಗಣೇಶಾಗ್ರಗಣ್ಯಂ ।
ಸದಾಸತ್ಯಭಾಷಂ ಶಿವಜ್ಞಾನಭೂಷಂ ॥
ಸರುದ್ರಾಕ್ಷಮಾಲಂ ಲಸದ್ಭಸ್ಮಫಾಲಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೩॥

ಶಿವಾಚಾರಪಕ್ಷಂ ಕೃಪಾಭೃತ್ಕಟಾಕ್ಷಂ ।
ಷಡಧ್ವಾದಿಬೀಜಂ ನತಾಮರ್ತ್ಯಭೂಜಂ ॥
ಪರಿತ್ಯಕ್ತರಾಗಂ ಪರಬ್ರಹ್ಮಯೋಗಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ । ॥೪॥

ಕಲಾಸತ್ಕಲಾಪಂ ಕಪರ್ದಿಸ್ವರೂಪಂ ।
ಮನೋವೃತ್ತಿಶೂನ್ಯಂ ಮುನಿವ್ರಾತಮಾನ್ಯಂ ॥
ಸಮಂಚದ್ಗುಣಾಂಕಂ ಸದಾ ನಿಷ್ಕಲಂಕಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೫॥

ಪವಿತ್ರಾಭಿಧೇಯಂ ಪರಾಮ್ನಾಯಗೇಯಂ ।
ನಿರಸ್ತಾಂಗಜಾತಂ ಸುಧಾಸ್ಮಿತಗೀತಂ ॥
ಪರಿಚ್ಛಿನ್ನಪಾಶಂ ಸಮಸ್ತಾಮರೇಶಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೬॥

ಪವಿತ್ರಸ್ವಗಾತ್ರಂ ಬುಧಸ್ತೋತ್ರಪಾತ್ರಂ ।
ನಿಕೃತ್ತಾವರೋಧಂ ನಿಸರ್ಗಾವಬೋಧಂ ॥
ಚಿದಾಮೋದಭಾಜಂ ಚರಾಚಾರ್ಯರಾಜಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೭॥

ಜಿತಾರಾತಿವರ್ಗಂ ಗೃಹೀತಾದ್ಯಮಾರ್ಗಂ ।
ತತಾಮ್ನಾಯಸಾರಂ ತಮಸ್ತೋಮದೂರಂ ॥
ಪರಾಷಟ್ಸ್ಥಲಾಂಕಂ ನಿರಾತಂಕಶಂಕಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೮॥

ಭುಜಂಗಪ್ರಯಾತಂ ಸ್ತವಂ ಸಿದ್ಧಲಿಂಗಂ ।
ಪ್ರಭೋರ್ಮೂಲಮಂತ್ರಾಭಿಧಾನೇನ ಕ್ಲುಪ್ತಂ ॥
ಭುಜಂಗಾಶ್ರಮಸ್ಥಸ್ಯ ಯೋಪಾಪಠೇತ್ಸ್ಯೋ
ಪ್ಯವಾಪ್ನೋತ್ಯಭೀಷ್ಟಂ ಚ ಭೋಗಂ ಚ ಮೋಕ್ಷಂ ॥

# ನಿ-ರಂಜನ

—ಡಾ. ಶ್ರೀ. ಜ. ಚ. ನಿ.

ಅನಾದಿ ವೀರಶೈವ ಕ್ಷೇತ್ರದಲ್ಲಿ, ಮಠ ಪಾತ್ರದಲ್ಲಿ, ಮಠಾಧಿಪತಿಗಳಾದ ವಿರಕ್ತ ವೃಂದದ ಜೀವನ ಬೆಂಬಳವಿಡಿದು 'ನಿರಂಜನ' ಪದ ರಂಜಿಸುತ್ತಿದೆ. ರಜತವಾಗಿಯೋ, ರಜನಿಯಾಗಿಯೋ, ರಜನೀಕರವಾಗಿಯೋ ಎಂದು ಕೇಳಿದರೆ ಉತ್ತರಿಸುವುದು ಕರಕಷ್ಟವಾದರೂ ಇದೆಲ್ಲವೂ ಆಗಿ ರಂಜಣಿಗೆಯ ರೂಪದಲ್ಲಿ ರಾಜಿಸುತ್ತಿದೆಯೆಂದು ಹೆರೆಹಿಂಗದೆ ಹೇಳಬಹುದಾಗಿದೆ. ನುಡಿ ನಿರಂಜನ ವಾಗಿದ್ದರೂ ಅದನ್ನು ಬಳಸಿದ 'ನುಡಿಗಡಣ' ನಿರಂಜನವಾಗಿಲ್ಲ. ನಿಡಿದಾಗಿ ನಿಧಿಯಾಗಿ ನಿನದಿಸುತ್ತಿದೆ. ಅದು ನಿಪ್ಪಾಳಿಯದಂತಿಲ್ಲ; ನಿಬಿಡ ಬಗೆಯುಳ್ಳ ದಾಗಿದೆ. ಅದು ಬರೀ ಪಳವಾತಲ್ಲ; ಅಂತೆಯೇ ನಿಪ್ಪೊಸತಾದುದು ಆಗಿದೆ. ಇದೀಗ ಇನ್ನೂ ಆಗಿಸಲು ಗದಗ ನಗರದ ಶ್ರೀ ಜ. ತೋಂ. ಸಂಸ್ಥಾನ ಮಠದ ಪಟ್ಟಾಧಿಕಾರ ಮಹೋತ್ಸವ ಸಮಿತಿ ಈ ಮೂಲಕ ಸನ್ನದ್ಧವಾಗಿದೆ. ಇವರ ಬೇಡಿಕೆಯನ್ನು ಬರಿದಾಗಿಸದೆ ಈ ಬಗೆಗೆ ಒಡೆತನವಿಲ್ಲವಾದರೂ ಒಂದೆರಡು ನುಡಿಗಳನ್ನು ಬಗೆಗಂಡಂತೆ ಬರೆಯಲಾಗಿದೆ.

ನಿರಂಜನ ನುಡಿ ನಿಜಕ್ಕೂ ಮೋಡಿ ನುಡಿ; ಗಾಡಿ ನುಡಿ. ಅದೊಂದು ಕೂಡುನುಡಿ. ಅದರಲ್ಲಿ ದ್ವಂದ್ವಾರ್ಥವಿದೆ, ದಿವ್ಯ ತತ್ತ್ವವಿದೆ. ಅದೊಂದು ಶ್ಲೇಷೋಕ್ತಿ. ರಂಜನವಿಲ್ಲದ್ದು ನಿ-ರಂಜನ; ಅಂಜನವಿಲ್ಲದ್ದು ನಿರ್-ಅಂಜನ. ಒಪ್ಪಿರಬಾರದೆಂದರೆ ಕಪ್ಪಿರಬೇಕೆಂದರ್ಥವಲ್ಲ. ಅಷ್ಟಕ್ಕೂ ಒಪ್ಪೆಂದರೆ ಯಾವ

ಒಪ್ಪು ? ಒಪ್ಪುವ ಒಪ್ಪ ಇದ್ದರೆ ಬೇಡವೆಂಬುವವರಾರು ?. ಪಾವನ ಪ್ರಕಾಶ ವಿದ್ದರೆ ಪ್ರಾಸಾದಿಕ ಪ್ರತಿಭೆಯಿದ್ದರೆ ಅದಕ್ಕೆ ಎಲ್ಲರದೂ ಒಪ್ಪುಗೆ ! ಈ ದಿಸೆ ಯಲ್ಲಿ ನಿಷ್ಕಲ - ಸಕಲಗಳೆರಡಕ್ಕೂ ಒಪ್ಪಂದವಾಗಿದೆ. ಒಪ್ಪಚ್ಚಿ ಒಪ್ಪಂದವಲ್ಲ, ಓರಂದದ ತುಂಬು ಒಪ್ಪಂದ.

ರಂಜನವೆಂದರೆ ಬಣ್ಣ, ಬೆಡಗು, ಚೆಲವು, ಶೃಂಗಾರ, ಹೊಳಪು, ಬಣ್ಣ ಹಾಕುವಿಕೆ, ಸಂತಸಗೊಳಿಸುವಿಕೆ, ಮೆರೆಯುವಿಕೆ, ಚಲುವಾಗಿ ತೋರುವಿಕೆ ಎಂದು ಮುಂತಾಗಿ ಅರ್ಥಗಳಿವೆ. ಅಂಜನವೆಂದರೆ ಕಪ್ಪು, ಕಾಡಿಗೆ, ಕಜ್ಜಳ, ಎಂದು ಅರ್ಥಗಳಿವೆ. ಇವು ಇಲ್ಲದಿರುವುದೆ ನಿರಂಜನ. ನಿರಂಜನವೆಂದರೆ ನಿರ್ಮಲ ವಾದುದು, ನಿರ್ದೋಷವುಳ್ಳುದು, ತಮೋಗುಣವಿಲ್ಲದುದು, ಪರಮ ಪ್ರಾಭವ ಶಕ್ತಿಯುಳ್ಳುದು, ಪರಶಿವ ಬ್ರಹ್ಮಸ್ವರೂಪವಾದುದು. ಇವೆಲ್ಲವೂ ಕೇವಲ ಶಬ್ದ ಶಕ್ತಿಯಿಂದಾದ ಅರ್ಥಗಳಲ್ಲ. ವಸ್ತುನಿಷ್ಠ ಪ್ರಭಾವಶಕ್ತಿಯಿಂದಾದ ಲಾಕ್ಷಣಿಕಾರ್ಥ ಗಳೂ ಮಿಳನವಾಗಿವೆ.

ನಿರಂಜನ ಪದ ವೃತ್ತಿರಾಹಿತ್ಯ ಸಂಕೇತವೊ; ವೃತ್ತಿ ವೈಶಿಷ್ಟ್ಯ ಸಂಕೇತವೊ? ಎಂದು ಕೇಳಿದಲ್ಲಿ ಮೊದಲಿನದನ್ನೆ ಹೆಚ್ಚು ಮಂದಿ ಹೇಳಿಯಾರು; ಸನಾತನ ಕಾಲದಿಂದ ಹೇಳುತ್ತ ಬಂದಿರುವರು. ವಾಸ್ತವವಾಗಿ ಹೇಳುವುದಾದರೆ ಅದರ ಜೊತೆಗೆ ವೃತ್ತಿ ವೈಶಿಷ್ಟ್ಯ ಸಂಕೇತವೂ ಆಗಿದೆಯೆಂದರೆ ತೆಗೆದು ಹಾಕುವ ಮಾತಲ್ಲ. ಭೌತಿಕ ದೈಹಿಕ ರಂಜನೆಗಳನ್ನು ಬಿಡಬಹುದು; ಆತ್ಮಿಕ ದೈವಿಕ ರಂಜನೆಗಳನ್ನು ಬಿಡಲು ಸಾಧ್ಯವೆ ? ಪ್ರಾಪಂಚಿಕ ರಂಜನೆಗಳನ್ನುಳಿದು ಪಾರ ಮಾರ್ಥಿಕ ರಂಜನೆಗಳಿಗೆ ಬೇಕಾದ ವೃತ್ತಿರಾಹಿತ್ಯ ದೇಹಿಗೆ ಸಾಧ್ಯವೆ ? ಪ್ರಣವ ಸ್ವರೂಪಕ್ಕೂ ಒಂದು ರಂಜನೆಯಿದೆಯಲ್ಲವೆ ? ಅದು ಲೌಕಿಕವಲ್ಲ, ಅಧೋ ಮುಖಿಯಲ್ಲ; ವಿಕಾರಿಯಲ್ಲ. ಆದರಿಂದ ಅದು ರಂಜನವಾಗಿದ್ದರೂ ನಿರಂಜನ. ಅದು ತಮೋರಂಜನವಲ್ಲ; ತೇಜೋರಂಜನ, ಅಪ್ರಾಕೃತಿಕ ರಂಜನ.

ಜೀವನ ರಂಜನ; ನಿರ್ಜೀವನ ನಿರಂಜನ. ಇದೊಂದು ಸರ್ವ ಸಾಮಾನ್ಯ ನಿಯಮ. ಜೀವನಾಧಾರವಾದ ಜೀವಕೋಶದ ಜೀವ ಕಣಗಳೆ ರಂಜಕಗಳು. ಜೀವಕೋಶದ ಅನ್ವೇಷಣೆಯಲ್ಲಿ ಇದು ಸಿದ್ಧವಾಗಿದೆ, ಪ್ರಸಿದ್ಧವಾಗಿದೆ. ಜೀವ ವಿಜ್ಞಾನಿ ಮೂಲ ಜೀವಾಣುಗಳಾದ ಕ್ರೋಮೊ ಸೋಮುಗಳಲ್ಲಿ ಕೆನ್ನೀಲಿ ಬಣ್ಣ ವಿದೆಯೆಂದು ಕಂಡುಕೊಂಡಿದ್ದಾನೆ. ರಂಜಕ ರಕ್ತಕಣಗಳಿಂದಾದ ಈ ಜೀವನ ರಂಜನವಲ್ಲದೆ ಇನ್ನೇನು ?

ಈ ಸಮಷ್ಟಿ ಪ್ರಕೃತಿ ಬಗೆ ಬಗೆಯ ಬಣ್ಣಗಳ ಬೆಡಗಿನಿಂದ ರಂಜನವಾಗಿರುವಂತೆ ವೈಯಕ್ತಿಕ ವ್ಯಷ್ಟಿ ಪ್ರಕೃತಿಯೂ ಪ್ರಧಾನವಾಗಿ ಕೆಂಪು ಕಪ್ಪು ಬಿಳುಪು ಬಣ್ಣಗಳ ಬೆಡಗಿನಿಂದ ರಂಜನವಾಗಿರುತ್ತದೆ. ಅಂತೆಯೆ ವ್ಯಷ್ಟಿ ಪ್ರಕೃತಿ ನಿಷ್ಠನು ಕೆಂಚ, ಕರಿಕ, ಬೆಳುವ ಅಥವಾ ಬೆಳತಿಗ ಎಂದು ಹೇಳಿಸಿಕೊಳ್ಳುತ್ತಾನೆ. ಇದರಿಂದಾಗಿ ಈ ಉಭಯ ಪ್ರಕೃತಿಗಳು ನಾಮ ರೂಪಾತ್ಮಕಗಳೆನಿಸಿವೆ. ಆಕಾಶ - ವಾಯು - ತತ್ತ್ವಗಳೆರಡರಿಂದ ನಾಮ, ತೇಜೋಪ್‌ಗಳಿಂದ ರೂಪ, ಪಾರ್ಥಿವ ತತ್ವದಿಂದ ವಾಸನೆ ಉತ್ಪತ್ತಿಯಾಗಿವೆ. ಈ ನಾಮ ರೂಪಗಳ ವಾಸನೆಗೆ ಮನ ಮರುಳಾದವನು ರಕ್ತ, ಮನ ಮರುಳಾಗದವನು ವಿರಕ್ತ. ರಕ್ತ ರಂಜನ, ವಿರಕ್ತ ನಿರಂಜನ. ರಕ್ತ ಅಥವಾ ರಂಜನ ಜಡ; ವಿರಕ್ತ ಅಥವಾ ನಿರಂಜನ ಅಜಡ. ರಂಜನ–ಅಂಜನಗಳಿಲ್ಲದ್ದು ಅಜಡವಲ್ಲದೆ ಇನ್ನೇನು ? ಜಡವೆಂದರೆ ಭಾರ, ಅಜಡವೆಂದರೆ ನಿರಾಭಾರ. ನಿರಂಜನತ್ವವಿರುವಲ್ಲಿ ನಿರಾಭಾರತ್ವ ಇದ್ದೇ ಇರುತ್ತದೆ.

ನಾಮವಿದ್ದಲ್ಲಿ ರೂಪವಿದೆ, ರೂಪವಿದ್ದಲ್ಲಿ ನಾಮವಿದೆ. ಇವೆರಡೂ ಇರುವಲ್ಲಿ ರಂಜನವಿದೆ. ಇವು ಅನ್ಯ ವಿಷಯ; ಆತ್ಮನಿಗೆ ಭಾರ. ಭಾರವೆ ಬಂಧನ; ಅಂದರೆ ಕಟ್ಟು. ಅದುವೆ ಕಷ್ಟ. ಅದಕ್ಕಿಂತ ಬೇರಿಲ್ಲ ಭವ, ಬೇರಿಲ್ಲ ಬಂಧನ. ಅಂತೆಯೇ,

ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ
ನಿಮ್ಮ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತಿರಿಸು
ನಿಮ್ಮ ಧರ್ಮ ಕೂಡಲಸಂಗಮದೇವ !

ಎಂದು ಬಸವಣ್ಣ ಬಿತ್ತರಿಸಿದ ! ಎರಡು ಮೂರನೆಯ ಪಂಕ್ತಿಗಳಲ್ಲಿ ರೂಪು ನಾಮಗಳ ನಿರೂಪಣೆ ಇದೆ. ಇವನು 'ಅನ್ಯವಿಷಯ' ಎಂದು ಇವಕ್ಕೆ ಎಳೆಸ ಬಾರದೆಂದು ನಿರ್ದೇಶಿತವಾಗಿದೆ-

ನಾಮ–ರೂಪಗಳು ತನುರಂಜನಗಳಾದರೆ ಬೇಕು–ಬೇಡ (ಸಂಕಲ್ಪ-ವಿಕಲ್ಪ) ಗಳು ಮನದ ರಂಜನಗಳು. ಇವು ಭವ ಬೀಜಗಳು, ಭಾವ ಭಾರಗಳು. ಇವನ್ನು ಹುರಿದು ಹಾಕುವುದೆ ನಿಜವಾದ ನಿರಂಜನತ್ವ, ನಿರಾಭಾರತ್ವ. ಆಗ ನಾಮಾತೀತ, ರೂಪಾತೀತ, ಸಹಜಸ್ವರೂಪ ಸಮನಿಸುತ್ತದೆ.

ನಾಮ–ರೂಪಗಳು ನಿತ್ಯ ಪರಿಪೂರ್ಣಗಳಲ್ಲ. ಸಂಕಲ್ಪ–ವಿಕಲ್ಪಗಳು ಸತ್ ಚಿತ್ ಆನಂದ ಸ್ವರೂಪಗಳಲ್ಲ. ನಾಮ ಸೀಮೆಯಿಲ್ಲದ ರೂಹಿಲ್ಲದ ಚಲುವನಿಗೊಲಿಯಬೇಕು. ಆತನೆ ನಿತ್ಯ ಪರಿಪೂರ್ಣನು; ನಿರಂಜನ. ಸಕಾಮ-ನಿಷ್ಕಾಮಗಳ ಸೀಮೋಲ್ಲಂಘನವಾಗಬೇಕು. ಆಗ ಸಹಜತೆ ಸಮನಿಸುತ್ತದೆ. ಸಚ್ಚಿದಾನಂದತ್ವ ಅಳವಡುತ್ತದೆ. ರಂಜನತೆ, ರಕ್ತತೆ, ಭಾರತೆ, ಬಂಧನತೆಗಳು ತಮ್ಮಿಂದ ತಾವೇ ತೊಲಗುತ್ತವೆ.

ನಿರಂಗ, ನಿರವಯ ವಸ್ತುವಿಗೆ ನಿರಂಜನತ್ವವಲ್ಲದೆ ಸಾಂಗ, ಸಾವಯುವ ವಸ್ತುವಿಗೆ ನಿರಂಜನತ್ವವೆಂದರೇನು ? ಅಹುದು, ಈ ಪ್ರಶ್ನೆ ಸೂಕ್ತ; ಆದರೂ ಪೂರ್ಣ ಸೂಕ್ತವಲ್ಲ. ನಿರಂಗ, ನಿರವಯ ವಸ್ತು ನಿರಂಜನವೆಂದು ಬೇರೆ ಹೇಳಬೇಕಾಗಿಲ್ಲ. ಸಾಂಗ ಸಾವಯುವ ವಸ್ತು ನಿರುಜನವಾಗುವಲ್ಲಿದೆ ವೃತ್ತಿ ವೈಶಿಷ್ಟ್ಯ; ವ್ಯಕ್ತಿ ವೈಶಿಷ್ಟ್ಯ. ಇದ್ದೂ ಇಲ್ಲದಂತಿರುವದರಲ್ಲಿದೆ ಅಗ್ಗಳಿಕೆ !

ನಾಮ ರೂಪಗಳಿಗೆ ಆಧಾರವಾದ ಕಾಯ ಅಕಾಯವಾಗಿ ಪರಕಾಯ (ಲಿಂಗಕಾಯ) ವಾಗಬೇಕು. ಸಂಕಲ್ಪ ವಿಕಲ್ಪಗಳಿಗೆ ಆಶ್ರಯವಾದ ಮನ ಅಮನವಾಗಬೇಕು. ಅಂದರೆ ಅಮನಸ್ಕಯೋಗ ಸಿದ್ಧಿಯಿಂದ ಘನಮನವಾಗ ಬೇಕು. ಕ್ರಿಯಾಲಿಂಗೋಪಾಸನೆಯಿಂದ ಕಾಯ ಅಕಾಯವಾಗುತ್ತದೆ. ಜ್ಞಾನ (ಪ್ರಾಣ) ಲಿಂಗೋಪಾಸನೆಯಿಂದ ಮನ ಘನವಾಗುತ್ತದೆ. ಅಕಾಯವಾಗುವು ದೆಂದರೆ ನಾಮ ರೂಪಗಳ ಆದರಾಭಿಮಾನಗಳನ್ನು ಅಲ್ಲಗಳೆಯುವಿಕೆ. ಅಮನ ಅಥವಾ ಘನಮನವಾಗುವುದೆಂದರೆ ಬೇಕು ಬೇಡೆಂಬ ಭವಬೀಜಗಳನ್ನು ಹುರಿದು ಹಾಕುವಿಕೆ. ತನುವಿದ್ದು ತನುಧರ್ಮ– ಮನವಿದ್ದು ಮನೋಧರ್ಮಗಳಿಲ್ಲದಿರುವಿಕೆಯೆ ನಿರಂಗತ್ವ ನಿರವಯವತ್ವ ನಿರ್ಮನತ್ವ. ಇದುವೇ ಸಾಧಿತ ಸಾರ್ಥ ನಿರಂಜನತ್ವ-ನಿರಾಭಾರಿತ್ವ. ಪ್ರಣವಾಂಗವೆ ತನ್ನ ಅಂಗವಾಗಿ, ಪ್ರಣವಾರ್ಥವೆ ತನ್ನ ಪ್ರಾಣ ವಾಗಿರುವಾತನೆ ಪ್ರಣವಸ್ವರೂಪಿ. ಆತನಿಗೆ ತನು ಭಾರ, ಮನ ಭಾರ ಇರದು; ಮತಿ ಭಾರ, ಸ್ಥಿತಿ ಭಾರ, ಗತಿ ಭಾರ ಆಗಿರವು. ಭವದ ಭಾರವೂ ಇರದು. ಅಂತಾದಾಗ ಆತ ನಿರಾಭಾರಿ. ಆತನಿಗಿಲ್ಲ-ಯಾವ ಪರಿ; ಯಾವ ರಂಜನದ ನಿರಿ.

ನಿರಂಜನ-ನಿರಾಭಾರ-ಪ್ರಣವಸ್ವರೂಪ ಇವು ಮೂರು ಪರಿವಿಡಿದು ಕಾಯ–ಮನ–ಭಾವಗಳ ಶುದ್ಧಿಯನ್ನು ಕ್ರಿಯೆ–ಜ್ಞಾನ–ಅನುಭವಗಳ ಸಿದ್ಧಿಯನ್ನು ಸಂಕೇತಿಸುವ ಪದಗಳು. ಕಾಯ ಶುದ್ಧಿಯಾಗದೆ ಕ್ರಿಯಾ ಸಿದ್ಧಿಯಾಗದು. ಮನಶುದ್ಧಿ ಯಾಗದೆ ಜ್ಞಾನ ಸಿದ್ಧಿಯಾಗದು. ಭಾವಶುದ್ಧಿಯಾಗದೆ ಅನುಭವ ಸಿದ್ಧಿಯಾಗದು. ಕ್ರಿಯಾಸಿದ್ಧಿಯಿಂದ ಕಾಯ ಅಕಾಯವಾಗಿ ಪರಕಾಯವಾಗಿ ನಿರಂಜನತ್ವ ನೆಲೆಗೊಳ್ಳುತ್ತದೆ. ಜ್ಞಾನಸಿದ್ಧಿಯಿಂದ ಮನ ಘನವಾಗಿ (ನಿಶ್ಚಲ–ನಿರ್ಮಲವಾಗಿ)

ನಿರಾಭಾರತ್ವ ನಿಷ್ಪತ್ತಿಯಾಗುತ್ತದೆ. ಅನುಭವ ಸಿದ್ಧಿಯಿಂದ ಭಾವ ನಿರ್ಭಾವವಾಗಿ ಪ್ರಣವಸ್ವರೂಪ ಪ್ರಾಪ್ತವಾಗುತ್ತದೆ.

ಕ್ರಿಯಾ ಜ್ಞಾನಾನುಭವಗಳೇ ಇಷ್ಟ-ಪ್ರಾಣ-ಭಾವ ಲಿಂಗಗಳು. ಇವುಗಳ ಸಿದ್ಧಿಯೇ ಲಿಂಗಸಿದ್ಧಿ. ಈ ತ್ರಿವಿಧ ಸಿದ್ಧಿಯುಳ್ಳವನೆ ಸಿದ್ಧಲಿಂಗ. ತೋಂಟದ ಸಿದ್ಧಲಿಂಗ ಯತಿಗಳಿಗೆ ಈ ತ್ರಿವಿಧ ಸಿದ್ಧಿಗಳು ಅಳವಟ್ಟಿದ್ದವು. ಅವರ ಆ ತ್ರಿವಿಧ ತನುಗಳು ತ್ರಿವಿಧ ಲಿಂಗಗಳಿಗೆ ತೋಂಟಗಳಾಗಿದ್ದವು. ಅವುಗಳಲ್ಲಿ ಕ್ರಿಯೆ ಜ್ಞಾನಾನುಭವಗಳು ಸುಳಿದೆಗೆದು ಬೆಳೆದು ಹೂವಾಗಿ ಹಣ್ಣಾಗಿ ಸಿದ್ಧವಾಗಿದ್ದವು. ಅವುಗಳಿಗೆ ಆ ಯತಿಯೆ ಲಿಂಗಸ್ವರೂಪವಾಗಿದ್ದನು. ಅದರಿಂದಾಗಿ ಆತನು ತೋಂಟದ ಸಿದ್ಧಲಿಂಗಯತಿ; ನಿರಂಜನ ನಿರಾಭಾರಿ ಪ್ರಣವಸ್ವರೂಪಿ. ಆತನಿಗೆ ಯಾವ ಬಾಹ್ಯರಂಜನವಿರಲಿಲ್ಲ; ಭಾರವಿರಲಿಲ್ಲ. ಪ್ರಾಕೃತಿಕ ರೂಪವಿರಲಿಲ್ಲ. ಆತನಿಗೆ ಎನೆಲ್ಲವೂ ಶಿವ ಸ್ವರೂಪವಾಗಿದ್ದಿತು. ಜಗತ್ತೆಲ್ಲ ಶಿವಮಯವಾಗಿ ಕಾಣುತ್ತಿದ್ದಿತು.

ಆತನಿಗೆ ನಾಮ-ರೂಪಗಳಿದ್ದರೂ ಇವುಗಳ ಹಂಗಿರಲಿಲ್ಲ. ಇವುಗಳ ಸಂಕಲೆಗೆ ಸಿಕ್ಕಿರಲಿಲ್ಲ, ಚಿನ್ನ ಒಡವೆಯಾಗಿದ್ದರೂ ವಾಸ್ತವವಾಗಿ ಅದು ಚಿನ್ನವೇ ಆಗಿರುವಂತೆ, ನೀರು ತೆರೆಯಾಗಿದ್ದರೂ ತೆರೆ ನೀರೇ ಆಗಿರುವಂತೆ, ಆ ಯತಿ ಯಥಾರ್ಥವಾಗಿ 'ಸಿದ್ಧಲಿಂಗ'ನೇ ಆಗಿದ್ದನು. ಅಂದರೆ ನಿರಂಜನ ನಿರಾಭಾರಿ ಪ್ರಣವಸ್ವರೂಪಿಯೆ ಆಗಿದ್ದನು. ಆತನ ಕಾಯ ಲಿಂಗ ಕಾಯ, ಆತನ ಮನ ಲಿಂಗಮನ; ಆತನ ಭಾವ ಲಿಂಗಭಾವ, ಆತನ ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗ ಸಿದ್ಧ; ಸಿದ್ಧವಾದ ಲಿಂಗ. ಈ ಸತ್ಯ ರಹಸ್ಯ ಆತನ ಆ ನಿರ್ಮಲ ನಾಮದಲ್ಲಿದೆ. ಆತನ ಆ ಸತ್ಯ ಸುಂದರ ರೂಪದಲ್ಲಿದೆ. ಆತನ ಆ ಸಾಹಿತ್ಯ ಸಂಸೃಷ್ಟಿಯಲ್ಲಿದೆ.

ನಿರಂಜನ ಸರಂಜನಗಳಿಗೂ ನಿರಾಭಾರಿ ಸೌಭಾರಿಗಳಿಗೂ ಬೀಜಾಂಕುರ ನ್ಯಾಯವಿದೆ. ಅವು ಒಂದನ್ನು ಬಿಟ್ಟು ಒಂದಿರದು, ವ್ಯಕ್ತಾವ್ಯಕ್ತ ರೂಪದಲ್ಲಿ ಇದ್ದೆ ಇರುತ್ತವೆ. ಸರಂಜನದಂತೆ ನಿರಂಜನ ವಸ್ತು ತೋರದು, ಅಡಗದು. ಅದು ನಿತ್ಯ ಸತ್ಯ. ಕೊಡ ಆಗದ ಮುನ್ನ, ಆದ ಬಳಿಕ, ಆಗಿ ಒಡೆದು ಹೋದ ಬಳಿಕ ಕೂಡ ಮಣ್ಣು ಇದ್ದೇ ಇರುತ್ತದೆ. ಈ ಬಗೆಯಲ್ಲಿ ಅಗೋಚರವಾದ ಆ ನಿರಂಜನ ವಸ್ತು ತ್ರೈಕಾಲಿಕ ಸಿದ್ಧವಾಗಿ ಇದ್ದೇ ಇರುತ್ತದೆ. ಅದಿಲ್ಲದೆ ಈ ರಂಜನ ವಸ್ತುಗಳಿರವು. ರಂಜಿಸುವ ಮರಕ್ಕೆ ರಂಜಿಸದ ಬೀಜವಿರುವಂತೆ ಇರುತ್ತದೆ.

ನಿರಂಜನನಿಗೆ ನಿಜಕ್ಕೂ ಯಾವ ಬಗೆಯ ವಿಕಾರಗಳಿರವು. ಆತನ ತನು ಶುಚಿ, ಮನ ಶುಚಿ, ಭಾವ ಶುಚಿ, ಆತ್ಮ ಪ್ರಸನ್ನಾತ್ಮನು. ಆತನು

ಏನನ್ನೂ ಬಯಸನು; ಬೇವಸಗೊಳ್ಳನು. "ವಿಕಾರಹೇತೌ ಸತಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿ ತ ಏವ ಧೀರಾಃ" ಎಂಬ ಕವಿ ಕಾಳಿದಾಸೋಕ್ತಿಯಂತೆ ಇರುತ್ತಾನೆ. ಎಂತಹ ಲೋಕೋತ್ತರ ಸುಂದರ ವಸ್ತು ಎದುರಿಗಿದ್ದರೂ ಅದನ್ನು ನೋಡಿ ಕಾಮಿಸನು. ತನ್ನ ಮೇಲೆ ಯಾರೇ ಮುನಿದರೂ ತಾನು ಮುನಿಯನು ಲೋಭ-ಮೋಹಗಳಿಗೆ ಮದ-ಮತ್ಸರಗಳಿಗೆ ಆತನಲ್ಲಿ ಇಂಬಿರದು. ಮನಮೋಹಕ ಸಂಗೀತವನ್ನು ಕೇಳಿದರೂ ಮನವಿಕಾರಕ್ಕೊಳಗಾಗನು. ರುಚಿಗೆಳಸನು. ಸ್ಪರ್ಶ ಸುಖವನ್ನು ಕಾಂಕ್ಷಿಸನು. ಶಿವವಲ್ಲದ್ದನ್ನು ಏನನ್ನೂ ಮಾಡನು, ನೋಡನು, ಮೂಸನು, ಮುಟ್ಟನು. ಲಾಭ–ನಷ್ಟಗಳಿಗೆ ಹಿಗ್ಗನು, ತಗ್ಗನು. ತನ್ನೊಳಗೆ ತಾನು ಸಂತುಷ್ಟನಾಗಿರುವನು. ಯಾವಾಗಲೂ ವಿಶ್ವ ಶ್ರೇಯಸ್ಸನ್ನೇ ಕೋರುವನು. ಆತನಿಗೆ ಬಿಸಿಲು ಬೆಳದಿಂಗಳು ಒಂದೆ! ಚಳಿ ಮಳೆ ಒಂದೆ! ಕಹಿ ಸಿಹಿ ಒಂದೆ! ರೂಪ ವಿರೂಪ ಒಂದೆ! ಆತನು ಎಡರುಗಳಿಗೆ ಎದೆಗೆಡನು; ಸಾವಿಗೆ ಅಂಜನು. ಆತನಿಗೆ ಭವವಿಲ್ಲ; ಭಯವಿಲ್ಲ. ಸಹಾನುಭೂತಿ–ಸಮಭಾವವುಳ್ಳವನು. ದೀನ ದಲಿತ ಬಂಧುಃ ದಯಾರಸ ಸಿಂಧು. ಆತ ನಿತ್ಯ ಪರಿಶುದ್ಧ; ಸತ್ಯಶುದ್ಧ. ಆತನು ಪಾಪಿಗಳನ್ನು ಪುನೀತರನ್ನಾಗಿಸುತ್ತಾನೆ; ಕೋಪಿಗಳನ್ನು ಪ್ರಶಾಂತರನ್ನಾಗಿಸುತ್ತಾನೆ. ಎಲ್ಲರನ್ನೂ ತನ್ನಂತೆ ನೋಡಬಲ್ಲನು. ಆತನು ಜೀವನ್ಮುಕ್ತನು; ಪರಮಾರ್ಥಯುಕ್ತನು. ಪ್ರವೃತ್ತಿ ನಿವೃತ್ತಿಗಳ ಪ್ರವಾಹವನ್ನು ದಾಟಿ ಪರಮೋದಾತ್ತವಾದ ನಿಷ್ಪತ್ತಿಯ ನೆಲೆಗೆ ನಿಲುಕಿದಾತನು. ಮಾನವ ಜೀವಿತಕ್ಕೆ ಹತ್ತಿರದವನಾದರೂ ಮಹಾನುಭಾವ ಜೀವನ ನಿರ್ವಹಣ ನಿಪುಣನು. ಮಾನವೋದ್ಧರಣ ಮಹಾ ಮಣಿಹ ಮಂಡಿತನು.

## ನಿರಾಳ– ನಿರಾಲಂಬ

ನಿರಂಜನತ್ವಕ್ಕೆ ಇವೆರಡೂ ಮೂಲ ಜೀವಾಳ. ನಿಶ್ಚಿಂತ ಮನಸ್ಸು, ಪ್ರಶಾಂತ ಮನಸ್ಸು, ಆಗಸದಂತೆ ಪರಿಶುದ್ಧ ಮನಸ್ಸು, ನಿರಾಯಾಸ ಮನಸ್ಸು ಇವಿರುವಲ್ಲಿ ನಿರಾಳತ್ವವಿರುತ್ತದೆ. ನಿರಾಳತ್ವವಿರುವಲ್ಲಿ ನಿರಂಜನತ್ವವಿರುತ್ತದೆ. ಅಂತೆಯೇ ನಿರಾಲಂಬ ಸ್ಥಿತಿ. ಆಶ್ರಯ ಅಥವಾ ಆಧಾರದ ಹಂಗಿಲ್ಲದ ಸ್ಥಿತಿ ನಿರಾಲಂಬ ಸ್ಥಿತಿ. ರಂಜನದ ಆಲಂಬವಿಲ್ಲದ್ದು ನಿರಾಲಂಬ. ರಂಜನದ ಆವಿಲ (ಕಲಕು-ಬೇನೆ) ವಿಲ್ಲದ್ದು ನಿರಾಳ. ನಿರಾಲಂಬತೆ ಅಳವಡುವುದು ಅಷ್ಟೇನು ಸುಲಭವಲ್ಲ. ಇವು ಅಳವಡದೆ ನಿರಂಜನತ್ವ ನಿಯುಕ್ತವಾಗದು. ನಿರಂಗ, ನಿರಹಂಕಾರ, ನಿರಭಿಮಾನಗಳು ಮೈಗೂಡಿದಲ್ಲಿ ನಿರಂಜನತ್ವ ನೆಲಸಿರುತ್ತದೆ. ಇದು ನಿರಾಕೃತವಲ್ಲ; ಆದೇಷ್ವಾದದೂ ನಿರೀಕ್ಷಿತ. ಇವೆಲ್ಲವನ್ನೂ ಒಳಗೊಂಡ ನಿರಂಜನತೆ ನಿರತಿಶಯವಾದುದು; ನಿರತ್ಯಯವಾದುದು; ನಿರರ್ಗಳವಾದುದು.

ತೋಂಟದ ಸಿದ್ಧಲಿಂಗಯತಿ ಇವೆರಡರನ್ನು ನಿರಾಯಾಸವಾಗಿ ಸಾಧಿಸಿದ್ದರು. ಆವರ ವಚನಗಳನ್ನು ಓದಿದರೆ ನಮ್ಮೀ ಮಾತು ನಿಚ್ಚಳವಾಗಿ ನಿದರ್ಶನಕ್ಕೆ ಬರುತ್ತದೆ. ಸಿದ್ಧಲಿಂಗಯತಿ ನಿರತಿಶಯ ನಿರಂಜನ ಸಿದ್ಧ; ನಿರಾಭಾರಿ ಪ್ರಸಿದ್ಧ.

ಭವ್ಯವಾದ ನಿರಂಜನ ಭವನಕ್ಕೆ ಬುನಾದಿಯನ್ನು ಹಾಕಿದವರು ಮಾಯಾ ಕೋಲಾಹಲಿಯಾದ ಅಲ್ಲಮ ಪ್ರಭುವಾದರೆ ಹೊಂಗಳಸವನ್ನಿತ್ತವರು ತೋಂಟದ ಸಿದ್ಧಲಿಂಗೇಶ್ವರರು. ಮುನ್ನೂರು ವರುಷಗಳ ಒಳಿಕ ಮತ್ತೆ ವಿರತಿಯ ನಿರಂಜನತೆಯ ಬಾವುಟವನ್ನು ಬಾನೆತ್ತರಕ್ಕೆ ಬಿತ್ತರವಾಗಿ ಹಾರಿಸಿದರು. ಅದಕ್ಕೆ ಪ್ರಭುವಿನಿಂದ ಭವಿತವ್ಯವೊದಗಿ ಬಂದಿದ್ದರೆ ಯತಿಯಿಂದ ಭದ್ರವಾದ ಭಾಗ್ಯವೊದಗಿತು. ಭಾವ್ಯ ವಾದ ಭಾಜನತೆಯೊದಗಿತು.

ಅಷ್ಟೇ ಅಲ್ಲ ಶ್ರೀ ಸಿದ್ಧಲಿಂಗಯತಿ ಶೂನ್ಯ ತತ್ತ್ವದ ಪರಿಪೂರ್ಣವೂ ಅಖಂಡವೂ ಆದ ಮೂಲಭೂತ ಸಿದ್ಧಾಂತವನ್ನು ವೇದಾಂತವನ್ನು ಕಂಡುಕೊಂಡನು. ಸಾಭಾರಿ-ನಿರಾಭಾರಿ ಸಮನ್ವಯಾಚಾರ್ಯನಾಗಿ ಪರಿಶೋಭಿಸಿದನು. ನೂರೊಂದು ನಿರಂಜನರ ಪರಮ ಪ್ರಭುವಾದನು, ನಿರುಪಮ ನಿಯೋಗಿಯಾದನು. ಆತನ ನಿರ್ಣೀತ ನಿರುಕ್ತಿ ನಿರ್ಝರಿಣಿಯಾಗಿ ಹರಿದು ಕನ್ನಡವನ್ನು ಕಂಗೊಳಿಸಿದೆ. ಷಟ್‌ಸ್ಥಲ ಸಿದ್ಧಾಂತ ಮೇರುವನ್ನು ತೋರಿದೆ. ನಿಜವಾಗಿಯೂ ನಿರೂಪಿಸುವು ದಾದರೆ ಶ್ರೀ ಸಿದ್ಧಲಿಂಗಯತಿಯು ಶರೀರವಾಂತ ನಿರಂಜನ ನಿಲಿಂಪವಾಗಿ ನಾಡಿನಲ್ಲಿ ನಿಸ್ಸೀಮವಾಗಿ ಸುಳಿದನು. ನಿರಂಜನದ ನಿಜಚೇತನ ಮೂರ್ತಿ ಸಿದ್ಧಲಿಂಗಯತಿ ! ಆ ಪ್ರಭೆ ಆ ಪ್ರತಿಭೆ ಮತ್ತಿಂದು ಈ ಗಡುಗಿನ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದಲ್ಲಿ ಮೂಡಿದೆ. ಮಠಾಧಿಪತಿಯಾಗಿ ಈ ಶ್ರೀ ಸಿದ್ಧರಾಮ ಆಕೃತಿ ! ಆ ಸಿದ್ಧಲಿಂಗಯತಿಯೇ ಈ ಸಿದ್ಧರಾಮ ಸಾಹಿತಿಯಾಗಿ !! ಆ ನಿರತಿಶಯ ನಿರಂಜನ ಪ್ರತಿಭೆಯನ್ನು ಇಂದಿನ ನವಸಾಹಿತ್ಯದಲ್ಲಿ ನವನವೋನ್ಮೇಷಶಾಲಿಯಾಗಿ ರಂಜಿಸುವ ರಮ್ಯ ಗಮ್ಯ ಜ್ಯೋತಿಯಾಗಿ !!!

## ನಿರಂಜನ

— ಶಂ. ಗು. ಬಿರಾದಾರ

ತೋಂಟದಾರ್ಯ ಮಠದ ಪೀಠ-
 ಕಿದೋ ಮೆರಗು ಬಂದಿದೆ
ಸಿದ್ಧಲಿಂಗ ಯತಿಗಳಿಂದ
 ಹೊಸತು ಜೀವ ತುಂಬಿದೆ
ಬೆಳಕು ಬೆಳಕು ಮಹಾ ಬೆಳಕಿ-
 ನರುಣ ಕಿರಣ ಸೂಸಿದೆ
ಧರ್ಮತತ್ವ ಸುಸಂಸ್ಕೃತಿಯು
 ಕಲೆಯಗಾಳಿ ಬೀಸಿದೆ
ಹಳತು ಹೊಸತು ಸಂಪ್ರದಾಯ
 ನವ್ಯದೆಂಕ ಭಾವನಾ
ಅಂದು ಇಂದು ಹೊಂದಿಕೊಂಡು
 ಮುಂದುವರೆವ ಚೇತನಾ
ಸರಸವಾಣಿ ವರದ ಪಾಣಿ
 ನೈಜಗುರು ನಿರಂಜನ
ಶುಭೋದಯಕೆ ನಾಂದಿಹಾಡಿ
 ಇದೋ ನಿಮಗೆ ವಂದನ.

# ತೊಳಗಿಬೆಳಗುವ ತೋಂಟದಾರ್ಯಮಠ

— ಪಂ. ಕಲ್ಲೂರು ಸಂಗಣ್ಣ

"....ಬಸವ ಮೊದಲಾದ ಪ್ರಮಥರೆಲ್ಲರೂ
ಪ್ರಸಾದವ ಎನ್ನಲ್ಲಿ ಸಂಬಂಧಿಸಿ
ನಿನ್ನ ಕೃಪಾಪ್ರಸಾದವ ಎನ್ನಲ್ಲಿ ಮೂರ್ತಿಗೊಳಿಸಿ
ನೀನು ಎನ್ನ ಪ್ರಮಥರು ಎಲ್ಲ ಆಜ್ಞಾಪಿಸಿ
ಮರ್ತ್ಯಕ್ಕೆ ಕಳುಹಿದಿರಾಗಿ
ಕಳುಹಿದ ಭೇದವ ಶಿವಜ್ಞಾನೋದಯದಿಂದ ಅರಿದು
ಸಿದ್ಧಲಿಂಗನೆಂಬ ನಾಮ
ಎನಗೆ ನಿನ್ನಿಂದ ಬಂದಿತ್ತೆಂಬುದ ಅರಿದೆನು...."

— ತೋಂಟದ ಸಿದ್ಧಲಿಂಗರು

**ಸಿದ್ಧಲಿಂಗಯತಿ : ಚರ–ಗುರುತತಿ :**

ವೀರಶೈವ ವಿಶ್ವವಿದ್ಯಾಲಯದಂತಿದ್ದ – ಅಧ್ಯಾತ್ಮ ರಸಾಯನ ಶಾಲೆಯಂತಿದ್ದ – ವಿಶ್ವಧರ್ಮಾನುಷ್ಠಾನ ಕೇಂದ್ರದಂತಿದ್ದ 'ಅನುಭವ ಮಂಟಪ'ದ ಅಧ್ಯಕ್ಷ–ಅಲ್ಲಮಪ್ರಭುವಿನ್ನ ಪರಂಪರಾಗತ ಶೂನ್ಯ ಸಿಂಹಾಸನದ ಮೇಲೆ ಕುಳಿತು, ಎಡೆಯೂರು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಶಿವಾನುಭವ ಶಾಸ್ತ್ರ ಸಂಪಾದನಾ ಸಂಪ್ರದಾಯದ ಪುರಸ್ಕರ್ತರಾದರು; ವಚನ ವಾಙ್ಮಯ ರಚನೆಯ

ದ್ವಿತೀಯ ಘಟ್ಟಕ್ಕೆ ಆದ್ಯರಾದರು; ಗುರು ವಿರಕ್ತ ಪರಂಪರೆಯ ಪುನರುತ್ಥಾಪಕರಾದರು; ವಿರಕ್ತಮಠ ಸಂಸ್ಥಾಪನಾ ಕಾರ್ಯಕ್ಕೆ ಕಾರಣ ಪುರುಷರಾದರು; ವೀರಶೈವ ಸಿದ್ಧಾಂತವನ್ನು ಶಿವಾದ್ವೈತವೆಂದು ಎತ್ತಿಹಿಡಿಯುವಲ್ಲಿ – ಶಿವಯೋಗವನ್ನು 'ರಾಜಶಿವಯೋಗ'ವೆಂದು ಹೆಸರಿಸುವಲ್ಲಿ ಪ್ರಪ್ರಥಮ ನಿರ್ದೇಶಕರಾದರು; ಹೆಚ್ಚೇನು? ನಿರಂಜನ ನಿರಾಭಾರ ಜಂಗಮ ತತ್ತ್ವಪ್ರಚಾರದ ಪ್ರತಿಷ್ಠಾಪಕರಾದರು. ಸಿದ್ಧಲಿಂಗರು ಬಸವಾದಿ ಪ್ರಮಥರ ಕೃಪಾ ಪ್ರಸಾದವಿಡಿದು ಅವತರಿಸಿ; ಹದಿನೈದನೆಯ ಶತಮಾನದ ಉತ್ತರಾರ್ಧದಲ್ಲಿ ಮತ್ತೆ ಧಾರ್ಮಿಕ ಮಹಾ ಕ್ರಾಂತಿಯನ್ನು ಹೂಡಿ, ತಮ್ಮ ಗರಡಿಯಲ್ಲಿ ಅಸಂಖ್ಯಾತ ಗಣಾಧೀಶ್ವರರನ್ನೂ, ವಿರಕ್ತ ಪುಂಗವರನ್ನೂ ಹಾಗೂ ಸಮರ್ಥ ಗುರುವರೇಣ್ಯರನ್ನೂ ಸಿದ್ಧಪಡಿಸಿ, ಅವರನ್ನೆಲ್ಲ ನಾಡಿನ ತುಂಬ ಸಮಾಜ ಪುನರುಜ್ಜೀವನ ಸೇವೆಗೆ ಹಚ್ಚಿದರು; ಸಿದ್ಧಲಿಂಗರು ಅಲ್ಲಮ ಪ್ರಭುಗಳಂತೆ 'ಚರಕುಲ ಸಾರ್ವಭೌಮ'ರಾಗಿದ್ದುದನ್ನೂ, ಚನ್ನಬಸವಣ್ಣನವರಂತೆ 'ಷಟ್‌ಸ್ಥಲ ಜ್ಞಾನ ಚಕ್ರವರ್ತಿ'ಗಳಾಗಿದ್ದುದನ್ನೂ ಮತ್ತು ಬಸವಣ್ಣನವರಂತೆ 'ವೀರಶೈವ ನಿರ್ಣಯ ಪರಮಾವತಾರ'ರಾಗಿದ್ದುದನ್ನೂ ಮಹಾಜನರು ಮೆಚ್ಚಿದರು. ಆಗ ಹಂಪೆಯಲ್ಲೊಂದು ಗುರುಕುಲ, ಎಡೆಯೂರಲ್ಲೊಂದು ಗುರುಕುಲ ಇದ್ದುವು: ಮೊದಲನೆಯದನ್ನು ನೂರೊಂದು ವಿರಕ್ತರ ಸಹಾಯದಿಂದ ಲಕ್ಕಣ ದಂಡೇಶರು ನೋಡಿಕೊಂಡು ಹೋಗುತ್ತಿದ್ದರು; ಎರಡನೆಯದನ್ನು ಪ್ರಧಾನ ಗುರು – ವಿರಕ್ತರು ಸಿದ್ಧಲಿಂಗರ ಮಾರ್ಗದರ್ಶನದಲ್ಲಿ ನಿರ್ವಹಿಸಿಕೊಂಡು ಹೋಗುತ್ತಿದ್ದರು. ಮುಖ್ಯವಾಗಿ, ಸಿದ್ಧಲಿಂಗರು ಪರಿಸ್ಥಿತಿಗೆ ತಕ್ಕಂತೆ. ಷಟ್‌ಸ್ಥಲಾಂತರ್ಗತ ಏಕೋತ್ತರ ಶತಸ್ಥಲ ಕ್ರಮವನ್ನು ಪುನಃ ಪರಿಶೀಲಿಸಿ ಪರಾಮರ್ಶೆಗೊಳಪಡಿಸಿ ಪರಿಶುದ್ಧ ಪರಿಷ್ಕಾರದ ಮೇಲೆ ಷಟ್‌ಸ್ಥಲಜ್ಞಾನ ಸಾರಾಮೃತವನ್ನು ಹರಿಸಿದರು; ಅದನ್ನು ಅನುಭಾವ ಶಾಸ್ತ್ರದ ರಸ ಘಟ್ಟಿಯನ್ನಾಗಿ ಮಾಡಿ, ಅಮರ ಸಾಹಿತ್ಯ ಕ್ಷೇತ್ರದಲ್ಲಿ ಅಚ್ಚಳಿಯದಂತೆ ಇರಿಸಿದರು. ಇದಲ್ಲದೆ, ಸಿದ್ಧಲಿಂಗರು ತಮ್ಮ ಲೋಕಕಲ್ಯಾಣ ಸಂಚಾರದಲ್ಲಿ ಹಲವಾರು ಶೈವ ಮಠಗಳನ್ನೂ, ಶರಣಸ್ಥಲ ಮಠಗಳನ್ನೂ 'ವಿರಕ್ತಮಠ'ಗಳಾಗಿ ಮುಂದುವರಿಯುವಂತೆ ಪರಿವರ್ತಿಸಿದರು. ಮಾರ್ಪಾಡು ಬಾಳಿನ ಏರ್ಪಾಡು ಅಲ್ಲವೆ ? ಅವರು ಲೆಕ್ಕಿಲ್ಲದಷ್ಟು ಹೊಸ ವಿರಕ್ತಮಠಗಳನ್ನು ನಾಡಿನ ಮೂಲೆ ಮೂಲೆಯಲ್ಲಿ ನೆಲೆಗೊಳಿಸಿ, ಅವುಗಳಿಗೆಲ್ಲ ತಮ್ಮಲ್ಲಿಯ ಚರಮೂರ್ತಿಗಳು ನೇಮಕಗೊಳ್ಳುವಂತೆ ತಕ್ಕ ವ್ಯವಸ್ಥೆ ಮಾಡಿದರು. ಇದೊಂದು ಅವರ ಜೀವನದಲ್ಲಿಯ ಮಹಾ ಘಟನೆಯೆನ್ನಬಹುದು.

ಸಿದ್ಧಲಿಂಗರಿಗೆ ಬಹುಜನ ವಿಮರ್ಶಕರು 'ದ್ವಿತೀಯ ಅಲ್ಲಮ'ರೆಂದು ಕರೆಯುತ್ತಾರೆ; ಅವರ ಶಿಷ್ಯೋತ್ತಮ – ಘನಲಿಂಗಿದೇವರು 'ತೋಂಟದ ಅಲ್ಲಮ'ರೆಂದು ಸಂಬೋಧಿಸುತ್ತಾರೆ. ಸಿದ್ಧಲಿಂಗರಿಗೆ ಬಸವಾದಿ ಶರಣರ ಮೇಲೆ ಅಚಲ

ಶ್ರದ್ಧೆಯಿದ್ದರೂ, ಅವರು ಶರಣ ಸಂಪ್ರದಾಯವನ್ನು ಇದ್ದಕ್ಕಿದ್ದಂತೆ ಅನುಸರಿಸಿದ ರೆಂದು ಹೇಳಲಿಕ್ಕೆ ಬರುವುದಿಲ್ಲ. ಅಂದಿನ ಸ್ಥಿತಿ-ಗತಿಗೆ ಚನ್ನಾಗಿ ಒಗ್ಗುವಂತೆ ಅವರು ಅದರಲ್ಲಿ ಕೆಲವೊಂದು ಆವಶ್ಯಕ ತಿದ್ದುಪಡೆಗಳನ್ನು ರೂಪಿಸಿ, ಅಲ್ಲಮಪ್ರಭು ಸಂಪ್ರದಾಯಕ್ಕೆ ಇನ್ನಷ್ಟು ಮೆರಗು ಬರುವಂತೆ – ಬಸವ ತತ್ವಕ್ಕೆ ಮತ್ತಷ್ಟು ಕಳೆ ಬರುವಂತೆ ಸಾಹಸಬಟ್ಟರು; ಇಷ್ಟೇ ಅಲ್ಲ, ಕರ್ನಾಟಕಾಂಧ್ರ – ಮಹಾರಾಷ್ಟ್ರ – ತಮಿಳ ನಾಡುಗಳಲ್ಲಿ – ಮತ್ತದರಲ್ಲಿ ಕರ್ನಾಟಕ ಧಾರ್ಮಿಕ ರಂಗದಲ್ಲಿ – ತಮ್ಮದೇ ಆದ ನವೀನ ಸಂಪ್ರದಾಯ ಲತೆ ಕುಡಿಯೊಡೆದು ನಿಲ್ಲುವಂತೆ ಹೆಣಗಾಡಿದರು. ಅವರ ತರುವಾಯ 'ಸಿದ್ಧಲಿಂಗ ಸಂಪ್ರದಾಯ' ನಿಜಕ್ಕೂ ನಾನಾ ಮುಖದಲ್ಲಿ ತಲೆಯೆತ್ತಿ ನಿಂತಿತು. ಅದಕ್ಕೆ 'ತೋಂಟದಾರ್ಯ ಪರಂಪರೆ' ಎಂತಲೂ ಕರೆಯ ಬಹುದು. ತೋಂಟದ ಸಿದ್ಧಲಿಂಗ ಯತಿಗಳ ಶಿಷ್ಯ ಪ್ರಶಿಷ್ಯ ಪರಂಪರೆ ನಾಡಿನಲ್ಲಿ ಎಲ್ಲೆಲ್ಲಿಯೂ ಹಬ್ಬಿಕೊಂಡಿದೆ; ಆದರೆ ಅದು ಅನೇಕ ಶಾಖೋಪಶಾಖೆಗಳನ್ನು ತಬ್ಬಿಕೊಂಡಿದೆ. ಒಂದೆಡೆ ಸಿದ್ಧಲಿಂಗರ ಹದಿಮೂರು ಪ್ರಪ್ರಥಮ ಶಿಷ್ಯ ಶಿಖಾಮಣಿ ಗಳಿಂದ ಗುರು-ವಿರಕ್ತ-ನಿರಂಜನ ಸಂಪ್ರದಾಯ ಸಾಗರ ಹರಿದಿದೆ; ಇನ್ನೊಂಡೆಡೆ, ಸಿದ್ಧಲಿಂಗರ ಎಂಟು ಮೊತ್ತ ಮೊದಲನೆಯ ಶಿಷ್ಯ ಶಿರೋಮಣಿಗಳಿಂದ ಗುರು-ವಿರಕ್ತರ ಪರಂಪರಾ ಸುಧೆ ಸುರಿದಿದೆ. ಮತ್ತೊಂದೆಡೆ, ಬೋಳ ಬಸವರಿಂದ ಪ್ರಾರಂಭವಾಗಿ ಏಳೆಂಟು ಸ್ವತಂತ್ರ ಗುರು–ವಿರಕ್ತ–ನಿರಂಜನ ಪೀಠಗಳು ಎಂದೋ ಸ್ಥಾಪನೆಗೊಂಡಿವೆ; ಮಗುದೊಂಡೆಡೆ, ಬೋಳ ಬಸವರಿಂದೀಚೆಗೆ ನಾಲ್ಕನೆಯ ತಲೆಯವರಾದ ಹರಿಹರಸ್ವಾಮಿಗಳ ಕಾಲದಲ್ಲಿ ಚೀಲಾಳ ಸಮಯವೂ ಹಾಗು ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿಗಳ ಶಿಷ್ಯವರ್ಯರಿಬ್ಬರಿಂದ ಮುರುಘ, ಕುಮಾರ ಸಮಯಗಳೂ ವ್ಯಾಪನೆಗೊಂಡಿವೆ. ಏನೇ ಆಗಲಿ, ಡಂಬಳ-ಗದಗ ನಿರಂಜನ ಜಗದ್ಗುರು ತೋಂಟದಾರ್ಯ ಪೀಠ ಮಾತ್ರ ಕರ್ತೃ–ಎಡೆಯೂರು ಸಿದ್ಧಲಿಂಗರ ನಿರಂಜನ ಜಂಗಮಾನ್ವಯದಲ್ಲಿಯೇ ನೇರವಾಗಿ ನಿಂದು ಹೆಸರು ಪಡೆದಿದೆ; ಸಿದ್ಧ ಲಿಂಗರ ಕಾಲದಿಂದ ಇಂದಿನವರೆಗೂ ಅವ್ಯಾಹತವಾಗಿ ಮುನ್ನಡೆದಿದೆ.

## ಜಗದ್ಗುರು ಪೀಠ: ಜನೋದ್ಧಾರ ಪಾಠ:

ತೋಂಟದ ಸಿದ್ಧಲಿಂಗರು ತಮ್ಮ ಗುರು ವಂಶಾವಳಿಯನ್ನು ತಾವೇ ಹೇಳಿ ರುವರೇನೋ ನಿಜ; ಆ ವಂಶಾವಳಿಯಿಂದ ಅವರು ಹದಿನಾರನೆಯವರಾಗುವದೂ ನಿಜ. ಆದರೆ ಶೂನ್ಯ ಸಿಂಹಾಸನಾರೋಹಣ ದೃಷ್ಟಿಯಿಂದ ತೂಗಿ ನೋಡಿದಲ್ಲಿ; ಸಿದ್ಧಲಿಂಗರು ಅನಾದಿ ನಿರಂಜನ ಜಂಗಮ ಸ್ವರೂಪಿ– ಅಲ್ಲಮಪ್ರಭುಗಳ ಪರಂಪರೆಗೆ ಸೇರಿದವರಾಗುವರು. ಆ ಪ್ರಭು ವಂಶಾವಳಿಯಿಂದಾಗಿ, ಸಿದ್ಧಲಿಂಗರು ಹತ್ತೊಂಬತ್ತ ನೆಯರಾಗುವಂತೆ, ಸಿದ್ಧಲಿಂಗ ಸಂಪ್ರದಾಯವಿಡಿದು ಲೆಕ್ಕ ಹಾಕಿದರೆ, 'ನಮ್ಮ

ಮಠ'ದ ನೂತನ ಜಗದ್ಗುರುಗಳೂ ಹತ್ತೊಂಬತ್ತನೆಯವರಾಗುವರು. ಇಲ್ಲಿ ನಾವು ಇಡಿ ವಂಶಾವಳಿಯನ್ನು ಕೊಡಬಯಸುವುದಿಲ್ಲ. ಏಕೆಂದರೆ, ಎಡೆಯೂರು ಸಿದ್ಧಲಿಂಗರ ನಂತರ ಕೇವಲ ಕ್ಷೇತ್ರವಾಗಿ ತೋಂಟದಾರ್ಯ ಸಿಂಹಾಸನದ ಅಸ್ತಿತ್ವವನ್ನು ಕಳೆದುಕೊಂಡಿದೆ. ಬೋಳ ಬಸವರಿಂದ ಕೌದೀ ಮಹಾಂತಸ್ವಾಮಿಗಳವರೆಗಿನ ಮಹಾಸ್ವಾಮಿಗಳು ಎಡೆಯೂರಲ್ಲಿ ನೆಲೆ ನಿಂತು ಜಗದ್ಗುರು ಪೀಠಾಧಿಪತಿಗಳಂತೆ ತಂತಮ್ಮ ಮಣಿಹವನ್ನು ಪೂರೈಸಲಿಲ್ಲ. ಅವರೆಲ್ಲರೂ ಅತ್ತಿತ್ತ ಸಂಚರಿಸುತ್ತಲೇ ಲೋಕ ಸಂಗ್ರಹ ಕಾರ್ಯಗಳನ್ನು ಮಾಡಿ, ಕೊನೆಗೆ ತಂತಮ್ಮ ಇಚ್ಛಿತ ಸ್ಥಳಗಳಲ್ಲಿ ಸಮಾಧಿಸ್ಥರಾದರು. **ಡಂಬಳ-ಗದಗ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ** ಇತಿಹಾಸ ಅಧಿಕೃತವಾಗಿ ಆರಂಭವಾಗುವುದು ಶ್ರೀ ಅರ್ಧನಾರೀಶ್ವರ ಸ್ವಾಮಿಗಳ ಕಾಲದಿಂದ. ಅವರಿಗಿಂತ ಮುಂಚಿನ ಐತಿಹ್ಯಕ್ಕೆ ಅಷ್ಟು ಸಮರ್ಪಕ ಆಧಾರಸಾಮಗ್ರಿಯಿರದಿದ್ದರೂ, ಡಂಬಳ ಜಗದ್ಗುರು ಪೀಠೋದಯದ ಪೂರ್ವ ಸಿದ್ಧತೆಯೆಂಬಂತೆ ಗದಗ, ಅಣ್ಣಿಗೇರಿಗಳಲ್ಲಿ ಕೆಲವು 'ಕುರುಹು'ಗಳು ಸಂಭವಿಸಿದುವೆಂಬುದನ್ನು ಮಾತ್ರ ಅಲ್ಲಗಳೆಯಲಿಕ್ಕಾಗುವುದಿಲ್ಲ. ಈ ಸಂಸ್ಥಾನ ಮಠಕ್ಕೆ ಕರ್ತೃ ಗದ್ದುಗೆಯೆಂದರೆ ಶ್ರೀ ಮದರ್ಧನಾರೀಶ್ವರ ಶಿವಯೋಗಿಗಳದೇ; ಇನ್ನು ಕರ್ತೃಸ್ಥಾನವೆಂದರೆ ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರ ಜಾಗ್ರತ ಸಮಾಧಿ.

### ಡಂಬಳ–ಗದಗ ಜಗದ್ಗುರು ತೋಂಟದಾರ್ಯ ಪೀಠ
### ನಿರಂಜನ ವಂಶ ಪಟ

| ಅ. ಸಂ. | ಸ್ವಾಮಿಗಳ ಹೆಸರು | ಆಳ್ವಿಕೆಯ ಅವಧಿ ಕ್ರಿ. ಶ. | ಸಮಾಧಿ ಸ್ಥಳ |
|---|---|---|---|
| ೧. | ಶ್ರೀ ಅರ್ಧನಾರೀಶ್ವರ ಸ್ವಾಮಿಗಳು | ೧೬೭೫–೧೭೨೫ (೫೦) | ಡಂಬಳ |
| ೨. | " ನಂದೀಶ್ವರ ಸ್ವಾಮಿಗಳು | ೧೭೨೫–೧೭೭೦ (೪೫) | ಅಣ್ಣಿಗೆರೆ |
| ೩. | " ಉಗ್ಗದ ತೋಂಟದಾರ್ಯ ಸ್ವಾಮಿಗಳು | ೧೭೭೦–೧೭೭೬ (೬) | " |
| ೪. | " ಸದಾಶಿವ ಸ್ವಾಮಿಗಳು | ೧೭೭೬–೧೮೧೧ (೩೫) | ಕೊಪ್ಪಳ |
| ೫. | " ಹಂಪಸಾಗರ ಮಹಾಂತ ಸ್ವಾಮಿಗಳು | ೧೮೧೧–೧೮೪೧ (೩೦) | ಹಂಪಸಾಗರ |
| ೬. | " ವೃದ್ಧ ತೋಂಟದಾರ್ಯ ಸ್ವಾಮಿಗಳು | ೧೮೪೧–೧೮೮೧ (೪೦) | ಗದಗ |
| ೭. | " ಮೃತ್ಯುಂಜಯ ಸ್ವಾಮಿಗಳು | ೧೮೮೧–೧೮೮೪ (೩) | " |
| ೮. | " ಸಿದ್ಧೇಶ್ವರ ಸ್ವಾಮಿಗಳು | ೧೮೮೪–೧೯೨೪ (೪೦) | " |

೯. " ಗುರುಬಸವ ಸ್ವಾಮಿಗಳು ೧೯೩೪-೧೯೬೦ (೩೬) ಗದಗ
೧೦. " ಶಿವಕುಮಾರ ಸ್ವಾಮಿಗಳು ೧೯೬೧-೧೯೭೪ (೧೩) "
೧೧. " ಸಿದ್ಧಲಿಂಗ ಸ್ವಾಮಿಗಳು ೧೯೭೪

ಅಲ್ಲಲ್ಲಿಯ ಕೆಲವು ಉಲ್ಲೇಖಗಳ ಮೇಲಿಂದ– ಈ 'ಪಟ'ದ ಮೇಲಿಂದ ಅಭಿನವ ಸಿದ್ಧಲಿಂಗ– ಶ್ರೀ ಅರ್ಧನಾರೀಶ್ವರರು ಡಂಬಳದಲ್ಲಿ ವಾಸವಾಗಿದ್ದರೆಂಬುದೂ ಪೀಠದ ಸ್ಥಿರತೆಗೆ– ಸಾಂಪತ್ತಿಕ ಭದ್ರತೆಗೆ ಬುನಾದಿ ಹಾಕಿದರೆಂಬುದೂ ಮತ್ತು ರಾಜ-ಮಹಾರಾಜ ಪೂಜಿತರಾಗಿದ್ದರೆಂಬುದೂ ಗೊತ್ತಾಗುತ್ತದೆ; ಅವರ ಉತ್ತರಾಧಿಕಾರಿ– ಶ್ರೀ ನಂದೀಶ್ವರರು ಸ್ವಲ್ಪ ಕಾಲ ಮಾತ್ರ ಡಂಬಳದಲ್ಲಿದ್ದು, ಆ ಮೇಲೆ ಅಣ್ಣಿಗೆರೆಯಲ್ಲಿ ಹೆಚ್ಚಾಗಿ ನೆಲೆಸಿದ್ದರೆಂಬುದೂ, ಅವರ ಕಾಲದಲ್ಲಿಯೇ ಅಲ್ಲಿಯ ಬೃಹನ್ಮಠ ನಿರ್ಮಿತವಾಯಿತೆಂಬುದೂ ಮತ್ತು ಅವರಿಂದ ಪೀಠ ಉತ್ತರೋತ್ತರ ಉನ್ನತಿ ಹೊಂದಿತೆಂಬುದೂ ತಿಳಿಯುತ್ತದೆ. ಹಾಗೂ ಶ್ರೀ ವೃದ್ಧ ತೋಂಟದಾರ್ಯರ ಆಳಿಕೆಯಲ್ಲಿ ಡಂಬಳ– ಅಣ್ಣಿಗೆರೆಗಳ ಸರದಿ ಮುಗಿದು, ಗದುಗು ಮುಂಬರಲು ಕಾರಣವಾಯಿತೆಂಬುದೂ; ಡಂಬಳಕ್ಕೆ ಗದುಗು ಕೂಡಿ ಡಂಬಳ–ಗದಗ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠವಾಯಿತೆಂಬುದೂ ಮತ್ತು ಗದುಗು ಬೃಹನ್ಮಠ ನಿರ್ಮಾಣಗೊಂಡು ಅದೇ ಮುಂದೆಯೂ ಶಾಶ್ವತವಾಗಿ ಪೀಠದ ಮುಖ್ಯ ಕೇಂದ್ರಸ್ಥಳವೆನಿಸಿ, ಎಂದಿಗಿಂತ ಹೆಚ್ಚು ಪ್ರಭಾವವನ್ನು ಗಳಿಸಿತೆಂಬುದೂ ಹೊಳೆಯುತ್ತದೆ. ಇದನ್ನೇ ಡಾ. ಆರ್. ಸಿ. ಹಿರೇಮಠರು ಒಂದೆಡೆ "ಡಂಬಳ, ಅಣ್ಣಿಗೆರೆ, ಗದಗು– ಈ ಮೂರು ಸ್ಥಳಗಳು ತೋಂಟದಾರ್ಯ ಪೀಠದ ಕೇಂದ್ರ ಸ್ಥಳಗಳಾಗಿ ಕ್ರಮೇಣ ಪರಿವರ್ತನ ಹೊಂದುತ್ತವೆ" ಎಂದು ಒಡನುಡಿದಿದ್ದಾರೆ.

**ಗದ್ದುಗೆಯ ಗುಟ್ಟು : ಈ ಮಠದ ಹುಟ್ಟು :**

ಗದುಗಿನ ಕಿಲ್ಲೆಯ ಮೂಡಣ ದಿಸೆಗೆ ಹರಡಿದ್ದ ಹರವಾದ ಅಡವಿ. ಅಡವಿಯಲ್ಲಿ ಒಡೆದು ಕಾಣುತ್ತಿದ್ದ ಬಿದಿರು ಮೆಳೆ. ಮೆಳೆಯ ಆಚೆ ಈಚೆ ಬೆಳೆದಿದ್ದ ಬಿಲ್ವ ಮರದ ಗುಂಪು. ಗುಂಪನ್ನು ಬಳಸಿದ್ದ ಬೇರೆ ಗಿಡಗಂಟೆಯ ಸಾಲು. ಅಲ್ಲಿ ಪ್ರಕೃತಿಯ ಸೊಂಪು ಹಾಸಿದ್ದಿತು; ಸೃಷ್ಟಿಯ ಕಂಪು ಬೀಸಿದ್ದಿತು; ನಿಸರ್ಗದ ಇಂಪು ಪೂಸಿದ್ದಿತು; ವನಶ್ರೀಯ ಪೆಂಪು ಸೂಸಿದ್ದಿತು. ಎಡೆಯೂರು ತೋಂಟದ ಸಿದ್ಧಲಿಂಗರು ತೀರ ಹಿಂದೊಮ್ಮೆ ತಂಗಿ ಲಿಂಗಪೂಜೆ ಮಾಡಿಕೊಂಡು ಹೋದುದರ ನೆನಪೆಂದು ಕಟ್ಟಲಾಗದ್ದ ಸಿದ್ದಪ್ಪನ ಕಟ್ಟೆ. ಕಟ್ಟೆಯ ಬಳಿ ನಿರಂಜನ ರವಿ-ಸಿದ್ಧನ ಛವಿ ತುಂಬಿ ತುಳುಕುತ್ತಿದ್ದ ಗವಿ. ಗವಿಯ ಹಿಂಬದಿ ನೈಋತ್ಯಕ್ಕೆ ಶಿವನ ಒಲುಮೆಯೇ ಗಂಗೆಯಾಗಿ ಹರಿದು ಒಬ್ಬುಳಿಗೊಂಡು ಒಂದೆಡೆ ನಿಂತಂತಿದ್ದ ಚಿಕ್ಕ

ಹೊಂಡ. ಅದೊಂದು ಗುಪ್ತ ಭಕ್ತಿಯ ಸ್ಥಾನ, ಸುಪ್ತ ಶಕ್ತಿಯ ತಾಣ. ಒಟ್ಟಿಗೆ ಅದಷ್ಟು ಸ್ಥಳ ಮಟ್ಟಿಗೆ ಶಿವನ ಪೆಟ್ಟಿಗೆಯ ಹಾಗೆ ಕಂಗೊಳಿಸುತ್ತಿದ್ದಿತು.

ಇಂತಹ ಪ್ರಶಾಂತ ಪ್ರಸನ್ನ ಪ್ರದೇಶಕ್ಕೊಬ್ಬರು ಬಂದರು; ಏನೋ ಒಂದು 'ಸಂದೇಶ'ವನ್ನು ಹೊತ್ತು ತಂದರು; ಅಲ್ಲಿಯ 'ಸಿದ್ಧನ ಗವಿ'ಯಲ್ಲಿಯೇ ನಿಂದರು. ಅವರಿಗೆ ಆ ಗುಹೆ ತಮ್ಮವರದೆಂದೆನಿಸಿರಬೇಕು; ಎಂದಲ್ಲೇ ಅವರು ಅಲ್ಲಲ್ಲಿ ಸುತ್ತಾಡಿ ತಮ್ಮ ಮೆಟ್ಟಿಗೇ ಮರಳಿರಬೇಕು. ಅವರೀಗ ಪರ ಜಂಗಮರು, ಸಮನ್ವಯ ಸಂಗಮರು. ಅವರು ಮಹಂತರು, ಮಹಿಮಾನ್ವಿತರು. ಅವರು ಶಿವಯೋಗ ಪ್ರಭಾ ಪುಂಜರು, ಷಟ್‌ಸ್ಥಲ ವಿದ್ವಲ್ಲತಾ ಕುಂಜರು. ಅವರು ಮಠ-ಮಾನ್ಯ ಸಂಪಾದನೆಯ ಗೊಡವೆಗೆ ಹೋಗದವರು, ಗುರುಲಿಂಗ-ಜಂಗಮರಿಗಲ್ಲದೆ ಮತ್ತಾರಿಗೂ ಬಾಗದವರು. ಅವರಿಗೆ ತಾವಾಯಿತು, ತಮ್ಮ ಗವಿಯಾಯಿತು. ಆಗಿನ ವಾಡಿಕೆಯಂತೆ, ಅವರು ಕರಿಬಸವಪ್ಪ ಅಪ್ಪಂಗಳಾಗಿದ್ದರು; ಕಾಶಿಯ ಕಡೆಯಿಂದ ಈ ಕಡೆ ಬಂದವರಾದುದರಿಂದ ಭಕ್ತಾದಿಗಳ ಬಾಯಲ್ಲಿ ಕಾಶಿ ಕರಿಬಸವಪ್ಪ ಅಪ್ಪನವರಾಗಿದ್ದರು. ಅವರ ಜೀವನದಲ್ಲಿಯ ರಸಗಳಿಗೆಯೊಂದು ಹೀಗಿದೆ:

ಹದಿನಾಲ್ಕನೆಯ ಶತಮಾನದಲ್ಲಿ ಸಪ್ಪಣಾಚಾರ್ಯ ಸೇನಜೋವ ಗದುಗನ್ನು ಆಳುತ್ತಿದ್ದನು. ಹದಿನೈದನೆಯ ಶತಮಾನದಲ್ಲಿ ದೇವರಾಯನೆಂಬವನು ಗದುಗಿನ ದೊರೆಯಾಗಿದ್ದನು. ಇತ್ತೀಚೆಗೆ ಸುಮಾರು ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಆನಂದರಾಯನೆಂಬವನು ಗದುಗಿನ ' ಸುಭೇದಾರ 'ನಾಗಿದ್ದನು. ಆನಂದರಾಯನ ಮುತ್ತಜ್ಜನ ಕಾಲವಾಗಿರಬೇಕು; ಎಂದರೆ ಹದಿನೇಳನೆಯ ಶತಮಾನ ಆರಂಭವಾದ ಹತ್ತು ವರುಷದೊಳಗಿದ್ದಿರಬೇಕು. ಗದುಗಿನ ಆಗಿನ ದೊರೆಗೆ ನಡುವೆ ಕಣ್ಣೇ ಹೋಗಿದ್ದುವು. ಅಲ್ಲಿ ಇಲ್ಲಿ ಎಲ್ಲಿ ತೋರಿಸಿದರೂ-ಹಬ್ಬ ಹರಕೆ ತೀರಿಸಿದರೂ ಕಣ್ಣು ಬರಲಿಲ್ಲ. ತಾನು ಬ್ರಾಹ್ಮಣನಾದರೂ, ಲಿಂಗವಂತ ಸ್ವಾಮಿಗಳೊಂದಿಗೆ ಭಕ್ತಿ ವಿಶ್ವಾಸದಿಂದ ನಡೆದುಕೊಂಡ, ಕಳೆದ ಕಣ್ಣನ್ನು ಪಡೆದುಕೊಂಡ. ಸುಭೇದಾರನ ಹೊರಗಣ್ಣು ತೆರೆದಂತೆ, ಆತನ ಒಳಗಣ್ಣು ಸಹ ತೆರೆಯಿತೇನೋ! ಆ ದೊರೆ ಅಪ್ಪಗಳವರು ಕುಳಿತಲ್ಲಿ ಎದ್ದು ನಿಂತು ಕೈ ಜೋಡಿಸಿ "ಅಪ್ಪನವರೇ, ಇಲ್ಲಿಂದ ನಾಲ್ಕೂ ದಿಕ್ಕಿಗೆ ನನ್ನ ದೃಷ್ಟಿ ಹರಿಯುವವರೆಗಿನ ಭೂಮಿಯನ್ನು ತಮಗೆ ಉಂಬಳಿ ಹಾಕಿ ಕೊಡಬೇಕೆಂದಿರುವೆ; ಇಲ್ಲಿ ತಮಗೊಂದು ' ಮಠ 'ವನ್ನು ಕಟ್ಟಿಸಿಕೊಡಬೇಕೆಂದಿರುವೆ. ಅಪ್ಪಣೆಯಾಗಬೇಕು" ಎಂದು ಬೇಡಿಕೊಂಡ. ಅಪ್ಪನವರಾದರೊ "ಒಂದು ದಿನ ತಡೆ, ದೊಡ್ಡವರು ಬರುವರು. ಅವರಿಗೆ ನೀನು ಕೊಡಬೇಕೆಂದುದನ್ನು ಕೊಡು" ಎಂದಿಷ್ಟೇ ಅಪ್ಪಣೆ ಮಾಡಿದರು.

"ಶ್ರೀ ಜಗದ್ಗುರು ತೋಂಟದಾರ್ಯ ಉಜ್ವಲ ಪರಂಪರೆಯ ಪವಿತ್ರ ಪ್ರವಾಹವು ಗದುಗಿಗೆ ಬರುವಂತೆ ಮಾಡಿದ ಮಹಾ ಶ್ರೇಯಸ್ಸು ಗದುಗಿನ ಮಾನ್ವಿ ಮನೆತನಕ್ಕೆ ಸಲ್ಲುತ್ತದೆ."

— ಲಿಂ. ಕೋಟಿ ತೋಟಪ್ಪ ವಕೀಲರು

ಜಗದ್ಗುರು ತೋಂಟದಾರ್ಯ ಪೀಠ ಡಂಬಳ–ಗದಗುಗಳಲ್ಲಿ ಅಡಿಯಿಡುವ ಮುಂಚೆಯೇ ಅತಿಥಿಗಳಾಗಿ ಆಗಮಿಸುತ್ತಿದ್ದ ಗುರು-ವಿರಕ್ತ-ದೇಶಿಕರ ಪೂಜಾ-ವಸತಿಗೋಸ್ಕರ ಮಾನವಿ (ಮಾನ್ವಿ), ಹೊನ್ನಗುಡಿ ಮನೆತನದವರು 'ಚೌಕಿ' ಗಳನ್ನು ಕಟ್ಟಿಸಿದ್ದುಂಟು. ಶರಣ–ಮಾನ್ವಿ ಅನ್ನದಾನಪ್ಪಣ್ಣನವರು ಶ್ರೀಮದನಾದಿ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗರ ಬಳಿವಿಡಿದು ಬಂದಿದ್ದ ಏಳನೆಯ ಜಗದ್ಗುರುಗಳಾಗಿದ್ದ ಶ್ರೀ ಕಟ್ಟಿಗೆಹಳ್ಳಿ ರಾಚವಟ್ಟ (ರಾಜೋಟಿ) ಸ್ವಾಮಿಗಳನ್ನು ಗದುಗಿಗೆ ವಿಜೃಂಭಣೆಯಿಂದ ಬರಮಾಡಿಕೊಂಡರು; ತಮ್ಮ ಚೌಕಿಯಲ್ಲಿ ಇಳಿಸಿದರು. ಆ ಸುಭೇದಾರನೊಡನೆ ಶ್ರೀ ಕರಿಬಸವಪ್ಪ ಅಪ್ಪಗಳವರೂ ಅಲ್ಲಿಗೆ ನಡೆದರು, ಜಗದ್ಗುರುಗಳ ಪಾದದರ್ಶನ ಪಡೆದರು. ಅನ್ನದಾನಪ್ಪಣ್ಣ ಮೊದಲಾದ ಪ್ರಮುಖ ಸದ್ಭಕ್ತರ ಕೋರಿಕೆಯಂತೆ, ಮಾನ್ವಿ ಚೌಕಿಗೆ ಶ್ರೀ ತೋಂಟದಾರ್ಯ ಮಠವೆಂದು ಗಣಿಸಲಾಯಿತು. ಆ ದೊರೆಯ ಇಚ್ಛೆಯಂತೆ ಆ ಮಠಕ್ಕೆ ಅಷ್ಟು ನೆಲವನ್ನು ದತ್ತಿ–ದಾನವೆಂದು ಎಣಿಸಲಾಯಿತು. ಅದುವೇ 'ಕಣ್ಣಿ ಮಾನ್ಯ'. ತಮ್ಮಿಂದ ಅನುಗ್ರಹ ಹೊಂದಿದ್ದ ಚರಮೂರ್ತಿಗಳಾಗಿದ್ದ 'ತಮ್ಮ ಪ್ರತಿರೂಪದಂತಿದ್ದ' ಅಪ್ಪಂಗಳವರನ್ನೇ ಜಗದ್ಗುರುಗಳು ಮೊಟ್ಟ ಮೊದಲನೆಯ ತೋಂಟದಾರ್ಯ ಮಠಕ್ಕೆ ನೇಮಿಸಿದರು. ಅದು ಇಂದಿಗೂ ರೂಢಿಯಲ್ಲಿ ಮಾನ್ವಿ ಮಠವೆಂದು ಉಳಿದಿದ್ದು, ಸಂಸ್ಥಾನ ಮಠದ ಸ್ವಾಧೀನದಲ್ಲಿದೆ. ಅತ್ತ ರಾಜೋಟಿ ಸ್ವಾಮಿಗಳು ತಮ್ಮ ಉತ್ತರಾಧಿಕಾರಿ ಶ್ರೀ ಕೌದೀ ಮಹಂತಸ್ವಾಮಿಗಳನ್ನೊಳಗೊಂಡು ತಿಳವಳ್ಳಿಯತ್ತ ಪಯಣ ಕೈಕೊಂಡರು. ಇತ್ತ ಅಲ್ಪಾವಧಿಯೊಳಗೆ ಶ್ರೀ ಕರಿಬಸವಪ್ಪ ಅಪ್ಪಂಗಳು ತಮ್ಮ ಗವಿಯಲ್ಲಿ ಇಳಿದು ಜೀವಂತ ಸಮಾಧಿಯನ್ನು ಹೊಂದಿದರು. ಅವರ ಸಮಾಧಿಗೆ ಸುಭೇದಾರ ಸುಂದರ ಶಿಲಾಮಂಟಪವನ್ನು ಕಟ್ಟಿಸಿ ಕೊಟ್ಟರು. ಅವರ ಲಿಂಗೈಕ್ಯ ಮಿತಿ ಚೈತ್ರ ಶುದ್ಧ ಹುಣ್ಣಿವೆಯಂದು ಚಿತ್ತಾ ನಕ್ಷತ್ರವಿದ್ದಾಗ ಪ್ರತಿವರ್ಷ ಜಾತ್ರೆಯನ್ನು ಮಾಡಲಾಗುತ್ತಿತ್ತು. ಅದೇ ಮಿತಿಗೆ ಈಗ ಶ್ರೀ ತೋಂಟಧ ಸ್ವಾಮಿಗಳ ಯಾತ್ರಾ ಮಹೋತ್ಸವ ಜರಗುತ್ತಿದೆ. ಅಪ್ಪಂಗಳವರ ಗದ್ದುಗೆ ಬಹಳ ಜಾಗ್ರತ ಸ್ಥಾನವಾಗಿದೆ. ಬಿದಿರ ಪಳೆಯಲ್ಲಿದ್ದ ಗವಿಯಿದ್ದಲ್ಲಿ ಗದ್ದುಗೆಯಾಯಿತಷ್ಟೆ? ಗದ್ದುಗೆಯ ಹಿಂಭಾಗದಲ್ಲಿ ಬೃಹನ್ಮಠ ಹುಟ್ಟಿತು; ಚಿಕ್ಕ ಹೊಂಡ ಮುಂದೆ ಬಾವಿಯಾಗಿ

ಪರಿಣಮಿಸಿತು. ಹೀಗೆ ಗದುಗಿನಲ್ಲಿ ಹೆಸರಿಗೇನೋ ಶ್ರೀ ತೋಂಟದಾರ್ಯ ಮಠ ಸ್ಥಾಪನೆಯಾಯಿತು. ದೀರ್ಘ ಕಾಲದ ವರೆಗೆ ಅದು ಅಷ್ಟಕ್ಕೆ ಉಳಿಯಿತು. ಕಟ್ಟಿಗೆಹಳ್ಳಿ ಶ್ರೀ ಶ್ರೀಗಳವರ ಮುಂಧೋರಣೆಯಿಂದ ಮುಂಬರುವ ಡಂಬಳ ಜಗದ್ಗುರು ಪೀಠ ಸ್ಥಾಪನಾ ಕಾರ್ಯಕ್ಕೆ ನಾಂದಿಯಾಯಿತು. ಅದೇಕೆ? ಭಾವೀ ಸಿಂಹಾಸನೋದಯದ ಕಟ್ಟಡಕ್ಕೆ ಅವರ ಅಮೃತ ಹಸ್ತದಿಂದ ಅಡಿಗಲ್ಲು ಇರಿಸಲಾಯಿತು. ಅವರ ನಂತರ ಬಂದ ಶ್ರೀ ಕೌದಿ ಮಹಾಂತ ಸ್ವಾಮಿಗಳು ಅಣ್ಣಿಗೇರಿಯಲ್ಲಿ ಕೆಲಕಾಲ ವಾಸಿಸಿ, ಅಲ್ಲಿ ಪೀಠದ ಕುರುಹುಗಳನ್ನೂ ನೆಲೆಗೊಳಿಸಿ ದರೆಂತಲೂ, ಆ ಕುರುಹುಗಳು ಇಂದಿಗೂ ಗೋಚರಿಸುತ್ತಿರುವವೆಂತಲೂ ಡಾ. ಆರ್. ಸಿ. ಹಿರೇಮಠರು ಒಂದು ಕಡೆ ಅಭಿಪ್ರಾಯ ಪಡುತ್ತಾರೆ. ಇದರ ಮೇಲಿಂದ ಕೌದಿ ಶ್ರೀ ಶ್ರೀಗಳವರೇ ಮುಂದಿನ ಸಿಂಹಾಸನೋದಯದ ಅಸ್ತಿ ವಾರವನ್ನು ಮತ್ತಷ್ಟು ಭದ್ರಗೊಳಿಸಿದರೆನ್ನಬಹುದು. ಅದಕ್ಕಾಗಿಯೇ ಅವರು ಕೋರಿಶೆಟ್ಟರೊಂದಿಗೆ ತಮ್ಮ ಉತ್ತರಾಧಿಕಾರಿಗಳಾದ ಶ್ರೀ ಅರ್ಧನಾರೀಶ್ವರರನ್ನು ಡಂಬಳಕ್ಕೆ ಕಳಿಸಿಕೊಟ್ಟದ್ದಿರಬೇಕು.

**ಜ್ಯೋತಿಗಳು ಏಳು : ಪೀಠದ ಹೊಂಬಾಳು :**

೧. **ಶ್ರೀ ಅರ್ಧನಾರೀಶ್ವರ ಸ್ವಾಮಿಗಳು:** ಡಂಬಳ ಸಂಸ್ಥಾನಿಕ ಶ್ರೀನಿವಾಸ (ಶೀನಪ್ಪಯ್ಯ) ನಾಯಕನ ಹಿರೇಬೇನೆಯನ್ನು ಕಳೆದು ದೊರೆಯ ಮನೆತನವನ್ನು ಉದ್ಧರಿಸಿದವರವರು. ಇವರು ಡಂಬಳದಲ್ಲಿ ಸಂಸ್ಥಾಪಿಸಿದ ಜಗದ್ಗುರು ತೋಂಟ ದಾರ್ಯ ಪೀಠಕ್ಕೆ ಆ ದೊರೆ ದತ್ತಿ, ದಾನಗಳನ್ನು ನೀಡಿದನು. ಕೆಳದಿ ರಾಜ ಸೋಮಶೇಖರನಾಯಕ ಶ್ರೀಗಳ ಪಾದಭಕ್ತನಾಗಿ ಅವರಿಗೆ ಕೆಲವು ಹಳ್ಳಿಗಳನ್ನು ಉಂಬಳಿ ಕೊಟ್ಟನಲ್ಲದೆ, ತನ್ನ ಸೀಮೆಯಿಂದ ಹೊರಗೆ ಹೋಗುವ ಯಾಲಕ್ಕಿ, ಮೆಣಸುಗಳ ಸುಂಕದ ಆದಾಯವನ್ನೂ ಶ್ರೀಗಳ ಪಾದಕ್ಕೆ ಸಲ್ಲಿಸಿದನು. ಆತನ ತಮ್ಮ ವೀರಭದ್ರನಾಯಕನ ಪತ್ನಿ ಮಲ್ಲಮಾಂಬೆಗೆ ಶ್ರೀಗಳು ಪುತ್ರಪ್ರದಾನ ಮಾಡಿದರು. ಆ ಮಗುವೆ ಮುಂದೆ ಬೂದಿ ಬಸವಪ್ಪನಾಯಕನಾದನು. ರಾಣಿ ಮಲ್ಲಮಾಂಬೆ ತಾನು ಹೆಣೆದ ರತ್ನಖಚಿತ ಕಂಥೆಯೊಂದನ್ನು ಗುರುಗಳಿಗೆ ಸಮರ್ಪಿಸಿದಳು. ವೀರಭದ್ರನಾಯಕ – ಮಲ್ಲಮಾಂಬೆಯರಿಬ್ಬರೂ ಅರ್ಪಿಸಿದ ಸುವರ್ಣ ಪಾದುಕೆಗಳು ಇಂದಿಗೂ ಸಂಸ್ಥಾನಮಠದಲ್ಲಿರುತ್ತವೆ. ಶ್ರೀಗಳು ಮಹಿಮಾ ಶಾಲಿಗಳಾಗಿದ್ದಂತೆ ಷಟ್‌ಸ್ಥಲಾಚಾರ ನಿಷ್ಠರೂ ಆಗಿದ್ದರು. ಅವರು ತಮ್ಮ ಕೋರಿ ಶೆಟ್ಟರಿಗೆ ಅನ್ನದಾನ ಚರಂತಿಗೆಯನ್ನಿತ್ತು ಮುಂಡರಗಿಗೆ ಕಳಿಸಿದರು. ಅವರ ಜಾತ್ರೆ ಪ್ರತಿವರ್ಷ ಮಾಘ ಶುದ್ಧ ಹುಣ್ಣಿವೆಯಂದು ಹಸ್ತಾ ನಕ್ಷತ್ರ ಕೂಡಿದಾಗ ನಡೆಯುತ್ತದೆ.

೨. ಶ್ರೀ ನಂದೀಶ್ವರ ಸ್ವಾಮಿಗಳು : ಕೆಳದಿ ಅರಸ ಬೂದಿ ಬಸವಪ್ಪ ನಾಯಕ, ಶ್ರೀಗಳ ಪಾದಪೂಜೆಯೊಂದಿಗೆ ಒಂದು ಲಕ್ಷ ತೊಂಬತ್ತಾರು ಸಾವಿರ ಗಣಂಗಳಿಗೆ ತೃಪ್ತಿ ಪಡಿಸಿದನು. ತಮ್ಮೂರು ಈಸೂರು ಹೊಳೆಯ ದಂಡೆಯ ಮೇಲಿನ ಗುಹೆಯಲ್ಲಿ ಶ್ರೀಗಳು ಬಹುದಿನ ತಪಸ್ಸು ಮಾಡಿದವರು. ಅಲ್ಲಿಯ ದೇಸಾಯಿ ಒಂದು ಮಠವನ್ನು ಕಟ್ಟಿಸಿದನು. ತಮ್ಮ ಗುರುಗಳಿಂದ ಅನುಗ್ರಹ ಹೊಂದಿದ ಶ್ರೀ ಮರಿ ತೋಂಟದಾರ್ಯರು ಕೆಳದಿ ರಾಜಮನೆತನಕ್ಕೆ ಕ್ರಿಯಾ ಮೂರ್ತಿಗಳಾಗಿ, ಆಸ್ಥಾನ ಪಂಡಿತರಾಗಿ ಇರುವಂತೆ ಶ್ರೀಗಳು ನೋಡಿಕೊಂಡರು; ಆ ಮರಿ ತೋಂಟದಾರ್ಯರಿಂದ 'ವೀರಶೈವಾನಂದ ಚಂದ್ರಿಕಾ' ಎಂಬ ಸಂಸ್ಕೃತ ಧರ್ಮ ಗ್ರಂಥವನ್ನು ಬರೆಯಿಸಿದರು. ಅಣ್ಣಿಗೆರೆ ದೇಶಪಾಂಡೆ ನಾಗಪ್ಪಯ್ಯ ಇವರಿಗೊಂದು ಮಠವನ್ನು ಮಾಡಿಕೊಟ್ಟನು.

೩. ಶ್ರೀ ಉಗ್ಗದ ತೋಂಟದಾರ್ಯ ಸ್ವಾಮಿಗಳು : ಇವರು ಪರಮ ವೈರಾಗ್ಯ ಶಾಲಿಗಳು, ಇವರು ಸ್ನಾನ ಮಾಡಿದ ನೀರಿನಿಂದ ಅನೇಕ ಭಕ್ತರು ತಮ್ಮ ರೋಗಗಳನ್ನು ಕಳೆದುಕೊಳ್ಳುತ್ತಿದ್ದರು.

೪. ಶ್ರೀ ಸದಾಶಿವ ಸ್ವಾಮಿಗಳು : ಇವರಾದರೂ ತಮ್ಮ ಗುರುಗಳಂತೆ ಭಕ್ತೋದ್ಧಾರದ ಕಾರ್ಯಗಳನ್ನು ಮುಂದುವರಿಸಿದರು. ಇವರಲ್ಲಿ ಶರಣ ಗವಿ ಸಿದ್ದಪ್ಪ ಅನುಗ್ರಹ ಪಡೆದು ಮಹಿಮಾಪುರುಷನಾದನು. ಇವರು ಹೇಳಿದ ಕಾಲಜ್ಞಾನ ಪ್ರಸಿದ್ಧವಾಗಿದೆ.

೫. ಹಂಪಸಾಗರ ಶ್ರೀಮಹಾಂತಸ್ವಾಮಿಗಳು : ಇವರಲ್ಲಿ ಜಟ್ಟಿ-ಪರ್ವತ ಮರಿದೇವರಿದ್ದರು. ಮರಿದೇವರು ಶ್ರೀಗಳನ್ನು ತಮ್ಮ ಹೆಗಲಮೇಲೆ ಕುಳ್ಳಿರಿಸಿ ಕೊಂಡೇ ಸಂಚರಿಸುತ್ತಿದ್ದರು. ಶ್ರೀಗಳು ಬಹು ನಿರಾಶಾಮೂರ್ತಿಗಳಾಗಿದ್ದರು.

೬. ಶ್ರೀ ವೃದ್ಧ ತೋಂಟದಾರ್ಯರು : ಇವರು ರಾಜಯೋಗಿಗಳು. ಇವರಲ್ಲಿಯ ವೈರಾಗ್ಯ ಕಂಡವರಿಗೆ ಗೊತ್ತಾಗುತ್ತಿದ್ದಿಲ್ಲ. ಇವರಲ್ಲಿ ಅಸಾಧಾರಣ ವ್ಯವಹಾರ ಕುಶಲತೆ ಇತ್ತು. ಇವರು ತಮ್ಮ ಪೀಠದಿಂದ ಹೋದ ಆಸ್ತಿಯನ್ನೂ ತಿರುಗಿ ಸಂಪಾದಿಸಿದರಲ್ಲದೆ, ಇದ್ದ ಆಸ್ತಿಯನ್ನು ಮತ್ತಷ್ಟು ಬೆಳೆಸಿದರು. ಇವರಿಂದಲೆ ಗದುಗಿನ ದೊಡ್ಡ ಮಠ ಹುಟ್ಟಿ ದೊಡ್ಡದಾಯಿತೆನ್ನುವರು.

೭. ಶ್ರೀ ಮೃತ್ಯುಂಜಯ ಸ್ವಾಮಿಗಳು : ಇವರು ಸದಾಚಾರ ಸಂಪನ್ನರು. ಸಜ್ಜನರ ಮೇಲೆ ಬಹಳ ಅಭಿಮಾನವುಳ್ಳವರು. ಇವರು ಮೂರೇ ಮೂರು ವರ್ಷ ಪಟ್ಟವನ್ನಾಳಿ ಲಿಂಗೈಕ್ಯರಾದರು.

ಮಹಾನುಭಾವರು - ಶ್ರೀಗಳು ಮೂವರು :

೧. ಶ್ರೀ ಸಿದ್ಧೇಶ್ವರ ಸ್ವಾಮಿಗಳು : ಶ್ರೀಗಳು ವಿದ್ಯಾಪಕ್ಷ ಪಾತಿಗಳೂ, ಸಮಾಜ ಹಿತೈಷಿಗಳೂ ಹಾಗೂ ಮಹಿಮಾ ಶಾಲಿಗಳೂ ಆಗಿದ್ದರು. ಶ್ರೀಮಠ ದಲ್ಲಿ— ಕ್ರಿ. ಶ. ೧೮೯೦ ರಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ, ಅದಕ್ಕೆ ಹತ್ತುಸಾವಿರ ರೂಪಾಯಿಯ ಶಾಶ್ವತ ನಿಧಿಯನ್ನು ಏರ್ಪಡಿಸಿದರು. ಇವರ ಕಾಲಕ್ಕೆ ಮಠದ ಸಾಂಪತ್ತಿಕ ಸ್ಥಿತಿ ಅತ್ಯಂತ ಘನತೆಗೇರಿತ್ತು; ಜೊತೆಗೆ ಪೀಠದ ಕೀರ್ತಿಯೂ ನಾಡಿನ ತುಂಬೆಲ್ಲ ಬೆಳಗಿತು. ಇವರಲ್ಲಿ ಸನ್ನಿಧಿ ಚರಮೂರ್ತಿಗಳನ್ನೊಳ ಗೊಂಡು, ೧೧ ಚರಮೂರ್ತಿಗಳಿದ್ದರು ಇವರು ತಮ್ಮ ಜಗದ್ಗುರು ಪೀಠದ ಗೌರವ ವನ್ನು ಒಳ್ಳೇ ದಕ್ಷತೆಯಿಂದ— ಜಾಣಾಕ್ಷತೆಯಿಂದ, ಕಾಪಾಡಿಕೊಂಡು ಹೋಗು ತ್ತಿದ್ದರು. ಕಾರಣಿಕ ಶ್ರೀ ಹಾನಗಲ್ಲು ಕುಮಾರ ಶಿವಯೋಗಿಗಳು ಇವರನ್ನೊಮ್ಮೆ ಶಿವಯೋಗ ಮಂದಿರಕ್ಕೆ ಬರಮಾಡಿಕೊಂಡು ಭವ್ಯ ಸ್ವಾಗತ ನೀಡಿದ್ದರು. ಶ್ರೀಗಳಾದರೂ ಹಾನಗಲ್ಲಪ್ಪಗಳವರನ್ನು ತಮ್ಮೊಡನೆ ಅವರ ಪರವಾರದೊಂದಿಗೆ ಎಡೆಯೂರು ಶ್ರೀ ಸಿದ್ಧಲಿಂಗೇಶ್ವರ ಕ್ಷೇತ್ರಕ್ಕೆ ಕರೆದುಕೊಂಡು ಹೋಗಿದ್ದರು. ಶ್ರೀಗಳವರಲ್ಲಿ ಗದುಗಿನ ಪ್ರಭುದೇವರ ಮಠದ ಶ್ರೀ ಕೊಟ್ರಪ್ಪಯ್ಯ ಪಟ್ಟಾಧ್ಯಕ್ಷರು. ಮುಖ್ಯ ಕಾರ್ಯಭಾರಿಗಳಾಗಿದ್ದರು. ಬೆಟ್ಟಗೆರೆ (ಬೆಟಗೇರಿ), ಶ್ರೀ ರವದಿ ಅನ್ನದಾನ ಣ್ಣನವರ ತ್ಯಾಗ ಬುದ್ಧಿಯನ್ನು ಶ್ರೀಗಳು ಬಹುವಾಗಿ ಮೆಚ್ಚಿಕೊಂಡಿದ್ದರು. ಶ್ರೀಗಳ ಆಸ್ಥಾನದಲ್ಲಿ, ಹೊಸಮಠದ ಶ್ರೀ ಕರಿಬಸವ ಗವಾಯಿಗಳು ಇದ್ದರು.

೨. ಗುರುಬಸವ ಸ್ವಾಮಿಗಳು : ಶ್ರೀಗಳು ಗದಗ ಅಕ್ಕನ ಬಳಗದ ಕಟ್ಟಡಕ್ಕೆ ಸ್ಥಳದಾನ ಮಾಡಿದರು. ಇದಲ್ಲದೆ ಗದಗ ಜೆ. ಟಿ. ಕಾಲೇಜದ ಸ್ಥಾಪನೆ ಮಾಡುವಾಗ ಒಂದು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿಯನ್ನು ಆಶೀರ್ವಾದಿಸಿ ದುದು ಶ್ರೀಗಳ ಮಹೌದಾರ್ಯವನ್ನು - ಶಿಕ್ಷಣ ಪ್ರೇಮವನ್ನು ವ್ಯಕ್ತಪಡಿಸುತ್ತದೆ. ಇವರಿಂದ ಶ್ರೀ ಸಿದ್ಧೇಶ್ವರ ಪುರಾಣ ಗ್ರಂಥವು ಪ್ರಕಾಶನಗೊಂಡಿದೆ.

೩. ಶ್ರೀ ಶಿವಕುಮಾರಸ್ವಾಮಿಗಳು : ಶ್ರೀಗಳವರು ಎಷ್ಟೋ ವರ್ಷ ಕಾಶಿಯಲ್ಲಿ ಓದಿ, ಅನೇಕ ಶಾಸ್ತ್ರಗಳಲ್ಲಿ ಪಾಂಡಿತ್ಯಾನುಭವವನ್ನು ಸಂಪಾದಿಸಿರು ವರು. ಡಂಬಳದ ಜಗದ್ಗುರು ತೋಂಟದಾರ್ಯ ಮಾಧ್ಯಮಿಕ ಶಾಲೆಯ ಕಟ್ಟ ಡಕ್ಕೆ ಅಲ್ಲಿಯ ಪೇರಲ ತೋಟವನ್ನೂ ಮತ್ತು ಕೆಲವೊಂದು ಭೂಮಿಯನ್ನೂ ದಾನಗೈದಿರುವರು. ಇದರಂತೆ ಬೆಳವಣಿಕಿ ಶ್ರೀ ಜಗದ್ಗುರು ತೋಂಟದಾರ್ಯ ಪ್ರಸಾದ ನಿಲಯಕ್ಕೂ, ಶಿರೋಳ ಕನ್ನಡ ಪ್ರಾಥಮಿಕ ಶಾಲೆಯ ಕಟ್ಟಡಕ್ಕೂ, ಅಣ್ಣಿಗೇರಿ ಅಮೃತೇಶ್ವರ ಪ್ರೌಢಶಾಲೆಯ ಕಟ್ಟಡಕ್ಕೂ, ಮತ್ತು ಹನುಮನಮಟ್ಟಿ

ಸರಕಾರಿ ವಿದ್ಯಾಲಯಕ್ಕೂ ಅಷ್ಟಷ್ಟು ಭೂಮಿ ದಾನ–ಸ್ಥಳದಾನ ಮಾಡಿ, ತಮ್ಮ ಅಸದೃಶ ಶಿಕ್ಷಣ ಪ್ರೇಮವನ್ನೂ ತೋರಿಸಿದ್ದಾರೆ. ಶ್ರೀಗಳು ಗದುಗಿನ ವೀರಶೈವ ಪ್ರಗತಿಶೀಲ ಯುವಕ ಸಂಘಕ್ಕೆ ಕಲ್ಯಾಣ ಮಂಟಪದ ಯೋಜನೆಗಾಗಿ ತಮ್ಮ ಬೆಲೆಯುಳ್ಳ ಸ್ಥಳವನ್ನು ಆಶೀರ್ವದಿಸಿದ್ದಾರೆ. ಇವರ ಕಾಲಕ್ಕೆ ಶ್ರೀಮಠದ ಆಶ್ರಯದಲ್ಲಿ ವೈಭವದಿಂದ ತೋಂಟದ ಶ್ರೀ ಸಿದ್ಧಲಿಂಗೇಶ್ವರರ ಪಂಚ ಶತಮಾನೋತ್ಸವವನ್ನು ಆಚರಿಸಲಾಯಿತು. ಇವರಿಂದ ಶ್ರೀಮದರ್ಧನಾರೀಶ್ವರ ಪುರಾಣ ಗ್ರಂಥವು ಪ್ರಕಟವಾಗಿದೆ.

**ವೈಭವ ವೈಖರಿ : ವೈರಾಗ್ಯದೈಸಿರಿ :**

ಇದೊಂದು ಉಜ್ವಲ ಪರಂಪರೆಯ ಸಂಸ್ಥಾನ ಮಠವಾಗಿದ್ದು, ಅದು ಅರ್ಧನಾರೀಶ್ವರರಂತಹ ಅಪೂರ್ವ ವಿಭೂತಿಗಳನ್ನೂ, ನಂದೀಶ್ವರ ಸ್ವಾಮಿಗಳಂತಹ ಘನ ತಪಸ್ವಿಗಳನ್ನೂ, ವೃದ್ಧ ತೋಂಟದಾರ್ಯರಂತಹ ಪ್ರಭಾವಿ ರಾಜಯೋಗಿಗಳನ್ನೂ, ಹಾಗೂ ಮರಿ ತೋಂಟದಾರ್ಯರಂತಹ ಆದರ್ಶ ಶಿವಾನುಭವಶಾಸ್ತ್ರವೇತ್ತರನ್ನೂ ಹಾಗೂ ಕೋರಿಸೆಟ್ಟರಂತಹ ಭಕ್ತಿ ಸಂಪನ್ನ ಚರಮೂರ್ತಿಗಳನ್ನೂ ಸಮಾಜಕ್ಕೆ ಕಾಣಿಕೆಯಾಗಿ ಕೊಟ್ಟಿದೆ. ಈ ಪೀಠಕ್ಕೆ ನೂರಾರು ಶಾಖಾ ಮಠಗಳಿದ್ದು, ಅವು ಬಳ್ಳಾರಿ, ವಿಜಾಪುರ, ರಾಯಚೂರು, ಧಾರವಾಡ ಮುಂತಾದ ಜಿಲ್ಲೆಗಳಲ್ಲಿ ಪಸರಿಸಿರುತ್ತವೆ. ಅವುಗಳಲ್ಲಿ ಅನೇಕ ಮಠಗಳು, ಅನ್ನದಾನ ಚರಂತಿಗೆಯನ್ನು ಹೊಂದಿ ತ್ರಿವಿಧ ದಾಸೋಹವನ್ನು ನಡೆಯಿಸಿರುತ್ತವೆ. ಅವೆಲ್ಲ ಮಠಗಳಿಗೆ ಅನೇಕ ಶಿಷ್ಯರು ಜಾತಿ, ಮತಗಳ ಸಂಕುಚಿತ ಭಾವನೆಗಳಿಲ್ಲದೆ, ಅನನ್ಯ ಭಕ್ತಿಯಿಂದ, ಸ್ವಯಂಪ್ರೇರಣೆಯಿಂದ, ಭೂದಾನ ಮಾಡಿದ ಅನೇಕ ಪ್ರಸಂಗಗಳಿರುತ್ತವೆ. ಹೀಗೆ ದಾನವಿತ್ತವರಲ್ಲಿ ರಾಜರೂ, ನಾಡಗೌಡರೂ, ದೇಸಾಯರೂ, ದೇಶಪಾಂಡೆಯರೂ ಸಮಾವೇಶವಾಗುತ್ತಾರೆ. ಈ ದಾನ ದತ್ತಿಗಳ ವಿವರವನ್ನು ಶ್ರೀಮಠದ ಕಾಗದಪತ್ರ ಸಾಹಿತ್ಯದಲ್ಲಿ ಕಾಣಬಹುದು.

**ಮಠದ ಕೆಲವು ವೈಶಿಷ್ಟ್ಯಗಳು :**

೧. ಮಹಾಸನ್ನಿಧಿಯವರು ಸವಾರಿ, ಮೆರವಣಿಗೆ ಹಾಗೂ ಬಿನ್ನಹ ಮುಂತಾದವುಗಳ ಕಾಲಕ್ಕೆ ಶ್ರೀಮಠದ ಯಾವತ್ತೂ ಸಿಬ್ಬಂದಿ ಸಹಿತ ಸಕಲ ಬಿರುದಾವಳಿಗಳೊಂದಿಗೆ ವೈಭವದಿಂದ ಹೊರಡುವರು.

೨. ಸಂಸ್ಥಾನಮಠದ ಮುಂದೆ ಬೇರೆಯವರ ಅಡ್ಡಪಾಲಕಿ ಉತ್ಸವದ ಮೆರವಣಿಗೆ ಹಾಯ್ದು ಹೋಗಬಾರದೆಂಬ ಪರಂಪರಾಗತ ನಿಯಮ ಇಂದಿಗೂ ಇದೆ.

೩. ಇಲ್ಲಿಯ ಯಾತ್ರಾಮಹೋತ್ಸವದ ಪೂರ್ವಭಾವಿಯಾಗಿ ಐದು ದಿನ ಶ್ರೀ ಮಹಾಲಕ್ಷ್ಮಿ ಪೂಜೆಯು ಮುತ್ತೈದೆಯರಿಂದ ನಡೆಯುವದು.

ತೋಂಟದ ಶ್ರೀ ಸಿದ್ಧಲಿಂಗೇಶ್ವರ ಪರಂಪರೆಯನ್ನು ಆರಂಭದಿಂದಲೂ ರಕ್ಷಿಸಿಕೊಂಡು ಬಂದಿರುವ ಜಗದ್ಗುರು ಪೀಠವೆಂದರೆ ಇದೊಂದೇ ಆಗಿದೆ.

## ಮಠದ ಅಮೂಲ್ಯ ಸಂಪತ್ತು :

ಕಲಾತ್ಮಕವಾದ ಬೀಸಣಿಕೆ, ಗಂಧದ ಸಂಪುಟ, ಅಂಬಾರಿ, ಕಸೂತಿಯ ಕಂಥೆ ಇವೆಲ್ಲವೂ ಕಣ್ಮನವನ್ನು ಸೆಳೆಯುತ್ತಿವೆ. ಬಂಗಾರದ ಪಾದುಕೆ, ಕಿರೀಟ, ಬೆತ್ತ, ತೋಡೆ, ಖಡೆಗಳು ಇವೇ ಮುಂತಾದವುಗಳು ಮಠದ ಗತವೈಭವಕ್ಕೆ ನಿಚ್ಚಳ ನಿದರ್ಶನಗಳಾಗಿವೆ.

ಶ್ರೀಮಠದ ಸಂಸ್ಕೃತ ಪಾಠಶಾಲೆಯಲ್ಲಿ ಕಲಿತು ಅನೇಕರು ಪ್ರಸಿದ್ಧ ಗ್ರಂಥಕಾರರೂ, ಸಾಹಿತಿಗಳೂ, ಪುರಾಣ ಪ್ರವಚನಕಾರರೂ ಆಗಿರುವರು. ಅವರಲ್ಲಿ ಲಿಂ. ಪಂಡಿತ ಕೋಟಿ ಬಸವಪ್ಪ ಶಾಸ್ತ್ರಿಗಳು, ಪಂ. ಪಗಡದಿನ್ನಿ ಕಲಿಗಣನಾಥ ಶಾಸ್ತ್ರಿಗಳು, ಪಂ. ಉಮಚಿಗಿ ಶಂಕರ ಶಾಸ್ತ್ರಿಗಳು, ಪಂ. ದಡ್ಡಿ ಮಲ್ಲಿಕಾರ್ಜುನ ಶಾಸ್ತ್ರಿಗಳು, ಪಂ. ಪಗಡದಿನ್ನಿ ಬಸವರಾಜ ಶಾಸ್ತ್ರಿಗಳು ಇವರೆಲ್ಲರೂ ಶ್ರೀಮಠದ ಪಾಠಶಾಲೆಯ ಪ್ರಕಾಂಡ ಪಂಡಿತರು, ಅಗ್ರಗಣ್ಯರು. ಚಿತ್ರದುರ್ಗದ ಜಗದ್ಗುರು ಲಿಂ. ಜಯದೇವ ಮಹಾಸ್ವಾಮಿಗಳು, ಲಿಂ. ಎಳಂದೂರ ಬಸವಲಿಂಗ ಶಿವಯೋಗಿಗಳು, ಧಾರವಾಡ ಮುರುಘಾಮಠದ ಲಿಂ. ಮೃತ್ಯುಂಜಯ ಮಹಾಸ್ವಾಮಿಗಳು – ಇವರೇ ಮೊದಲಾದ ಮಹಿಮರು ಈ ಮಠದ ಮರಿದೇವರಾಗಿದ್ದರು.

## ನಿರಂಜನ ರೂಪ : ನಾಡ ನಂದಾದೀಪ :

ಪೂಜ್ಯ ಸಿಂದಗಿ ಸಿದ್ಧರಾಮದೇವರು ಚಿಕ್ಕಂದಿನಿಂದಲೂ ತಮ್ಮ ಗುರು ಶ್ರೀ ಮ. ಘ. ಚ. ಶಾಂತವೀರ ಶಿವಾಚಾರ್ಯ ಮಹಾಸ್ವಾಮಿಗಳ ಗರಡಿಯಲ್ಲಿ ಸದ್ಗುಣ ಸಂಪತ್ತಿಯನ್ನೂ, ಸತ್ವಶಾಲಿ ವ್ಯಕ್ತಿತ್ವವನ್ನೂ ರೂಪಿಸಿಕೊಂಡವರು; ಮತ್ತೆ ಮೇಲೆ, ಹುಬ್ಬಳ್ಳಿ ಮೂರುಸಾವಿರ ಮಠದ ಪೂಜ್ಯ ಜಗದ್ಗುರುಗಳ ಸಮರ್ಥ ಮಾರ್ಗದರ್ಶನದಲ್ಲಿ ಲಾಲನೆ–ಪಾಲನೆ ಹೊಂದಿ, ಆಂಗ್ಲ ವಿದ್ಯೆ, ಭಾಷಣ, ಲೇಖನ ಕಲೆ ಹಾಗೂ ಪತ್ರಿಕಾ ಸಂಪಾದನಾ ವಿದ್ಯೆಗಳನ್ನು ಸಾಧಿಸಿಕೊಂಡವರು. ಈ ತಮ್ಮ ವ್ಯಾಸಂಗದ ಅವಧಿಯಲ್ಲಿ ನಡುನಡುವೆ ಶಿವಯೋಗಮಂದಿರ

ದಲ್ಲಿ ಶಿವಯೋಗ ಸಾಧನೆಯನ್ನು ಅಳವಡಿಸಿಕೊಂಡವರು; ಅಲ್ಲಿಯೇ ಗುರು ಕೃಪೆಯಿಂದ ನಡೆನುಡಿಗಳನ್ನು ಬಾಳಿನಲ್ಲಿ ಹೊಂದಿಸಿಕೊಂಡವರು.

ಸಾಧಕ ಶ್ರೀ ಸಿದ್ಧರಾಮ ದೇವರ ಜೀವನಾಕಾಶದಲ್ಲಿ ಧ್ರುವ ನಕ್ಷತ್ರದಂತೆ ಬೆಳಗುತ್ತಿರುವ ಸದ್ಗುರು ಶ್ರೀ ಶಾಂತವೀರ ಮಹಾಸ್ವಾಮಿಗಳ ಹೆಸರು ಚಿರಂತನ ವಾದುದು: ಶ್ರೀಗಳವರು ಮಂದಿರದಲ್ಲಿದ್ದುಕೊಂಡು ಯೋಗ ವಿದ್ಯೆಯಲ್ಲಿ ತುಂಬ ಪರಿಣತರಾಗಿರುವರಲ್ಲದೆ, ಕಾಶಿಯಲ್ಲಿ ಓದುತ್ತಿದ್ದಾಗ ಸಾಹಿತ್ಯ, ಜ್ಯೋತಿಷ್ಯಾದಿ ಗಳನ್ನು ಕರತಲಾಮಲಕ ಮಾಡಿಕೊಂಡವರು; ಅವರಲ್ಲಿ ವಿನಯ, ಔದಾರ್ಯ, ಶಾಂತಿ, ಸಮಾಧಾನ, ನಿಸ್ಪೃಹತೆ, ತ್ಯಾಗ ಭಾವನೆಗಳು ಎದ್ದು ಕಾಣುತ್ತವೆ. ಅವರು ಗದಗ, ಬ್ಯಾಡಗಿ, ಶಿವಮೊಗ್ಗ, ಸಿಂದಗಿ ಮತ್ತು ಹಾವೇರಿಗಳಲ್ಲಿ ಶ್ರೀಗುರು ಕುಮಾರೇಶ್ವರ ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಿ ಅಸಂಖ್ಯಾತ ವಿದ್ಯಾರ್ಥಿಗಳಿಗೆ ಸಂಸ್ಕೃತದ ಜೊತೆಗೆ ವೈದಿಕ, ಜ್ಯೋತಿಷ್ಯ, ಸಂಗೀತಗಳನ್ನು ಕಲಿಯುವಂತೆ ಏರ್ಪಡಿಸಿ, ಅಲ್ಲೆಲ್ಲಾ ಗುರುಕುಲವಾತಾವರಣವನ್ನು ನಿರ್ಮಿಸಿದ್ದಾರೆ. ಅವರ ಪಾಠಶಾಲೆಗಳಿಂದ ಹೊರಬಿದ್ದ ವಿದ್ಯಾರ್ಥಿಗಳೊಳಗೆ ಅನೇಕರು ಕೀರ್ತನ ಪ್ರವಚನ ಕಾರರೂ, ಗುರುವಿರಕ್ತ ಪೀಠಾಧಿಪತಿಗಳೂ ಆಗಿರುವರು. ದುಧನಿ, ಚಿಕ್ಕೇರೂರ, ಆರದವಳ್ಳಿ ವಿರಕ್ತಮಠಗಳಿಗೂ; ಕೂಡಲ, ಅಡ್ನೂರ, ತುಂಬಿಗಿ, ಹಾವೇರಿ ಗುರುಮಠಗಳಿಗೂ ಶ್ರೀಗಳವರ ಶಿಷ್ಯಪರಂಪರೆಯವರೇ ಅಧಿಕಾರಿಗಳಾಗಿದ್ದಾರೆ. ಅವರು ಗದಗ ಪಾಠಶಾಲೆಯಲ್ಲಿ ಬಸವ ಜಯಂತ್ಯುತ್ಸವ, ಬಸವ ಪುರಾಣ ಪ್ರವಚನಾದಿಗಳನ್ನು ಪ್ರತಿವರ್ಷ ನಡೆಯಿಸುತ್ತಾರೆ. ಇದೇ ಪಾಠಶಾಲೆಯಲ್ಲಿ ಡಾ. ಶ್ರೀ ಜ. ಚ. ನಿ. ಹಾಗೂ ಪಂಡಿತ ಪುಟ್ಟರಾಜ ಗವಾಯಿಗಳಿಗೆ ಸನ್ಮಾನ ಸಮಾರಂಭಗಳು ಜರಗಿದವು. ವಿದ್ಯಾರ್ಥಿಗಳಿಗೆ ಉಪಯುಕ್ತ ಚಿಕ್ಕ ಚಿಕ್ಕ ಪುಸ್ತಕಗಳನ್ನು ಅವರು ಆಗಾಗ ಪ್ರಕಟಿಸುವದುಂಟು. ಒಟ್ಟಾರೆ ಶ್ರೀಗಳವರ ವಯಸ್ಸು ಎಪ್ಪತ್ತು ಆಗಿದ್ದರೂ, ಅವರಲ್ಲಿ ಇಪ್ಪತ್ತು ವಯಸ್ಸಿನವರ ಕಾರ್ಯೋತ್ಸಾಹ, ಅವಿಶ್ರಾಂತ ಪರಿಶ್ರಮಗಳಿಗೇನೂ ಕಡಿಮೆಯಿಲ್ಲ. ಇಂದಿಗೂ ಅವರು ಸಧೃಡರೂ, ಎಂದಿಗೂ ಹಸನ್ಮುಖಿಗಳು, ತಮ್ಮ ಮಠದ ಉತ್ತರಾಧಿಕಾರಿ ಶ್ರೀ ಸಿದ್ಧರಾಮ ದೇವರನ್ನು ಈ ಜಗದ್ಗುರು ಪೀಠಕ್ಕೆ ಕೊಟ್ಟು ಕೊಡುಗೆ ನಿಜಕ್ಕೂ ಮಹಾ ತ್ಯಾಗವೇ ಸರಿ.

ಶ್ರೀ ಸಿದ್ಧರಾಮದೇವರು ಈ ಜಗದ್ಗುರು ಪೀಠಕ್ಕೆ ಆಯ್ಕೆಯಾಗುವ ಮುನ್ನ ಎಡೆಯೂರಲ್ಲಿ ನಡೆದ ಸನ್ನಿವೇಶ ಹೃದಯಸ್ಪರ್ಶಿ. ಈ ದಿಶೆಯಲ್ಲಿ ಗದುಗಿನ ವೀರಶೈವ ಪ್ರಗತಿಶೀಲ ಯುವಕ ಸಂಘದವರಿಂದಾದ ಸಾಹಸವೂ ಸ್ತುತ್ಯ; ಇವೆರಡರ

ಮೇಲೆ ಸದ್ಯದ ಜಗದ್ಗುರುಗಳು ನೀಡಿದ ಸಹೃದಯ ಸಮ್ಮತಿ– ಇವೆಲ್ಲವುಗಳ ಶ್ರೀ ಸಿದ್ಧರಾಮದೇವರಿಗೆ ಅವ್ಯಕ್ತದೈವೀ ಕೃಪೆ, ಅವರಲ್ಲಿರುವ ಸರ್ವಾಂಗ ಸುಂದರ ಪ್ರತಿಭಾ ಪೂರ್ಣವ್ಯಕ್ತಿತ್ವ, ಜನಪ್ರಿಯತೆ, ಗುರು ಕೃಪೆಗಳು ಬೆಂಬಲವಾಗಿದ್ದುದಕ ದ್ಯೋತಕ.

ನೂತನ ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳಿಂದ ನಾಡಿನ ಜನತೆ ತನ್ನ ಪುನರುತ್ಥಾನಕ್ಕಾಗಿ ದಿವ್ಯ ಕೊಡುಗೆಗಳನ್ನು ನಿರೀಕ್ಷಿಸುತ್ತದೆ.

## ಗ್ರಂಥಋಣ

ಕ್ರಿ. ಶ.

೧. ನಿರಂಜನ ಜಂಗಮವಂಶ ದರ್ಪಣ (೧೯೦೯)
೨. ಗುರು – ಶಿಷ್ಯ ಸಂವಾದ (೧೯೧೮)
೩. ವೀರಶೈವ ಕರ ದರ್ಪಣ (೧೯೩೩)
೪. ಶ್ರೀ ಸಿದ್ಧೇಶ್ವರ ಪುರಾಣ (೧೯೫೩)
೫. ಷಟ್‌ಸ್ಥಲ ಜ್ಞಾನ ಸಾರಾಮೃತ (೧೯೬೪)
೬. ಶ್ರೀ ಮದರ್ಧನಾರೀಶ್ವರ ಪುರಾಣ (೧೯೬೮)
೭. ನಮ್ಮ ಮಠ (೧೯೭೨)
೮. ಶ್ರೀ ಸಿದ್ಧಲಿಂಗ ಶಿವಯೋಗಿ (೧೯೭೪)
೯. ಕನ್ನಡ ಸಾಹಿತ್ಯಕ್ಕೆ ಗದುಗಿನ ಕಾಣಿಕೆ (೧೯೭೪)
೧೦. ಗದುಗಿನ ಶ್ರೀ ತೋಂಟದಾರ್ಯ ಮಠದ ಕಾಗದ–ಪತ್ರ ಸಾಹಿತ್ಯ (ಕೈಬರೆಹದ ಪ್ರತಿ) (೧೯೭೪)



ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶಿವಕುಮಾರ ಮಹಾಸ್ವಾಮಿಗಳು
ತೋಂಟದಾರ್ಯ ಸಂಸ್ಥಾನಮಠ, ಡಂಬಳ – ಗದಗ

ರಾಜಶಿವಯೋಗಿ

# ಶ್ರೀ ತೋಂಟದ ಸಿದ್ಧಲಿಂಗೇಶ್ವರರು*

— ಪ್ರೊ. ಎಸ್. ಎಂ. ವೃಷಭೇಂದ್ರಸ್ವಾಮಿ

ವೀರಶೈವ ಧರ್ಮ, ಸಂಸ್ಕೃತಿ, ಸಾಹಿತ್ಯದ ದ್ವಿತೀಯ ನವೋದಯದ ನೇತಾರಚೈತನ್ಯಪ್ರತಿಮೂರ್ತಿ ತೋಂಟದ ಸಿದ್ಧಲಿಂಗೇಶ್ವರರು. ವಿಜಯ ನಗರ ಸಾಮ್ರಾಜ್ಯ ಸಾಧಿಸಿದ ಹಿಂದೂ ಧರ್ಮ – ಸಂಸ್ಕೃತಿ ಪುನರುಜ್ಜೀವನದ ಸ್ಪಷ್ಟ ನಿದರ್ಶನಗಳನ್ನು ಅಂದಿನ ಜನಪ್ರಿಯ ರಾಜ ಧರ್ಮವಾಗಿದ್ದ ನವೋದಿತ ವೀರಶೈವ ಧರ್ಮದಲ್ಲಿ ಕಾಣಬಹುದು. ಪ್ರೌಢ ದೇವರಾಯನ ಆಸ್ಥಾನ ಮಾನ್ಯರಾಗಿದ್ದ ಜಕ್ಕಣಾಚಾರ್ಯ, ಲಕ್ಕಣ ದಂಡೇಶನಂತೆ, ನೂರೊಂದು ವಿರಕ್ತ ಸಂಪ್ರದಾಯದ ಮೂಲ ಶಕ್ತಿಯಾಗಿದ್ದ ಶ್ರೀ ಸಿದ್ಧಲಿಂಗೇಶ್ವರರೂ ಈ ಪುನರುತ್ಥಾನದ ಪುಣ್ಯ ಪುರುಷರಾಗಿದ್ದಾರೆ. ಅಲ್ಲಮ ಪ್ರಭುದೇವರ ಅಪರಾವತಾರವೆಂಬ ಕೀರ್ತಿಗೆ ಭಾಜನರಾದವರು; ತೀವ್ರ ವೈರಾಗ್ಯ ಮೂರ್ತಿಗಳಾಗಿದ್ದು, ನಿರಂಜನ ಚಕ್ರವರ್ತಿಗಳೆಂದು ಖ್ಯಾತರಾದವರು. ಭಾರತದ ಪ್ರಮುಖ ಶೈವಕ್ಷೇತ್ರಗಳನ್ನೆಲ್ಲ ಉದ್ಧರಿಸಿ, ನೂರಾರು ಮಠಗಳನ್ನು ಸ್ಥಾಪಿಸಿ, ವೀರಶೈವ ಧರ್ಮ ಪ್ರಸಾರ ಮಾಡಿದ

---

* ಭಗವಾನ್ ತೋಂಟದ ಸಿದ್ಧಲಿಂಗೇಶ್ವರರು ತಮ್ಮ ವಚನಗಳಲ್ಲಿ 'ರಾಜಯೋಗ' ವನ್ನು ಪ್ರಸ್ತಾಪಿಸುತ್ತಾರೆ. ಅದು 'ಆದಿಯಲ್ಲಿ ಶಿವಬೀಜವಾದ ಮಹಾ ಮಹಿಮನಿಗೆ ಸಾಧ್ಯವಪ್ಪುದಲ್ಲದೆ, ತ್ರೈಜಗದಲಾರಿಗೂ ಅಸಾಧ್ಯ' ಎಂದು ಹೇಳಿದ್ದಾರೆ. (ವ. ೩೭೨) ಈ ವಚನ ಚಿತ್ರದುರ್ಗದ ಶಾಸನದಲ್ಲಿಯೂ ಉದ್ಧೃತವಾಗಿದೆ. (ಶರಣ ಸಾಹಿತ್ಯ ೧೮-೧೦). ಕಾರಣ ಇಲ್ಲಿ 'ಶಿವಯೋಗಿಗಳ ರಾಜ' ಎಂಬ ಅಲಂಕಾರಾರ್ಥಕ್ಕಿಂತ, ಯೋಗ ಪ್ರಭೇದ(?)ವಾದ 'ರಾಜ ಶಿವಯೋಗ' ಸಾಧಕರೆನ್ನುವ ಅರ್ಥದಲ್ಲಿ ಬಳಸಿದ ಈ ವಿಶೇಷಣವನ್ನು.

ಮಹನೀಯರಾದರು. ಪ್ರತಿಸ್ಪರ್ಧಿ ಧರ್ಮ ಗುರುಗಳನ್ನು ವಾದದಲ್ಲಿ ಜಯಿಸಿ, ಕ್ಷುದ್ರ ದೇವತೋಪಾಸನೆಯನ್ನು ಖಂಡಿಸಿ, ಅಚ್ಚ ಶಿವಭಕ್ತಿಯನ್ನು ಬಿತ್ತರಿಸಿ, ವೀರಶೈವ ಧರ್ಮ ದಿಗ್ವಿಜಯ ಕೈಕೊಂಡ ಧೀರ ಧಾರ್ಮಿಕಾಚಾರ್ಯರಾದರು. ಸಾವಿರಾರು ಪವಾಡಗಳನ್ನು ಮೆರೆದು, ಜನಮನವನ್ನು ಗೆದ್ದು, ವಿರಕ್ತ ಸಮುದಾಯ ವನ್ನು ಮುನ್ನಡೆಸಿದ ಜಗದ್ಗುರುವಾದರು. ಸ್ವತಂತ್ರ ವಚನ ರಚನೆ ಶಿವಶರಣರ ವಚನ ಸಂಪಾದನೆ – ವ್ಯಾಖ್ಯಾನ ಪರಂಪರೆಯನ್ನು ಪೋಷಿಸಿದ ಮುಂಚೂಣಿಗ ರಾದರು. ಪ್ರತಿಭಾನ್ವಿತ ತತ್ವಜ್ಞಾನಿಗಳಾಗಿ, ಶಿವಾದ್ವೈತ ತತ್ವ ನಿರ್ಣಾಯಕರ ಲ್ಲೊಬ್ಬರಾರು; ಶಿವಯೋಗ ಸಾಧನೆಯ ಪರಮೋಚ್ಚ ಸ್ಥಿತಿ ಸಾಧಿಸಿ, ಅಂಗ-ಲಿಂಗ ಸಾಮರಸ್ಯ ಸಾಧನೆಯ ಶಿವಯೋಗ ಸಮಾಧಿ ಸ್ಥಿತರಾದ ಮಂತ್ರ ಮಹಾಂತ ರಾದರು. ಎಡೆಯೂರು, ಕಗ್ಗೆರೆ, ಹರದನಹಳ್ಳಿ, ಗದಗು, ಡಂಬಳ, ಅಣ್ಣಿಗೆರೆ, ನವಿಲಗುಂದ ಮುಂತಾದ ಪೀಠ ಮಠಗಳು ತೋಂಟದ ಸಿದ್ಧಲಿಂಗೇಶ್ವರರ ವರ ಪ್ರಸಾದದಿಂದ ಪುನೀತವಾಗಿವೆ, ಪೂಜ್ಯವಾಗಿವೆ. ಮಹಾಲಿಂಗವೇ ಮಾನವ ರೂಪಾಗಿ ಜನಿಸಿ, ಮಾನವೋದ್ಧಾರಣ ಕಾರ್ಯ ಕೈಕೊಂಡು, ರಾಜಶಿವಯೋಗಿ ಯಾಗಿ, ತನ್ನ ಸಂಕಲ್ಪ ಶಕ್ತಿಯಿಂದ, ಶಿವಯೋಗ ಸಿದ್ಧಿಯನ್ನು ದಯಪಾಲಿ ಸುತ್ತಿರುವ ಮಹಿಮಾ ಜ್ಯೋತಿ ರೂಪು ಶ್ರೀ ತೋಂಟದ ಸಿದ್ಧಲಿಂಗೇಶ್ವರರು. ಈಚೆಗೆ ಪೂಜ್ಯ ಜಗದ್ಗುರುಗಳ ಪಂಚ ಶತಮಾನೋತ್ಸವವನ್ನು ವೈಭವ ಪೂರ್ಣ ವಾಗಿ ನೆರವೇರಿಸಿದ ಕನ್ನಡ ನಾಡು ಪುಣ್ಯದ ಬೀಡಾಗಿದೆ. ಎಡೆಯೂರು ಆಧುನಿಕ ಪುಣ್ಯ ಕ್ಷೇತ್ರವಾಗಿ ರೂಪು ತಳೆಯುತ್ತಿದ್ದರೆ, ಗದಗು – ಡಂಬಳದ ಶ್ರೀ ತೋಂಟ ದಾರ್ಯ ಸಂಸ್ಥಾನಮಠ ವೀರಶೈವ ಧರ್ಮ-ಸಂಸ್ಕೃತಿ-ಸಾಹಿತ್ಯ ಪೀಠವಾಗಿ ಬೆಳೆದು ಬರಲಿದೆ. ಶ್ರೀ ತೋಂಟದಾರ್ಯರ ಸ್ಮರಣೆ ಮಂತ್ರವಾಗಿ, ಅವರ ಕೃಪೆ ಜೀವಂತ ಶಕ್ತಿಯಾಗಿ ನಾಡನ್ನು ಮುನ್ನಡೆಸಲಿದೆ. ಗದಗಿನ ತೋಂಟದಾರ್ಯ ಪೀಠದ ನೂತನ ಜಗದ್ಗುರುಗಳು ಶ್ರೀ ಸಿದ್ಧಲಿಂಗೇಶ್ವರ ಪರಂಪರೆಯನ್ನು ಪ್ರಜ್ವಲಿಸ ಬಲ್ಲ. ಪ್ರತಿಭಾನ್ವಿತರೂ, ಪುಣ್ಯ ಜೀವಿಗಳೂ ಆಗಿರುವರು. ಐದುನೂರು ವರ್ಷಗಳ ವರೆಗೆ ಈ ಪರಂಪರೆ ಕಾರ್ಯೋನ್ಮುಖವಾಗಿ ಬೆಳೆದಿರುವುದಕ್ಕೆ ಪೂಜ್ಯ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರ ಯೋಗ ಶಕ್ತಿಯೇ ಆಧ್ಯಾತ್ಮ ಗಂಗೋತ್ರಿ.

[೨]

ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರ ದಿವ್ಯ ವ್ಯಕ್ತಿತ್ವ, ಪ್ರಕಾಂಡ ಪಾಂಡಿತ್ಯ, ಅನುಭಾವ ಸಿದ್ಧಿ, ತಾತ್ವಿಕ ಪ್ರತಿಭೆಯನ್ನರಿಯಲು ಸಾಧನ ಸಂಪತ್ತಿಯ ಕೊರತೆಯಿಲ್ಲ. ಷಟ್‌ಸ್ಥಲ ಜ್ಞಾನ ಸಾರಾಮೃತವೆಂಬ ಅನ್ವರ್ಥನಾಮದ ಅವರ

೦೧ ಸ್ವಯ ವಚನಗಳೇ ಅಗ್ರಮಾನ್ಯ ಪುರಾವೆಗಳು. ಅವರ ಶಿಷ್ಯ ಸಂತತಿ ರೂಪಿಸಿದ ವಚನ-ಸಂಪಾದನೆ-ವ್ಯಾಖ್ಯಾನಗಳು ದ್ವಿತೀಯ ದಾಖಲೆಗಳು. ಸಿದ್ಧ ಲಿಂಗೇಶ್ವರರ ಮಹಿಮೆ-ಪವಾಡಗಳನ್ನು ಬಿತ್ತರಿಸುವ ಕಾವ್ಯ ಪುರಾಣ ಸಮುದಾಯ, ಸ್ತೋತ್ರ, ಭಜನೆ, ಹಾಡು ಐತಿಹ್ಯಗಳು ಮೂರನೆಯ ಪುರಾವೆಗಳು. ಇವುಗಳಲ್ಲೆಲ್ಲ ಅತ್ಯಂತ ವಿಶ್ವಾಸಾರ್ಹ ಹಾಗೂ ಸತ್ಯಕ್ಕೆ ಸಮೀಪವಾದ ಮಾಹಿತಿ ದೊರೆಯುವುದು ಅವರ ಅನುಭಾವ ವಚನಗಳಲ್ಲಿ ಮಾತ್ರ. ವಿಸ್ತಾರಕ್ಕಿಳಿಯದೆ, ಈ ವಚನಗಳಲ್ಲಿ ಭಾಸವಾಗುವ ಈ 'ನಿರಂಜನ ಚಕ್ರವರ್ತಿ'ಯ ವ್ಯಕ್ತಿತ್ವದ ಕೆಲವು ಮುಖಗಳ ದರ್ಶನ ಮಾಡುವ ಪ್ರಯತ್ನ ಮಾಡಲಾಗಿದೆ.

## ಮಾನವೀಯ ವ್ಯಕ್ತಿತ್ವ

ಮಹಾತ್ಮರ ಜೀವನದ ಹೆಚ್ಚಿನ ಅಂಶಗಳೆಲ್ಲ ಅಜ್ಞಾತವಾಗಿಯೇ ಉಳಿದಿರುತ್ತವೆ. ಅವರ ಮಾನವೀಯ ಬದುಕು, ಒಳತೋಟಿಯ ಕೋಟಲೆ, ಲೌಕಿಕ ಸ್ತರದಿಂದ ಮೇಲೇರಲು ಮಾಡಿದ ಸಾಹಸ, ತನ್ನನ್ನು ತಾನರಿತು, 'ತನ್ನತ್ವ' ಸಾಧಿಸಿದ ವಿವರಗಳು ವಿರಳವಾದರೂ, ದೊರೆಯುವಷ್ಟೇ ಮಾಹಿತಿಯಿಂದ ಅಂಥ ಸಾಧಕರ ಮಾನವೀಯ ಬದುಕನ್ನು ಪುನರ್ರಚಿಸಿದರೆ ಅದು ಜನ ಸಾಮಾನ್ಯರಿಗೂ ಪ್ರಿಯವಾಗುತ್ತದೆ. ಸಾಧಕ ಜೀವಿಗೆ ಬಾಳಿನ ಬೆಳಕು, ಗುರು. ಆತನ ಕರುಣೆಗಾಗಿ ಹಾರೈಸುವ 'ಜೀವಿ'ಯ ಜೀವಂತ ಹಂಬಲ ಶ್ರೀ ಸಿದ್ಧಲಿಂಗೇಶ್ವರರ ಕೆಲವು ವಚನಗಳಲ್ಲಿ ಕಾಣುತ್ತಿದೆ. ಸಂಸಾರ ಹೇಯ ಸ್ಥಲದ ವಚನಗಳಲ್ಲಿ ಲೋಕ ನೀತಿಗಿಂತ ಹೆಚ್ಚಾಗಿ ಸ್ವಗತ ಧ್ವನಿಯೇ ಹೆಚ್ಚು; 'ನಶ್ವರ'ವನ್ನು ತುಳಿದು, 'ಶಾಶ್ವತ'ವನ್ನೇರುವ ಹಂಬಲವಿದೆ.

ಕಾಮದಿಂದ ಕರಗಿದೆನಯ್ಯಾ, ಕ್ರೋಧದಿಂದ ಕೊರಗಿದೆನಯ್ಯಾ;  
ಲೋಭ ಮೋಹಗಳಿಂದ ಅತಿ ನೊಂದೆನಯ್ಯಾ;  
ಮದ ಮತ್ಸರಗಳಿಂದ ಬೆವ ಬೆದನೆ ಬೆಂದೆನಯ್ಯಾ;  
ಅಹಂಕಾರ ಮಮಕಾರದಿಂದ ಮತಿಮಂದನಾಗಿರ್ದೆನಯ್ಯಾ;  
ಇದು ಕಾರಣ  
ಎನ್ನ ಕಾಮಾದಿ ಷಡುವರ್ಗಂಗಳ ಕಳೆದು  
ಅಹಂಕಾರ ಮಮಕಾರಂಗಳ ಮಾಣಿಸಿ  
ನಿರಹಂಕಾರಿಯೆಂದೆನಿಸಯ್ಯಾ,  
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ (ವ. ೧೨೭)

ಹೀಗೆಯೇ, '........ಸಂಸಾರದಲ್ಲಿ ಸವೆ ಸವೆದು ಅವಿವೇಕಿಯಾದೆನಯ್ಯಾ
ಎನ್ನ ಅವಿವೇಕವ ಕಳೆದು ಶಿವತತ್ವ ವಿವೇಕವನಿತ್ತು
ಕರುಣಿಸಯ್ಯಾ (ವ. ೧೩೧)

'........ವಿಶ್ವತೈಜಸ ಪ್ರಾಜ್ಞನೆಂಬ ಜೀವಭಾವದ ಭ್ರಮೆಯ
ಕಳೆಯಯ್ಯಾ (ವ. ೧೬೨)

'........ಕಾಯಗೊಂಡು ಹುಟ್ಟಿಸಿ, ಕರಣಾದಿ ಗುಣಂಗಳಿಗೆ
ಗುರಿಮಾಡಿ, ಕಾಡಿಸಾಡುವಿರಯ್ಯಾ,

.... .... .... .... .... ....

ಎನ್ನ ಒಳಹೊರಗೆ ಹಿಡಿದಿಪ್ಪ ಮಾಯಾ ಪ್ರಪಂಚವ ಮಾಣಿಸಿ,
ನೀವಲ್ಲಡೆ ಮತ್ತೇನುವನು ಅರಿಯದಂತೆ
ಸಂಸಾರ ಸುಖವ ನೆನೆಯದಂತೆ ಕರುಣಿಸಯ್ಯಾ........' (ವ. ೧೫೯)

ಯುವತಿಯರ ವ್ಯವಹಾರವೆಂಬ ವಿಕಳತೆ ಹತ್ತಿ
ಯೋಗದ ಸಮತೆ ಸಡಲಿತ್ತು ನೋಡಾ
ಸತ್ಯ ಸತ್ತಿತ್ತು ಭಕ್ತಿ ಯರತಿತ್ತು;
ಮಾಯಾ ವಿಲಾಸವೆಂಬ ಮೃತ್ಯು ಮುಟ್ಟದ ಮುನ್ನ
ನಿಮ್ಮತ್ತ ಹಿಡಿದು ಎತ್ತಿಕೊಳ್ಳಯ್ಯಾ........ (ವ. ೧೫೦)

ಮುಂತಾದ ಉದ್ಗಾರಗಳಲ್ಲಿ ಷಡುವರ್ಗ, ಪ್ರಲೋಭನೆ, ಲೋಕ ಸಂಸಾರದ ಆಕರ್ಷಣೆ, ಚಂಚಲ ಮನದ ಹೊಯ್ದಾಟಗಳ ಚಿತ್ರವಿದೆ. ಈ ಮಾನವೀಯ ಘರ್ಷಣೆ, ಹಂಬಲ, ತೊಳಲಾಟಗಳಲ್ಲಿ ಸಿದ್ಧಪುರುಷನ ಬಾಳಿನ ಹಿಂದಿನ 'ಕಾಳ ರಾತ್ರಿ' ಸ್ಥಿತಿ ವ್ಯಕ್ತವಾಗುತ್ತದೆ. ಗುರುಕರುಣೆಯಿಂದಲೇ, ಬೆಳಕು ಕಾಣುವ ಮನೀಷೆ, ಅಂಥ ಬೆಳಕಿಗಾಗಿಯೇ ಬಾಳಬೇಕೆಂಬ 'ನಿರ್ಧಾರ' ಕಾಣಿಸುತ್ತಿದೆ.

## ಅರಿವ ನೀವ ಗುರುವಿನ ಹಂಬಲ

ಹಲವು ಜನ್ಮಂಗಳಲ್ಲಿ ಒದಗಿಸಿಕೊಟ್ಟ ಪಾಪಂಗಳೆಂಬ ಕರ್ಮಂಗಳನು
ಜ್ಞಾನಾಗ್ನಿಯಿಂದ ಸುಟ್ಟುರುಹಿ ಪ್ರಕಾಶಿಸಿ ತೋರಿಸಿದ ಸದ್ಗುರು
ದೇವಂಗೆ
ನಮೋ ನಮೋ ಎಂಬೆನಯ್ಯಾ, ಮಹಾಲಿಂಗಗುರು
ಶಿವಸಿದ್ಧೇಶ್ವರ ಪ್ರಭುವೇ! (ವ. ೧೬೦)

ಗುರುವನೂ ಮಹಾದೇವನನೂ ಒಂದೇ ಎಂದು ಭಾವಿಸಲು
ಬೇಕು ನೋಡಾ
ಎರಡೆಂಬ ಪ್ರತಿಭಾವ ತೋರಿದಡೆ, ಅದು ಅಜ್ಞಾನ
ನೋಡಾ........ (ವ. ೧೬೬)

ಕೇಡಿಲ್ಲದ ಗುರುವಿಂಗೆ ಕೇಡ ಕಟ್ಟುವರಯ್ಯಾ
.... .... .... ....
ತನುಮನಭಾವದಲ್ಲಿ ವಜ್ರಲೇಪದಂತೆ ಲೇಪಿಸಿಕೊಂಡು
ಒಳಹೊರಗೆ ಓಂ ನಮಃಶಿವಾಯಯೆನುತ
ಸದಾ ಸನ್ನಿಹಿತನಾಗಿಪ್ಪುದ ನರಿಯದೆ ಕೆಟ್ಟಿತ್ತು ಇದ್ದಿತ್ತು ಎನ್ನಲೇಕೆ
ಕೆಡುವಾಗ ಹಾಲಂಬಲವೇ? ಹಳಸುವಾಗ ಹಾಲೋಗರವೇ ?
ಅಧು ಕೆಡುವುದೂ ಅಲ್ಲ, ಅಳಿವುದೂ ಅಲ್ಲ.
ನಿಮ್ಮ ಸಂಕಲ್ಪ ವಿಕಲ್ಪವೆಂಬ ಸಂದೇಹವೇ ಕೆಡಿಸುತ್ತ, ಅಳಿಸುತ್ತ
ನಿಮ್ಮ ಕಾಡುತಿಪ್ಪವು ಕಾಣಿರಯ್ಯಾ.... (ವ. ೧೭೦)

ಮುಂತಾದ ನುಡಿಗಡಣದಲ್ಲಿ ಶ್ರೀ ತೋಂಟದ ಸಿದ್ಧಲಿಂಗೇಶ್ವರ ಗುರುಭಕ್ತಿಯ ಹಂಬಲ, ಗುರುಮಹಿಮೆಯ ಘನತೆ ವ್ಯಕ್ತವಾಗಿದೆ. ವೀರಶೈವದ ಅಷ್ಟಾವರಣಗಳಲ್ಲಿ ಗುರುವಿಗೇ ಪ್ರಥಮಸ್ಥಾನ; ಅಲ್ಲದೆ ತನ್ನ ತಾನರಿಯುವ ಅಭೀಪ್ಸೆಯ ಸಾಧಕನಿಗೆ 'ತನ್ನರಿವೇ ಗುರು', ಸ್ವಯದರಿವಿನ ರೂಪವೇ ಗುರು. ತನು-ಮನದ ಶುದ್ಧೀಕರಣ ಗುರುವಿನಿಂದಲೇ ಮಂತ್ರ, ಕ್ರಿಯಾ, ಜ್ಞಾನ, ದೀಕ್ಷೆ, ದೊರೆವುದು ಗುರುವಿನಿಂದಲೇ. ಗುರುವೇ ಸರ್ವೋತ್ತಮ, ಆತನೇ ಪ್ರತ್ಯಕ್ಷ ಶಿವನೆಂಬ ನಂಬಿಕೆ ವ್ಯಕ್ತವಾಗಿದೆ. ಐತಿಹಾಸಿಕವಾಗಿ ಶ್ರೀ ತೋಂಟದಾರ್ಯರ ಗುರುವಿನ ಬಗೆಗೆ ಖಚಿತ ಮಾಹಿತಿ ದೊರೆಯದಿದ್ದರೂ, ಆತ ಶಿಷ್ಯನ ವಚನಗಳ ಅಂಕಿತವಾಗಿ, 'ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ' ಆಗಿದ್ದಾನೆ. ಇಂಥ ಮಹಾ ಶಿಷ್ಯನನ್ನು ಪಡೆದ ಆತ, 'ಮಹಾ ಗುರುವೇ' ಆಗಿ 'ಮಹಾಲಿಂಗ'ವೇ ಆದ ಶಿವಸಿದ್ಧ 'ಪ್ರಭು'ವಲ್ಲದೆ ಮತ್ತಿನ್ನಾರು? ಶ್ರೀ ಸಿದ್ಧಲಿಂಗೇಶ್ವರರ ದಿವ್ಯ ಜ್ಞಾನ, ತಾತ್ವಿಕ ಸಂಪತ್ತಿ, ಅನುಭಾವವನ್ನು ಸಶಾಸ್ತ್ರೀಯ ವಿವಕ್ಷೆಗಿಳಿಸುವ ಪ್ರತಿಭೆ ಗುರುದತ್ತವಾದುದು; ನಿರಂತರ ಸಾಧನೆಯಿಂದ ಹಸ್ತಗತವಾದುದು. ಶ್ರೀ ತೋಂಟದಾರ್ಯರು ತೋರಿದ ಅನುಭಾವದ ಔನ್ನತ್ಯ, ಯೋಗಸಾಧನೆಯ ಮಹತ್ವ ಅಂತರಂಗದ ಅರಿವಿನ ವಿಕಾಸವನ್ನು ವಿವರ, ವಿರಳವಾಗಿ ಬಿಡಿಬಿಡಿಸಿ ಹೇಳಬಲ್ಲ ಪ್ರತಿಭೆ ಅನ್ಯಾದೃಶವಾದುದು. ಹನ್ನೆರಡನೆ ಶತಮಾನದ ಶಿವಶರಣರ ಅನುಭಾವದ ವಚನಗಳ ಶಾಸ್ತ್ರೀಯ ಅಧ್ಯಯನಕ್ಕೆ, ಶ್ರೀ ತೋಂಟದ ಸಿದ್ಧಲಿಂಗೇಶ್ವರ

ಸಶಾಸ್ತ್ರೀಯ ಅನುಭಾವ ವಿವರಣೆ ಮಾರ್ಗದರ್ಶಕ ಕೈಪಿಡಿಯಾಗಿದೆ. ಜ್ಞಾನಾಕಾಂಕ್ಷೆಗಳನ್ನು ಕೈ ಹಿಡಿದು ನಡೆಸುತ್ತಿದೆ, ಸಾಧಕನ ಅನುಭವದ ತೆರೆತೆರೆಗಳನು ಹೆಸರಿಸಿ, ವಿಶ್ಲೇಷಿಸಿ, ತೆರೆತೆರೆದು ತೋರುತ್ತಿದೆ.

[೩]

## ಷಟ್‌ಸ್ಥಲ ತತ್ವಜ್ಞಾನದ ಕೈಪಿಡಿ

'ಷಟ್‌ಸ್ಥಲ ವಿವೇಕ' ವೀರಶೈವದ ಹೃದಯ; ತತ್ವಾನುಭವ ಪ್ರಪಂಚಕ್ಕೆ ನೀಡಿದ ವಿಶಿಷ್ಟ ಕಾಣಿಕೆ. 'ಜೀವ' 'ದೇವ' ನಾಗುವ ವಿಕಾಸದ ಹೆಜ್ಜೆಗಳು. ಈ ಷಟ್‌ಸ್ಥಲ–ಭಕ್ತ ಮಹೇಶ, ಪ್ರಸಾದಿ–ಪ್ರಾಣಲಿಂಗಿ, ಶರಣ–ಐಕ್ಯ. ಭಕ್ತನಲ್ಲಿ ಮೂಡಿದ ಮಹೇಶ, ಈ ಭಕ್ತ-ಮಹೇಶರಲ್ಲಿ ರೂಪಿತವಾದ ಪ್ರಸಾದಿ, ಅವನಲ್ಲಿ ವಿಕಾಸವಾದ ಪ್ರಾಣಲಿಂಗಿ, ಈ ನಾಲ್ಕು ಸ್ಥಲದ ಸಾಧನೆಯ ಶಿಖರದಲ್ಲಿ ಮೂಡಿದ 'ಶರಣ', ಭಕ್ತ–ಮಹೇಶ–ಪ್ರಸಾದಿ–ಪ್ರಾಣಲಿಂಗಿಗಳ ಏಕತ್ವದಭಿವ್ಯಕ್ತಿ, 'ಐಕ್ಯ'; ಈ ಎಲ್ಲ ಸ್ಥಳಗಳ ಸಮರಸ, ಸಮುಸ್ಥಿತಿ ಸ್ಥಳ. ಕಾವ್ಯ ಮೀಮಾಂಸೆಯಲ್ಲಿ ಸರ್ವರಸವನ್ನೊಳಗೊಂಡ 'ಶಾಂತರಸ' ದಂತೆ, ಈ ಸರ್ವ ಸ್ಥಳಗಳನ್ನೊಳಗೊಂಡ ಐಕ್ಯಸ್ಥಳ. 'ಅಂಗ' ದ ಏರುವಿಕೆ, 'ಲಿಂಗ' ದ ಇಳಿಯುವಿಕೆ ಒಡಬೆರೆದು, ಹುರಿಗೊಂಡು, ಒಂದಾದುದು ಐಕ್ಯಸ್ಥಳ.

ಷಟ್‌ಸ್ಥಲದ ಸಂದು-ಸಂಬಂಧಗಳನ್ನು ಕ್ರಮಾನ್ವಿತವಾಗಿ ವಿವರಿಸುವುದು, ಅರ್ಥೈಸುವುದು, ವಿಶೇಷ ಪ್ರತಿಭೆಯ ಕಾರ್ಯ. ಕ್ರಮ ಸಮುಚ್ಚಯವಲ್ಲದೆ ಸಮಸಮುಚ್ಚಯಾತ್ಮಕ 'ಶಿವಜೀವೈಕ್ಯ' ಸಾಧನೆಯನ್ನು ನಿದರ್ಶಿಸುವ 'ಷಟ್ ಸ್ಥಲ' ಬಸವಾದಿ ಪ್ರಮಥರ ಅನುಭವದಲ್ಲಿ ವಚನ ಸಮುದಾಯವಾಗಿ ಹೊಮ್ಮಿದೆ. ಅಲ್ಲಿ ಮೂಡಿದ ಈ 'ವಿವೇಕ' ದ್ವಿತೀಯ ಘಟ್ಟದ ತೋಂಟದ ಸಿದ್ಧಲಿಂಗೇಶ್ವರರಂಥ ಅನುಭಾವಿತತ್ವಜ್ಞಾನಿಗಳಲ್ಲಿ 'ಸ್ಥಲಕಟ್ಟು' ಗಳಾಗಿ 'ಶಾಸ್ತ್ರೀಯ ವಿಶ್ಲೇಷಣೆ' ಯಾಗಿ ವಿವಕ್ಷಿತವಾಗಿದೆ. ಮಹಾಲಿಂಗದೇವ, ಜಕ್ಕಣಾಚಾರ್ಯರ ಪ್ರತಿಭೆಯ ಸ್ಫುರಣವಾದ ಈ 'ಸ್ಥಲ ವಿವೇಕ' ಶ್ರೀ ತೋಂಟದಾರ್ಯರ 'ಷಟ್‌ಸ್ಥಲ ಜ್ಞಾನ ಸಾರಾಮೃತ' ವಚನಗಳಲ್ಲಿ ನೂತನ ಸ್ಥಲಗಳನ್ನು ಕಂಡುಕೊಂಡ ಪರಂಪರೆಯಿಂದ ಬಂದ ಷಟ್‌ಸ್ಥಲ 'ಜ್ಞಾನ' ವನ್ನು ಸಮರ್ಪಕವಾಗಿ, ಸೂತ್ರಬದ್ಧವಾಗಿ ವಿವರಿಸಿದ 'ಅನುಭಾವ ಶಾಸ್ತ್ರ' ವಾಗಿದೆ. ಹಿಂದಿನ ಸ್ಥಲಕಟ್ಟುಗಳ ವಿವೇಚಕರು, ( ಮಹಾಲಿಂಗ, ಜಕ್ಕಣ ಮುಂತಾದವರು ) ಇತರ ಶರಣರ ವಚನಗಳನ್ನು ಸಂಪಾದಿಸಿ, ವಿಂಗಡಿಸಿದರೆ,

ಶ್ರೀ ಸಿದ್ಧಲಿಂಗೇಶ್ವರರು ಸ್ವಯ ವಚನಗಳಲ್ಲಿಯೇ ಈ ಎಲ್ಲ ಸ್ಥಳ ಕುಳ ವಿಜ್ಞಾನವನ್ನು ಬಿತ್ತರಿಸಿದ್ದರೆ 'ಪಿಂಡಸ್ಥಲ' ದ ಪೂರ್ವಭಾವಿಯಾಗಿ ವಿವೇಚಿಸುವ 'ಸರ್ವಶೂನ್ಯ ನಿರಾಲಂಬ ಸ್ಥಲ' ಸೃಷ್ಟಿ ಪೂರ್ವದ 'ಆತ್ಮ'–'ಪರಮಾತ್ಮ' ಏಕತ್ರವಾದ 'ಶೂನ್ಯ' ವಷ್ಟೇ ಅಲ್ಲ, ಸರ್ವಶೂನ್ಯ, ಅದೂ 'ನಿರಾಲಂಬ' ಅವಲಂಬನೆ, ಆಶ್ರಯವನ್ನು ಹಾರೈಸಿದ ತಾನೇ ತಾನಾಗಿ ಇದ್ದ 'ಸ್ಥಲ' ದ ಸಮರ್ಪಕ ವಿವರಣೆ, ಅನುಭಾವಿ ಸಿದ್ಧಲಿಂಗೇಶ್ವರರ ಕೊಡುಗೆ.

ಇಂದಿನ ಅಣು-ಪರಮಾಣು ವಿಜ್ಞಾನಿಗಳೂ, ಪೂರ್ವದ ವಿಶ್ವದ ಮೂಲ ವನ್ನು ಇದೇ ಬಗೆಯಾಗಿ ವಿವರಿಸುತ್ತಾರೆ. 'ನಿತ್ಯನಿರಂಜನ ಪರವಸ್ತು' (ವ. ೧೦) 'ಸರ್ವಶೂನ್ಯ' ವಾಗಿ 'ತಾನೇ ತಾನಾಗಿರ್ದು' 'ನಾದ ಬಿಂದು ಕಳೆ' ವೊಂದಾಗಿ..........'ಶೂನ್ಯ, ಮಹಾಶೂನ್ಯ' ಭೇದವಿಲ್ಲದೆ........ನಿಃಕಲ ನಿರಾಳ ತತ್ವವೆಂಬ ಹೆಸರಿಲ್ಲದೆ........ತನ್ನ ತಾನರಿಯದೆ....' ಇದ್ದುದನ್ನು ವರ್ಣಿಸಿದ್ದಾರೆ. ಶ್ರೀ ಸಿದ್ಧಲಿಂಗೇಶ್ವರರು ಮುಂದೆ ಈ 'ಪರತತ್ವ' 'ಅಯೋನಿ ಸಂಭವವಾದ ಕಾರಣ............ನಿಃಕಲ ಲಿಂಗ' ವಾಯಿತು. ಅದು 'ಅಖಂಡ ಪರಿಪೂರ್ಣ ಅದ್ವಯ ನಿಃಕಲ ನಿಜ ಜ್ಞಾನಮೂರ್ತಿ', 'ನಿರವಯ ಲಿಂಗ' 'ನಿರಾಧಾರ, ನಿರಾಲಂಬ' ವಾದರೂ ಅದೇ ಸರ್ವಾಧಾರ (ವ. ೨೮) ಅದು 'ಸಚ್ಚಿದಾನಂದ ನಿತ್ಯಪರಿಪೂರ್ಣ'. ಮುಂದೆ ಇದು 'ತನ್ನ ಸ್ವಲೀಲೆಯಿಂದ....ಅನಂತಕೋಟಿ ಬ್ರಹ್ಮಾಂಡಗಳನು ಸರ್ವಸಮುಸ್ತವೆಲ್ಲವನು ತನ್ನಲ್ಲಿ ಹುಟ್ಟಿಸಿ, ತನ್ನಲ್ಲಿ ಗರ್ಭೀ ಕರಿಸಿ, ತನ್ನಲ್ಲಿ ಲಯವ ಮಾಡಿಕೊಂಡು ಅಖಂಡ ಪರಿಪೂರ್ಣ ಗೋಳಾಕಾರ ತೇಜೋಮೂರ್ತಿ (ಸೂತ್ರ ಪು. ೧೮) ಯಾದ 'ಮಹಾಲಿಂಗ' ವಾಯಿತು. ಅದು 'ಅನಂತಕೋಟಿ ಸೋಮಸೂರ್ಯ ಪ್ರಕಾಶವನುಳ್ಳ ಪರಂಜ್ಯೋತಿರ್ಲಿಂಗ' (ವ. ೩೪). 'ಪಿಂಡಾಂಡವನೊಳಕೊಂಡ ಅಖಂಡ ಲಿಂಗ' (ವ. ೩೭) ಅಲ್ಲಿಂದ ಮುಂದೆ ಅಂಗ-ಲಿಂಗೋದ್ಭವ ಸ್ಥಲ–ನಿರಾಕಾರ ಪರವಸ್ತುವಿನಲ್ಲಿ ಮಹಾಜ್ಞಾನ ಅದೇ ಶರಣ ರೂಪಾಯಿತು. ಈ 'ಶರಣನ ಉತ್ಪತ್ತಿ....ಸ್ಥಿತಿ....ಲಯ' ದ ಜ್ಞಾನವನ್ನು 'ಶ್ರೀ ಗುರುವಿನ ಮುಖದಿಂದ ಅರಿದು 'ನಿಶ್ಚಯ' (ವ. ೪೪) ಮಾಡಿಕೊಂಡಾಗ ಅಂಗ-ಲಿಂಗ ಜ್ಞಾನ ದೊರಕುತ್ತದೆ. ಅನಂತರ ವಿಶ್ವದ ಆಗುವಿಕೆಯನ್ನು 'ಪಂಚಮೂರ್ತಿ ಲಿಂಗಸ್ಥಲ' ದಲ್ಲಿ ಶಾಸ್ತ್ರಬದ್ಧವಾಗಿ ವಿವರಿಸ ಲಾಗಿದೆ.

ಉಳಿದ ಶರಣರು ಪಿಂಡಸ್ಥಲ–ಪಿಂಡಜ್ಞಾನ ಸ್ಥಲ–ಸಂಸಾರ ಹೇಯಸ್ಥಲ-ಗುರುಕರುಣ ಸ್ಥಲಗಳನ್ನು ಭಕ್ತ ಸ್ಥಲದಲ್ಲಿಯೇ ಸೇರಿಸಿದರೆ, ಶ್ರೀ ಸಿದ್ಧ ಲಿಂಗೇಶ್ವರರು ಇವನ್ನೆಲ್ಲ ಭಕ್ತ ಪೂರ್ವದ ಸ್ಥಳಗಳೆಂದೇ ನಿರ್ದೇಶಿಸಿದ್ದಾರೆ.

ಜೊತೆಗೆ, ಗುರುಕಾರುಣ್ಯದ ವ್ಯಕ್ತರೂಪಾದ ಲಿಂಗಧಾರಣ–ವಿಭೂತಿ–ರುದ್ರಾಕ್ಷಿ–ಪಂಚಾಕ್ಷರೀ ಮಂತ್ರಗಳನ್ನು ಒಂದೊಂದು ಸ್ಥಲಗಳಾಗಿ ವಿಂಗಡಿಸಿದ್ದಾರೆ. ಅನಂತರವೇ 'ಭಕ್ತ ಸ್ಥಲ' ! 'ಭಕ್ತ' ನಾಗುವುದು, 'ಪಿಂಡಜ್ಞಾನ............... ಪಂಚಾಕ್ಷರೀ ಮಂತ್ರ ದತ್ತನಾದಾಗ ಮಾತ್ರ. ಮಹಾಲಿಂಗ ದೇವರ 'ಏಕೋತ್ತರಶತಸ್ಥಲ' ದಲ್ಲಿ ಇವುಗಳನ್ನೆಲ್ಲ ಭಕ್ತ ಸ್ಥಳದಲ್ಲಿ ಸೇರಿಸಲಾಗಿದೆ. ಹೀಗೆ ಅಂತರ್ಗತಗೊಳಿಸಲು ಒಪ್ಪದ ಶ್ರೀ ಸಿದ್ಧಲಿಂಗೇಶ್ವರರ ನೂತನ ಸ್ಥಲಕಟ್ಟು ಅವರ ಅನುಭಾವ ವಿಶಿಷ್ಟತೆ, ವಿಶ್ಲೇಷಣಾತ್ಮಕ ಬುದ್ಧಿಮತ್ತೆಯ ದ್ಯೋತಕ.

[೪]

## ಷಟ್‌ಸ್ಥಲ ಜ್ಞಾನಸಾರಾಮೃತ

ಭಕ್ತಸ್ಥಳದಿಂದ ಐಕ್ಯಸ್ಥಳದವರೆಗಿನ 'ಆತ್ಮವಿಕಾಸ'ದ ಸ್ಪಷ್ಟವಾದ ಚಿತ್ರ 'ಷಟ್‌ಸ್ಥಲ ಜ್ಞಾನಸಾರಾಮೃತ' ವಚನಗಳಲ್ಲಿದೆ. 'ಬೀಜ'ದಲ್ಲಿ ಬೆಳೆಯಲಿರುವ ವೃಕ್ಷದ ಸರ್ವಾಂಗಗಳು 'ಸಂಕಲ್ಪ'ರೂಪಾಗಿರುತ್ತವೆ. ಆ ವೃಕ್ಷದಲ್ಲಿ ಮೂಡಿದ ಹಣ್ಣಿನಲ್ಲಿರುವ 'ಬೀಜ'ದಲ್ಲಿಯೂ ಈ ಮೂಲ ಬೀಜದ, ಅಂತೆಯೇ ಇಂದು ತೋರುವ, ಮುಂದೆ ಆಗಲಿರುವ 'ಮರ'ದ ಶಕ್ತಿಯೆಲ್ಲ 'ಸಂಸ್ಕಾರ'ರೂಪದಲ್ಲಿರುತ್ತದೆ. ಈ ಎಲ್ಲ ಅವಸ್ಥಾಂತರಗಳಲ್ಲಿ ಮೂಲ 'ಬೀಜ'ದ 'ಮೂಲರಸ' ಓತಪ್ರೋತವಾಗಿ ಹರಿದು, ಹರಡಿರುವಂತೆ ಆ 'ಪರವಸ್ತು', ಭಕ್ತನಭಕ್ತ, ಭಕ್ತನಮಹೇಶ ಇತ್ಯಾದಿ ಅವಾಂತರ ಸ್ಥಲಗಳಾಗಿ, ....ಐಕ್ಯನ ಭಕ್ತ, ....ಐಕ್ಯನ ಪ್ರಾಣಲಿಂಗಿ, ....ಐಕ್ಯನ ಶರಣಸ್ಥಲವಾಗಿರುವುದನ್ನು ವಿವೇಚಿಸಲಾಗಿದೆ. ಅಲ್ಲೆಲ್ಲ 'ಪರವಸ್ತು'ವಿನ ಆಗುವಿಕೆಯೇ ತೋರುತ್ತಿದೆ. ಹೀಗೆ ಷಟ್‌ಸ್ಥಲಗಳ ಸಮ ಸಮುಚ್ಚಯ ವಿಶೇಷಣೆ ಕರಾರುವಾಕ್ಕಾಗಿ, ಸೂತ್ರಪ್ರಾಯವಾಗಿ ಮೂಡಿಬಂದಿದೆ. ಶ್ರೀ ಸಿದ್ಧಲಿಂಗೇಶ್ವರರ ವಚನಗಳಲ್ಲಿ ಷಟ್‌ಸ್ಥಲಗಳ ಕೀಲನ್ನರಿಯಬಯಸುವವರಿಗೆ, ಅವುಗಳ ಒಳಸಂಬಂಧಗಳನ್ನು ತಿಳಿಯಲಪೇಕ್ಷಿಸುವವರಿಗೆ, ಅಲ್ಲದೆ ಆಯಾ ಸ್ಥಳ-ಕುಳಗಳ ಶಾಸ್ತ್ರಖಚಿತತೆಯನ್ನರಸುವವರಿಗೆ, ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರ ಷಟ್‌ಸ್ಥಲ ವಚನಗಳು ಮಾರ್ಗದರ್ಶಕ ಸೂತ್ರಗಳು. ಅವು ಗಣಿತಶಾಸ್ತ್ರದಲ್ಲಿರುವ 'ಪ್ರಮೆಯ'ಗಳಂತೆ ಸೂತ್ರರೂಪದಲ್ಲಿವೆ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗ, ಶರಣ, ಐಕ್ಯ–ಸ್ಥಲಗಳ ಪ್ರಥಮ ವಚನಗಳು ಹಾಗೂ ಅಲ್ಲಿನ 'ಸೂತ್ರ'ಗಳ ಆಯಾ ಸ್ಥಲದ ಗುಣ, ಲಕ್ಷಣಗಳನ್ನು ಖಚಿತವಾಗಿ ನಿರ್ದೇಶಿಸುತ್ತವೆ. ಉದಾಹರಣೆಗೆ, ವಿವರಿಸಲು ಕಷ್ಟವಾದ 'ಐಕ್ಯಸ್ಥಲ'ದ ಸೂತ್ರ, ವಚನ ನೋಡಬಹುದು.

ಕ್ಷುತ್ತು, ಪಿಪಾಸೆ, ಶೋಕ, ಮೋಹ, ಜರಾ, ಮರಣವೆಂಬ
ಷಡೂರ್ಮಿಗಳಿಲ್ಲದೆಯಿಪ್ಪನು
ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರವೆಂಬ
ಷಡುವರ್ಗಗಳಿಲ್ಲದೆಯಿರುತಿರ್ಪನು
ನಾಹಂ, ಕೋಹಂ, ಸೋಹಂ ಎಂಬ
ಭಾವರಹಿತನಾಗಿಪ್ಪನು
ಅಷ್ಟವಿಧಾರ್ಚನೆ, ಷೋಡಶೋಪಚಾರರಹಿತನಾಗಿಪ್ಪನು
ಕರ್ಪುರ ಅಗ್ನಿ ಸಂಯೋಗವಾಗಿ ಕರ್ಪುರದ ಗುಣವಳಿದು
ಅಗ್ನಿಯಾದಂತೆ
ಲಿಂಗವ ನೆನೆನೆನೆದು ಲಿಂಗವೇ ತಾನಾಗಿಪ್ಪುದೀಗ
ನಿಜಲಿಂಗೈಕ್ಯಸ್ಥಲ........ (ವ. ೫೭೭)

ಅಂಗಗುಣಗಳಾದ ಷಡೂರ್ಮಿ, ಅರಿಷಡುವರ್ಗಗಳನ್ನು ಗೆದ್ದು, ನಾಹಂ, ಕೋಹಂ, ಸೋಹಂ ಭಾವವಳಿದು 'ದಾಸೋಹಂ' ಕರ್ಪುರವಾಗಿ, ಗುರುಕೃಪೆಯ ಅಗ್ನಿ ಸ್ಪರ್ಶದಿಂದ, 'ಜ್ಯೋತಿ'ರೂಪಾಗಿ, 'ಲಿಂಗ'ವೇ ಆಗಿ, – ಹೋಗುವುದಲ್ಲ, – 'ಇಪ್ಪುದು', – ಬಾಳುವುದು, – 'ನಿಜಲಿಂಗೈಕ್ಯ', – ಸ್ಥಿತಿ-ಸ್ಥಲ. ಅದೇ 'ಲಿಂಗ ಲೀಲಾ ವಿಲಾಸ' ಸ್ಥಳ. ಶ್ರೀ ಸಿದ್ಧೇಶ್ವರರು ಇನ್ನೂ ಮುಂದುವರೆದು, ಷಟ್‌ಸ್ಥಲವನ್ನುತ್ತರಿಸಿನ 'ನಿರವಯ ಸ್ಥಲ'ವೊಂದನ್ನು ಕಂಡರಿಸಿದ್ದಾರೆ. ಅದೇ 'ಬಯಲು' – 'ಶೂನ್ಯ'ಸ್ಥಳ. ಮಹಲಿಂಗದೇವನ ಏಕೋತ್ತರಶತಸ್ಥಳದಲ್ಲಿಯೂ, ಷಟ್‌ಸ್ಥಲಗಳ ನಂತರ 'ನಿರವಯ ಸ್ಥಲ' ವಿವೇಚನೆ ಬಂದಿಲ್ಲದಿರುವುದು ಗಮನೀಯ.

**ರಾಜಶಿವಯೋಗ**

ಒಳಗೆ ನೋಡಿದರೆ ಒಳಗೆ ಬಯಲು
ಹೊರಗೆ ನೋಡಿದರೆ ಹೊರಗೆ ಬಯಲು ನೋಡಾ.
ನೆನೆದೆನೆಂದರೆ ಮನ ಬಯಲು
ನೆನೆಯಿಸಿಕೊಂಡೆನೆಂದರೆ ನೀನಿಲ್ಲವಾಗಿ
ನಾನು ಬಯಲು, ನೀನು ಬಯಲು ನೋಡಾ.... (ವ. ೬೮೭)

ಎಂದು ಅದೆಷ್ಟು ತಿಳಿಯಾಗಿ, ಎಳೆ ಎಳೆಯಾಗಿ ಬಿಡಿಸಿ ತೋರಿದ್ದಾರೆ ಶ್ರೀ ಸಿದ್ಧಲಿಂಗೇಶ್ವರರು. ಶುದ್ಧ ಸ್ಫಟಿಕಘಟದ ತಿಳಿಜಲದಲ್ಲಿ ಓಡಾಡುವ 'ಭಾವದ ಮೀನಿನ ಹೆಜ್ಜೆ'ಗಳನ್ನೂ ಗುರುತಿಸಬಹುದಿಲ್ಲಿ. ಆರು ಸ್ಥಲಗಳು ಒಂದರಲ್ಲೊಂದು ಅಡಗಿ, ಕರಗಿ,

'.... ಇಂತೀ ಷಡಾಂಗಯೋಗ ಸಮರಸವಾಗಿ
ಷಡುಸ್ಥಲವ ಮೀರಿ ನಿರವಯ ಸ್ಥಲವನೆಯ್ದಿ
ಆ ನಿರವಯಸ್ಥಳ ನಿರಾಳದಲ್ಲಡಗಿ
ಆ ನಿರಾಳ ನಿತ್ಯ ನಿರಂಜನ ಪರವಸ್ತು ತಾನಾಯಿತ್ತಾಗಿ
ಕ್ರಿಯಾ ನಿಷ್ಪತಿ ಜ್ಞಾನ ನಿಷ್ಪತಿ ಭಾವ ನಿಷ್ಪತಿ
ಮಾಡುವ ಕ್ರೀಗಳೆಲ್ಲಾ ನಿಷ್ಪತಿಯಾಗಿ
ಅರಿವ ಅರುಹೆಲ್ಲಾ ಅಡಗಿ
ಭಾವಿಸುವ ಭಾವವೆಲ್ಲಾ ನಿರ್ಭಾವವಾಗಿ
ನಿರ್ಲೇಪಕ ನಿರಂಜನವುಸ್ತು ತಾನು ತಾನಾದಲ್ಲದೆ
ಧ್ಯಾನಿಸಲಿಕೇನೂ ಇಲ್ಲ.
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭು ತಾನೆ
ಷಟ್‌ಸ್ಥಲಜ್ಞಾನ ಸಾರಾಯಸ್ವರೂಪ........ (ವ. ೭೦೧)

ವಾದ ನಿರವಯ ಸ್ಥಿತಿಯನ್ನೂ – 'ಶೂನ್ಯ ಸಂಪಾದನೆ'ಯನ್ನು – 'ಶಿವಾದ್ವೈತ ಸಿದ್ಧಿ'ಯನ್ನು ವರ್ಣಿಸಿದ್ದಾರೆ ಶ್ರೀ ಸಿದ್ಧಲಿಂಗೇಶ್ವರರು. ಇಂಥ ಯೋಗವನ್ನು 'ರಾಜಶಿವಯೋಗ'ವೆಂದು ಕರೆದಿರುವಂತಿದೆ. ಪ್ರಸಿದ್ಧವಾದ ರಾಜಯೋಗ 'ಕೆಲವು ಶೈವರುಗಳು ಮಾಡುವರಾಗಿ। ರಾಜಯೋಗವೆಂಬುದು ಗಾಜುಗೋಜು ನೋಡಾ.... (ವ. ೩೫೮)' ಎಂದು ಟೀಕಿಸಿ, '.... ನಿಮ್ಮ ಶರಣರು ಲಿಂಗಪ್ರಾಣಿಗಳು, ಪ್ರಾಣಲಿಂಗ ಸಂಬಂಧಿಗಳು, ಪ್ರಸಾದ ಮುಕ್ತರು. ಈ ಮೂರು ಪ್ರಕಾರದಲ್ಲಿ ಕೂಡುತ್ತಿಪ್ಪರು ಶಿವಯೋಗಿಗಳು. ಇದು ಕಾರಣ ನಿಮ್ಮ ಶರಣರು ಸ್ವಾನುಭಾವ ಜ್ಞಾನ, ಶುದ್ಧ ಶಿವಯೋಗದಲ್ಲಿ ಸ್ವರೂಪ ಜ್ಞಾನಿಗಳು.... (ವ. ೩೫೮) ಎಂದು ಶ್ರೀ ಸಿದ್ಧಲಿಂಗೇಶ್ವರರು ಸ್ಥಾಪಿಸಿದಾರೆ

ನಾದ ಬಿಂದು ಕಳಾ ಭೇದವ ತಿಳಿದಲ್ಲದೆ
ಆರಕ್ಷರವಾದ ತೆರನನರಿಯಬಾರದು.
ಆರಕ್ಷರಕೆ ಮೂಲ ಪ್ರಣಮವ ತಿಳಿದಲ್ಲದೆ
ನಾದ ತಲೆದೋರದು.
ನಾದ ಬೆಳಗಿನ ಕಳೆಯ ನೋಡಿ ಕಂಡಲ್ಲದೆ
ರಾಜ ಶಿವಯೋಗಿಯಾಗಬಾರದು
ರಾಜ ಶಿವಯೋಗವೆಂಬುದು
ಆದಿಯಲ್ಲಿ ಶಿವಬೀಜವಾದ ಮಹಾಮಹಿಮನಿಗೆ ಸಾಧ್ಯವಪ್ಪುದಲ್ಲದೆ
ತ್ರೈಜಗದಲಾರಿಗೂ ಅಸಾಧ್ಯ ನೋಡಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ (ವ. ೩೭೨).

ಹೀಗೆ ಸ್ವಸ್ವರೂಪಜ್ಞಾನ ಸಾಧನೆಯೇ ಶಿವಯೋಗ. ಸುಪ್ರಸಿದ್ಧ 'ರಾಜಯೋಗ' ವನ್ನು ಮೀರಿದ 'ಸಹಜಯೋಗ' ವಾದ್ದರಿಂದ ಇದನ್ನು ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು 'ರಾಜಶಿವಯೋಗ' ವೆಂದು ಕರೆದಿರುವಂತೆ ತೋರುತ್ತದೆ. ಅಂಥ ರಾಜಶಿವಯೋಗ ಸಿದ್ಧರಾದ ಶ್ರೀ ತೋಂಟದಾರ್ಯರ ವಚನಗಳಲ್ಲಿ ಈ ಶಿವಾದ್ವೈತ ಯೋಗದ ಸ್ಪಷ್ಟ ನಿಲುವು ಕಂಡು ಬರುತ್ತಿದೆ. ಸರ್ವಾಂಗಲಿಂಗಿ ಸ್ಥಿತಿ ಸಾಧನೆಯ ಈ ಯೋಗದ 'ರಹಸ್ಯ' ವನ್ನು ಯೋಗಾನುಭವಿಗಳೇ ವಿವರಿಸಬೇಕು.

## [೫]

ಕೊನೆಯದಾಗಿ, ವಿರಕ್ತ ತೋಂಟದಾರ್ಯ ತನ್ನ ಸಿದ್ಧೇಶ್ವರ ಮಹಾಪುರಾಣದಲ್ಲಿ ತನ್ನ ಗುರು ಸಿದ್ಧಲಿಂಗೇಶ್ವರರನ್ನು,

ವಿಲಸದಾಚಾರ ಲಿಂಗವೆ ದೇಹವಾಗಿ,
ನಿಷ್ಕಲತರದ ಗುರುಲಿಂಗವೇ ಆತ್ಮವಾಗಿ,
ನೆರೆ ಸುಲಭದಿಂ ಶಿವಲಿಂಗವೇ ಪ್ರಾಣವಾಗಿ
ಚರಲಿಂಗ ಇಂದ್ರಿಯಗಳಾಗಿ
ವಿಲಸತ್ ಪ್ರಸಾದ ರೂಪದ ಲಿಂಗವೇ ವಿಷಯ ಕುಲವಾಗಿ
ತೊಳಗುವ ಮಹಾಲಿಂಗವೇ ಮಹೋಜ್ವಲ ತೃಪ್ತಿಯಾಗಿ
ತೃಪ್ತಿಯಿಂದಿತರೇತರವ ನರಿಯದೊಪ್ಪಿರ್ದನು

ಎಂದು ವರ್ಣಿಸಿರುವುದು ಈ ಸರ್ವಾಂಗಲಿಂಗಿ ರಾಜ ಶಿವಯೋಗಿಯನ್ನೇ. ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಬಹುಮುಖ ಸಾಧನೆಯಲ್ಲಿ ಇದೊಂದು ಪ್ರಮುಖ ಸಾಧನೆ. ಅತ್ಯಂತ ಪ್ರಮುಖ ಸಾಧನೆಯೂ ಅಹುದು. ಆ ಶಿವಯೋಗ ಸಿದ್ಧಿಯ ಗಂಗೋತ್ರಿಯಿಂದ ನಿರಂತರವಾಗಿ ಹರಿಯುತ್ತಿದೆ ಅಧ್ಯಾತ್ಮ ಗಂಗಾವಾಹಿನಿ. ಆ ಅಧ್ಯಾತ್ಮ ದೇವಗಂಗೆಯನ್ನು ಮಾನವ ಲೋಕಕ್ಕೆ ತಂದಿತ್ತ ಅನುಭಾವಿ ಭಗೀರಥರು ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು. ಅವರು ಯೋಗಿರಾಜನಾದಂತೆ, ರಾಜಶಿವಯೋಗಿಯೂ ಅಹುದು.

ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ

# ನಿರಂಜನ ಜಂಗಮ ಪರಂಪರೆ

— ಪಂ. ನಾಗಭೂಷಣ ಶಾಸ್ತ್ರಿಗಳು

ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಸತ್ಪರಂಪರೆಯನ್ನು ಸಮೀಕ್ಷಿಸಿದ ಪ್ರತಿಯೊಬ್ಬ ಲಿಂಗಾಭಿಮಾನಿಗೂ ನಿರತಿಶಯವಾದ ಗೌರವಾದರಾಭಿಮಾನಗಳು ಸಹಜವಾಗಿಯೇ ಉಂಟಾಗುತ್ತಿರುವವು. ಈ ಪರಂಪರೆಯಲ್ಲಿ ಬಂದ ಶಿವಯೋಗಿಗಳು ವೀರಶೈವ ಧರ್ಮ, ತತ್ವ, ಸಾಹಿತ್ಯ ಮುಂತಾದ ಮಹತ್ವದ ಕ್ಷೇತ್ರಗಳಲ್ಲಿ ಕೃಷಿಗೈಯಲು ಮುಂದಾದಂತೆ ಮತ್ತಾವ ಪರಂಪರೆಯಲ್ಲಿಯೂ ಕಂಡು ಬರುವದಿಲ್ಲ. ಸಿದ್ಧಲಿಂಗ ಶಿವಯೋಗಿಗಳನ್ನು ಕುರಿತು ಬರೆದ ಗ್ರಂಥಗಳಲ್ಲಿ ವಿರಕ್ತ ತೋಂಟದಾರ್ಯ ಕೃತ ಸಿದ್ಧಲಿಂಗೇಶ್ವರ ಪುರಾಣ, ಹೇರಂಬಕೃತ ಸಿದ್ಧೇಶ್ವರ ಸಾಂಗತ್ಯ, ಶಾಂತೇಶ ಕವಿ ಕೃತ ಸಿದ್ಧೇಶ್ವರ ಪುರಾಣಗಳಲ್ಲದೆ ನಿರಂಜನ ವಂಶ ರತ್ನಾಕರ, ನಿರಂಜನ ಜಂಗಮ ವಂಶ ದರ್ಪಣ, ತೋಂಟದಾರ್ಯ ರಗಳೆ, ಮುಂತಾದವು ಮುಖ್ಯವಾದವು. ಎಡೆಯೂರು ಸಿದ್ಧಲಿಂಗೇಶ್ವರ ಮಠದಲ್ಲಿರುವ ಶಿಲಾಶಾಸನವು ಸಿದ್ಧಲಿಂಗನ ಮಹತಿಯನ್ನೆತ್ತಿ ತೋರಿಸುವದಾಗಿದೆ.

ಅನಾದಿ ಸಂಸಿದ್ಧವಾದ ವೀರಶೈವ ಧರ್ಮವು ಕಾಲ, ದೇಶ, ಪರಿಸ್ಥಿತಿಯನ್ನನುಸರಿಸಿ ಕಳೆಗುಂದುವ ಪ್ರಸಂಗ ಬಂದೊದಗಿದಾಗ ಅದರಲ್ಲಿ ಹೊಸ ಚೈತನ್ಯವನ್ನು ಮೂಡಿಸುವ ಮಹಾಕಾರ್ಯವು ಮಹಾಪುರುಷರಿಂದಲೇ ಆಗತಕ್ಕದ್ದು. ಅಂತೆಯೇ ಆಗಾಗ ಸರ್ವಸಮರ್ಥರಾದ ಮಹಾಪುರುಷರು ಶರೀರವೆತ್ತಿಕೊಂಡು ಬಂದು ಜನತೆಗೆ ಸರಿಯಾದ ಮಾರ್ಗದರ್ಶನ ಮಾಡುತ್ತಲೇ ಬಂದಿರುವರೆಂಬುದನ್ನು ಇತಿಹಾಸದಿಂದ



ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು

**ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು**

ತೋಂಟದಾರ್ಯ ಸಂಸ್ಥಾನಮಠ, ಡಂಬಳ - ಗದಗ

ತಿಳಿದುಕೊಳ್ಳಬಹುದಾಗಿದೆ. ಆದರೆ ಎಷ್ಟೋಜನ ಮಹಾಪುರುಷರ ಹೆಸರುಗಳು ಇತಿಹಾಸ ಸಂಶೋಧಕರ ದೃಷ್ಟಿಗೆ ನಿಲುಕದೆ ಹೋಗಿರುವ ಸಂಗತಿಯು ಮಾತ್ರ ಮರೆಯತಕ್ಕದ್ದಲ್ಲ. ಅದಕ್ಕಾಗಿ ಇತಿಹಾಸದ ಪುಟಗಳಲ್ಲಿ ಮೂಡಿ ಬಂದ ಹೆಸರಿನವ ರಷ್ಟೇ ಧರ್ಮದ ಅಭ್ಯುದಯಕ್ಕೆ ಕಾರಣರಾದವರೆಂದು ಸರ್ವಥಾ ತಿಳಿಯಬಾರದು.

ಕಾಲ ಕಾಲಕ್ಕೆ ವೀರಶೈವ ಧರ್ಮವು ಬಹಿರಂಗದಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸ ವಾದಂತೆ ಕಂಡುಬಂದರೂ ಅದರ ಅಂತಸ್ಥವಾಗಿದ್ದ ಮೂಲ ತತ್ವದಲ್ಲಿ ಯಾವ ಬದಲಾವಣೆಯೂ ಆಗಲಾರದು. ದೇಶ ಕಾಲಪರಿಸ್ಥಿತಿಗನುಗುಣವಾಗಿ ಧರ್ಮದ ಬಹಿರಂಗದಲ್ಲಿ ಬದಲಾವಣೆಯಾಗುವದು ಸ್ವಾಭಾವಿಕವೇ! ಆದರೆ ಅದನ್ನು ತಿಳಿದು ಜನಾಂಗಕ್ಕೆ ಮಾರ್ಗದರ್ಶನ ಮಾಡುವ ಅರ್ಹತೆ ಪಡೆದವರು ಅವಶ್ಯ ಬೇಕಾಗುವರು.

ಸಾಮಾನ್ಯವಾಗಿ ನಮಗೆ ದೊರೆತ ಇತಿಹಾಸದ ಪ್ರಕಾರ ವೀರಶೈವ ಧರ್ಮಹ ವಿಷಯವು ತಿಳಿದು ಬರುವದು ಕ್ರಿ. ಪೂ. ಮೂರುಸಾವಿರ ವರ್ಷದ್ದು. ಸೈಂಧವ ಸಂಸ್ಕೃತಿಯ ಬಗೆಗೆ ಆಳವಾದ ಅಭ್ಯಾಸ ಮಾಡಿದ ಸರ್ ಜಾನ್ ಮಾರ್ಶಲ್ ಅವರು ಮೊಹೊಂಜೊದಾರೊ ಹಾಗು ಹರಪ್ಪಗಳ ಧ್ವಂಸಾವಶೇಷಗಳಿಂದ ಕಂಡು ಹಿಡಿದ ಸಂಗತಿಯು ಈಗಾಗಲೇ ಜಗತ್ಪ್ರಸಿದ್ಧವಾಗಿರುವದು. ಶೈವ ಸಂಸ್ಕೃತಿಯು ವೇದಕಾಲಕ್ಕಿಂತ ಪೂರ್ವದ್ದೇ ಎಂದು ಅವರು ತಮ್ಮ ಸ್ಪಷ್ಟವಾದ ಅಭಿಪ್ರಾಯ ವನ್ನು ತಿಳಿಸಿದ್ದುಂಟು. ಆದರೆ ನಾವು ವಿಚಾರ ಮಾಡಿ ನೋಡಿದರೆ ಅಲ್ಲಿ ಕೇವಲ ಶೈವ ಸಂಸ್ಕೃತಿಯಷ್ಟೇ ಅಲ್ಲ, ಆ ಸಂಸ್ಕೃತಿಯು ಪೂರ್ಣ ವಿಕಾಸಗೊಂಡಿದ್ದ ವೀರಶೈವ ಧರ್ಮದ ಅವಶೇಷಗಳೂ ಅಲ್ಲುಂಟೆಂದು ತಿಳಿದು ಬರುವದು. ವಾಮ ಕರದಲ್ಲಿ ಲಿಂಗವನ್ನಿಟ್ಟುಕೊಂಡು ಅನಿಮಿಷ ದೃಷ್ಟಿಯಿಂದ ಲಿಂಗ ನಿರೀಕ್ಷಣ ಮಾಡುವ ಶಿಲಾಮೂರ್ತಿಗಳು ಅಲ್ಲಿರುವವಂತೆ. ವಿಚಾರ ಮಾಡಿ ನೋಡಿದರೆ ಶೈವ ಧರ್ಮದ ಇತಿಹಾಸವು ಅನಂತವಾದ ಭೂತಕಾಲ ಮಂಜಿನಲ್ಲಿ ಮುಳುಗಿ ಹೋಗಿರುವದೆಂಬ ಬಗೆಗೆ ಯಾವ ಸಂಶಯವೆನಿಸುವದಿಲ್ಲ. ಲಿಂಗಧಾರಣವು ವೀರಶೈವರ ಮುಖ್ಯ ಕುರುಹಾಗಿರುವದೆಂಬ ವಿಷಯದಲ್ಲಿಯೂ ಯಾರದೂ ಭಿನ್ನಾಭಿಪ್ರಾಯವಿರುವದಿಲ್ಲ.

ಲಿಂಗಪುರಾಣದಲ್ಲಿ—

> ಕಸ್ಯಪಾತ್ರಿ ಭರಧ್ವಾಜ ಗೌತುಮಾದ್ಯಾಮುಹರ್ಷಯಃ ।
> ಧಾರಯಂತಿಸದಾಲಿಂಗ ಮುತ್ತಮಾಂಗೇ ವಿಶೇಷತಃ ॥
> ನಾರಾಯಣೋऽಪಿ ಭಗವಾನ್ ದೇವಾ ಬ್ರಹ್ಮಾದಯೋऽ ನಘಾಃ ।

ಧಾರಯಂತ್ಯುತ್ತಮಾಂಗೇಷು ಶಿವಲಿಂಗಮನಾಮಯಂ ॥
ಲಕ್ಷ್ಮೀಸರಸ್ವತೀ ಮುಖ್ಯಾಃ ಸ್ವಲಲಾಟೋರ್ಧ್ವದೇಶಕೇ ।
ಧಾರಯಂತ್ಯ ಪ್ರಮಾದೇನ ಲಿಂಗಂತ್ರಿಭುವನೇಶ್ವರಂ ॥

ಕಸ್ಯಪ, ಅತ್ರಿ, ಭರಧ್ವಾಜ, ಗೌತುಮ ಮೊದಲಾದ ಋಷಿಗಳು ತಮ್ಮ ಮಸ್ತಕದಲ್ಲಿ ಸದಾ ಲಿಂಗವನ್ನು ಧರಿಸುವರು. ಭಗವಾನ್ ನಾರಾಯಣನು, ಬ್ರಹ್ಮ ಮುಂತಾದ ದೇವತೆಗಳು ಉತ್ತಮಾಂಗದಲ್ಲಿ ಪರಿಶುದ್ಧವಾದ ಲಿಂಗವನ್ನು ಧರಿಸುವರು. ಇದರಂತೆಯೇ ಲಕ್ಷ್ಮೀ, ಸರಸ್ವತೀ ಮೊದಲಾದವರು ತಮ್ಮ ಶಿರದಲ್ಲಿ ಒಳ್ಳೇ ಎಚ್ಚರದಿಂದ ಲಿಂಗವನ್ನು ಧರಿಸುವರು.

ಸಿದ್ಧಾಂತ ಶಿಖಾಮಣಿಯಲ್ಲಿ—

ವಿಷ್ಣು ಬ್ರಹ್ಮಾದಯೋದೇವಾ ಮುನಯೋ ಗೌತುಮಾದಯಃ ।
ಧಾರಯಂತಿ ಸದಾಲಿಂಗ ಮುತ್ತಮಾಂಗೇ ವಿಶೇಷತಃ ॥

ಎಂದು ಹೇಳಲಾಗಿದೆ.

ಹೀಗೆ ಲಿಂಗಪುರಾಣಾದಿಗಳಲ್ಲಿ ಸಿದ್ಧಾಂತ ಶಿಖಾಮಣಿಯಲ್ಲಿ ಉಕ್ತವಾಗಿರುವ ಅವತರಣಿಕೆಗಳು ಶಿವಧರ್ಮದ ಪ್ರಾಚೀನತೆಯ ಬಗ್ಗೆ ಸಾಕ್ಷಿ ನುಡಿಯುತ್ತಿರುವವು. ಕೊಲ್ಲಾಪುರದ ಮಹಾಲಕ್ಷ್ಮಿಯ ಶಿರದಲ್ಲಿ ಲಿಂಗವಿರುವದೆಂದು ಅದೇ ಗುಡಿಯ ಶಿಲಾಶಾಸನದಲ್ಲಿ ಕಾಣಬಹುದಾಗಿದೆ. ಪಂಡರಪುರದ ವಿಠಲನ ತಲೆಯಲ್ಲಿಯೂ ಲಿಂಗವಿರುವದೆಂದು ಹೇಳುವರು.

ಸ್ಮೃತಿ ಗ್ರಂಥಗಳಲ್ಲಿ ಯುದ್ಧಪ್ರಸಂಗದಲ್ಲಿ ಅವಧ್ಯರಾರು ? ಎಂಬ ಬಗ್ಗೆ ಉಲ್ಲೇಖವುಂಟು—

ಶರಣಾಗತರು ಹುತ್ತನ್ನು ಹತ್ತಿದವರು, ಹುಲ್ಲನ್ನು ಕಚ್ಚಿದವರು, ಲಿಂಗ ಧಾರಿಗಳು, ಲಿಂಗವನ್ನಪ್ಪಿಕೊಂಡವರು ಇವರಾರನ್ನೂ ಕೊಲ್ಲಬಾರದೆಂದು ಹೇಳ ಲಾಗಿದೆ. ತಂಜಾವರನ ಬೃಹದೀಶ್ವರ ಗರ್ಭಗುಡಿಯ ಒಂದು ಚಿತ್ರದಲ್ಲಿ ಶಿವನು ತ್ರಿಪುರಗಳನ್ನು ತನ್ನ ಬಾಣಗಳಿಂದ ಸುಡುತ್ತಿರುವಾಗ ಒಬ್ಬನು ತಾನು ಧರಿಸಿದ ಲಿಂಗವನ್ನು ತೋರಿಸಿ ತಾನು ಅವಧ್ಯನೆಂದು ಹೇಳಿಕೊಡುವನಂತೆ. ಪೆರಿಯ ಪುರಾಣ ೬೩ ಪುರಾತನರಲ್ಲಿ ಒಬ್ಬನು ಯುದ್ಧದಲ್ಲಿ ಸತ್ತ ಲಿಂಗಧಾರಿಯನ್ನು ನೋಡಿ ಪ್ರಾಯಶ್ಚಿತ್ತಕ್ಕಾಗಿ ತಾನೂಸಾಯಲು ಸಿದ್ಧನಾಗುವ ಸಂಗತಿ ಬಂದಿರು ವದು. ಲಿಂಗಧಾರಣ ಪದ್ಧತಿಯು ಅನಾದಿಕಾಲದಿಂದಲೂ ನಡೆದು ಬಂದಿರುವ ದೆಂಬುದಕ್ಕೆ ಮೇಲೆವಿವರಿಸಲಾದ ಉದಾಹರಣೆಗಳು ಪ್ರಬಲ ಪ್ರಮಾಣವಾಗಿರುತ್ತವೆ.

ವೀರಶೈವ ಧರ್ಮವು ಶೈವಧರ್ಮ ವೃಕ್ಷದ ಅಮೃತ ಫಲವೆಂದೇ ಕೆಲವು ಅನುಭಾವಿಗಳು ಹೇಳುವರು. ಪರಿಪೂರ್ಣವಾದ ಧರ್ಮದಲ್ಲಿರಬೇಕಾದ ಎಲ್ಲ ಮಹತ್ವದ ಅಂಶಗಳೂ ಈ ಧರ್ಮದಲ್ಲಿ ಸಮಾವೇಶವಾಗಿರುವವು. ಅಂತೆಯೇ ಈ ಧರ್ಮವನ್ನು 'ಸಾರ್ವಭೌಮಧರ್ಮ' ಎಂದು ಕರೆಯುವದೇ ಮೇಲೆಂದು ಹೇಳುವವರೂ ಇದ್ದಾರೆ. ವೀರಶೈವ ಧರ್ಮವೆಂಬ ಅಮೃತ ಫಲವು ಪೂರ್ಣ ಪಕ್ವ ಸ್ಥಿತಿಯನ್ನು ಹೊಂದಿದ್ದು, ಹನ್ನೆರಡನೆಯ ಶತಮಾನದ ಬಸವಾದಿ ಪ್ರಮಥರು ಕಲ್ಯಾಣನಗರದಲ್ಲಿ ಪ್ರಭುದೇವರ ಅಧ್ಯಕ್ಷತೆಯಲ್ಲಿ ರಚಿಸಿದ ಅನುಭವ ಮಂಟಪ ವೆಂಬ ಅಡಿಮನೆಯಲ್ಲಿಯೇ ಎಂಬುದು ನಿರ್ವಿವಾದ ಸಂಗತಿಯು. ಮಗ್ಗೆಯ ಮಾಯಿದೇವರು ಬಸವಣ್ಣನವರನ್ನು "ವೀರಶೈವಧರ್ಮ ನಿರ್ಣಯ ಪರಮಾವತಾರ" ಎಂದು ಉದ್ಘೋಷಿಸಿದ್ದು ಅತ್ಯಂತ ಸಮೀಚೀನವಾಗಿರುವದು. ಮುಂದೆ ಹದಿ ನೈದನೆಯ ಶತಮಾನದಲ್ಲಿ ಆ ಅಮೃತ ಫಲವನ್ನು ಹಿಂಡಿ ಅದರ ಮಧುರ ರಸವನ್ನು ಎಲ್ಲ ತತ್ತ್ವಬುಭುತ್ಸುಗಳಿಗೆ ಉಣಿಸಿ ತೃಪ್ತಿಪಡಿಸಿದ ಮಹಾಯಶಸ್ಸು ತೋಂಟದ ಸಿದ್ಧಲಿಂಗ ಶಿವಯೋಗಿಗಳಿಗೆ ಮೀಸಲಾಗಿರುವದು.

ಮಹಾ ಪುರುಷರಲ್ಲಿ ಕೆಲವರು ಸಾಧಕ ಸ್ಥಿತಿಯಿಂದ ಸಿದ್ಧ ಸ್ಥಿತಿಗೇರಿದವ ರಾಗಿದ್ದರೆ. ಕೆಲವರು ಸಿದ್ಧ ಸ್ಥಿತಿಯಿಂದಲೇ ಸಾಧಕ ಸ್ಥಿತಿಗಿಳಿದು ಬಂದವರಾ ಗಿರುವರು. ತೋಂಟದ ಸಿದ್ಧಲಿಂಗನು ಸಿದ್ಧ ಸ್ಥಿತಿಯಿಂದ ಸಾಧಕ ಸ್ಥಿತಿಗಿಳಿದು ಬಂದ ಮಹಾತ್ಮನಾಗಿರುವನು. ಅಂತೆಯೇ ತಾನು ನಿರಂಜನ ಗಣೇಶ್ವರನ ಅವತಾರಿ ಯಾಗಿದ್ದರೂ ಹರದನಹಳ್ಳಿಯ ಗೋಸಲ ಚನ್ನಬಸವೇಶ್ವರರ ಅಂತೇ ವಾಸಿಯಾಗಿ ಅವರ ಸೇವೆಯಲ್ಲಿ ತೊಡಗಿಕೊಂಡನು. ಇಂತಹವರೇ ಲೋಕೋದ್ಧಾರ ಮಾಡುವ ಅರ್ಹತೆ ಪಡೆದವರು.

ತೋಂಟದ ಸಿದ್ಧಲಿಂಗ ಶಿವಯೋಗಿಗಳು ತಮ್ಮ ಉಜ್ವಲ ಗುರುಪರಂಪರೆ ಯನ್ನು ತಾವೇ ಹೇಳಿಕೊಂಡಿದ್ದಾರೆ—

ಅನಾದಿ ಗಣೇಶ್ವರ ಶಿಷ್ಯ ಆದಿಗಣೇಶ್ವರ, ಆದಿಗಣೇಶ್ವರನ ಶಿಷ್ಯ ನಿರ್ಮಾಯ ನೆಂಬ ಗಣೇಶ್ವರ, ನಿರ್ಮಾಯನೆಂಬ ಗಣೇಶ್ವರನ ಶಿಷ್ಯ ಜ್ಞಾನಾನಂದ ಗಣೇಶ್ವರ, ಜ್ಞಾನಾನಂದನೆಂಬ ಗಣೇಶ್ವರನ ಶಿಷ್ಯ ಆತ್ಮ ಗಣೇಶ್ವರ, ಆತ್ಮ ಗಣೇಶ್ವರನ ಶಿಷ್ಯ ಅಧ್ಯಾತ್ಮ ಗಣೇಶ್ವರ, ಅಧ್ಯಾತ್ಮ ಗಣೇಶ್ವರನ ಶಿಷ್ಯ ರುದ್ರನೆಂಬ ಗಣೇಶ್ವರ, ರುದ್ರ ನೆಂಬ ಗಣೇಶ್ವರನ ಶಿಷ್ಯ ಬಸವಪ್ರಭುದೇವರು, ಬಸವಪ್ರಭುದೇವರ ಶಿಷ್ಯ ಆದಿ ಲಿಂಗ ದೇವರು, ಆದಿಲಿಂಗದೇವರ ಶಿಷ್ಯ ಚೆನ್ನವೀರೇಶ್ವರ ದೇವರು, ಚೆನ್ನವೀರೇಶ್ವರ ದೇವರ ಶಿಷ್ಯ, ಹರದನಹಳ್ಳಿಯ ಗೋಸಲದೇವರು, ಹರದನಹಳ್ಳಿಯ ಗೋಸಲ ದೇವರ ಶಿಷ್ಯ ಶಂಕರ ದೇವರು, ಶಂಕರ ದೇವರ ಶಿಷ್ಯ ದಿವ್ಯಲಿಂಗದೇವರು, ದಿವ್ಯ

ಲಿಂಗದೇವರ ಶಿಷ್ಯರು, ಚೆನ್ನಬಸವೇಶ್ವರ ದೇವರು, ಈ ಚೆನ್ನ ಬಸವೇಶ್ವರ ದೇವರ ಕರ ಕಮಲದಲ್ಲಿ ಉತ್ಪತ್ತಿಯಾದ ಶಿಶು ಸಿದ್ಧಲಿಂಗ ನಾನಯ್ಯ ಹೀಗೆ ಅನಾದಿ ವಿಡಿದು ಬಂದ ಗುರು, ಅನಾದಿವಿಡಿದು ಬಂದ ಲಿಂಗ, ಅನಾದಿವಿಡಿದು ಬಂದ ಜಂಗಮ, ಅನಾಧಿವಿಡಿದು ಬಂದ ಗುರು ಶಿಷ್ಯ ಸಂಬಂಧ, ಅನಾದಿವಿಡಿದು ಬಂದ ಪಾದೋದಕ ಪ್ರಸಾದ, ಅನಾದಿವಿಡಿದು ಬಂದ ಭಕ್ತಿ ಜ್ಞಾನ ವೈರಾಗ್ಯ ಅನಾದಿ ವಿಡಿದು ಪ್ರಸಿದ್ಧವಾದ ವೀರಶೈವಾಚಾರ ಸಂಪತ್ತು ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಹರದನಹಳ್ಳಿಯಲ್ಲಿ ವ್ಯಾಪಾರಿಗಳಿಂದ ಸ್ಥಾಪಿತವಾಗಿದ್ದ ಅಮೃತೇಶ್ವರ ಲಿಂಗದ ಸಮಯಾಚಾರಕ್ಕಾಗಿ ಕಟ್ಟಿಸಿದ ಮಠಕ್ಕೆ 'ಅನಾದಿ ಗಣೇಶ್ವರ'ನೆಂಬ ಜಂಗಮ ಮೂರ್ತಿಯನ್ನು ನೇಮಿಸಲಾಯಿತೆಂದು ಸಿದ್ಧೇಶ್ವರ ಪುರಾಣದಲ್ಲಿ ಹೇಳಲಾಗಿದೆ. ತೋಂಟದ ಸಿದ್ಧಲಿಂಗ ಶಿವಯೋಗಿಗಳು ಅಂತಹ ಅನಾದಿ ಗಣೇಶ್ವರನ ಪರಂಪರೆಯನ್ನೇ ಹೇಳಿದ್ದಾರೆ. ಪ್ರಭುದೇವರು ಆ ಸಂಪ್ರದಾಯದಲ್ಲಿ ಬಾರದಿರುವದರಿಂದ ಅವರ ಹೆಸರನ್ನೆತ್ತಿಕೊಂಡಿಲ್ಲ. ಆದರೆ ಸಿದ್ಧಲಿಂಗ ಶಿವಯೋಗಿಗಳು ಪ್ರಭುದೇವರ ಪರಂಪರೆಯವರೆಂದು ನಿರಂಜನ ವಂಶ ರತ್ನಾಕರ ಗ್ರಂಥ ಕರ್ತೃಗಳು ಹೇಳಿದ್ದು ಸಿದ್ಧಲಿಂಗನು ಪ್ರಭುದೇವರಂತೆಯೇ ಮಹಾನುಭಾವಿಯಾದ ನಿಮಿತ್ತದಿಂದಲೇ ಎಂದು ಕಂಡು ಬರುವದು.

ತೋಂಟದ ಸಿದ್ಧಲಿಂಗನ ತರುವಾಯ ಅವರ ಪೀಠಕ್ಕೆ ಬಂದ ಮಹಾ ಶಿವಯೋಗಿಗಳು ಕೆಳಗೆ ಕಾಣಿಸಿದಂತಿರುವರು—

(೧) ಬೋಳ ಬಸವಾರ್ಯರು (೨) ಗೂಳೂರ ಸಿದ್ಧವೀರ ಸ್ವಾಮಿಗಳು (೩) ಉದ್ಧನಾರ್ಯ (೪) ಹರಿಹರ ಸ್ವಾಮಿ (೫) ಭಿಕ್ಷುಕದ ಬಸವಲಿಂಗಾರ್ಯ (೬) ರಾಜೋಟಿ ಸ್ವಾಮಿಗಳು (೭) ಕಾದೀ ಮಹಾಂತ ಸ್ವಾಮಿಗಳು (೮) ಅರ್ಧ ನಾರೀಶ್ವರ ಸ್ವಾಮಿಗಳು (೯) ಈಸೂರ ನಂದೀಶ್ವರ ಸ್ವಾಮಿಗಳು (೧೦) ಉಗ್ಗದ ತೋಂಟದಾರ್ಯರು (೧೧) ಸದಾಶಿವ ಸ್ವಾಮಿಗಳು (೧೨) ಮಹಾಂತ ಸ್ವಾಮಿಗಳು (೧೩) ತೋಂಟದ ಸ್ವಾಮಿಗಳು (೧೪) ಮೃತ್ಯುಂಜಯ ಸ್ವಾಮಿಗಳು (೧೫) ಸಿದ್ಧೇಶ್ವರ ಸ್ವಾಮಿಗಳು (೧೬) ಗುರುಬಸವಸ್ವಾಮಿಗಳು (೧೭) ಶಿವಕುಮಾರ ಸ್ವಾಮಿಗಳು (೧೮) ಸಿದ್ಧರಾಮ ಸ್ವಾಮಿಗಳು (ಅಭಿನವ, ತೋಂಟದ ಸಿದ್ಧಲಿಂಗ)

ಜಂಗಮ ತತ್ತ್ವವು ವೀರಶೈವ ಧರ್ಮಾಚರಣೆಯಲ್ಲಿ ಅತ್ಯಂತ ಮಹತ್ವದ ಆದರ್ಶವನ್ನು ಪ್ರತಿನಿಧಿಸುವದಾಗಿದೆ. "ಸರ್ವ ಕರ್ತಾಚ ಜಂಗಮಃ" ಎಂದು ಶಿವಾಗಮವು ಸಾರುತ್ತಿರುವದು. ಜಂಗಮನೆಂದರೆ "ಪರಿಪೂರ್ಣ ಜ್ಞಾನಿ" ಎಂದೇ ಶಾಸ್ತ್ರ ಹೇಳುವದು. "ಜಂಗಮ್ಯಂತೇ ಅತಿಶಯೇನ ಜಾನಂತೀತಿ ಜಂಗಮಾಃ"

ಎಂಬುದೇ ಜಂಗಮ ಶಬ್ದದ ವ್ಯುತ್ಪತ್ತಿಯಾಗಿದೆ. ಕೇವಲ ತಲೆ ಬೋಳಿಸಿಕೊಂಡು, ಕಾವಿ ಬಟ್ಟೆಯನ್ನುಟ್ಟುಕೊಂಡು, ಜನರಿಂದ ಮಾನ ಮರ್ಯಾದೆ ಪಡೆಯುವಷ್ಟು ಜಂಗಮ ಸ್ಥಾನ ಹಗುರಾಗಿಲ್ಲ. "ತಲೆ ಬೋಳಾದರೇನು ಮನ ಬೋಳಾಗದನ್ನಕ್ಕ" ಮನಸ್ಸಿನಲ್ಲಿ ಅನೇಕ ವೈಷಯಿಕ ಕಾಮನೆಗಳನ್ನಿಟ್ಟುಕೊಂಡು ವಿರಕ್ತ ಜಂಗಮನಾಗುವದಕ್ಕಿಂತ ಸದ್ಗೃಹಸ್ಥನಾಗುವದೇ ಮೇಲೆಂದು ಶರಣರು ಹೇಳಿದ್ದಾರೆ. "ಜಂಗಮನ ಸುಳುಹು ವಸಂತಗಾಳಿ" ಎಂದು ಪ್ರಭುದೇವರು ಹೇಳಿದ್ದಾರೆ.

"ಬೇಡುವಾತ ಜಂಗಮನಲ್ಲ;
ಬೇಡಿಸಿಕೊಳ್ಳುವಾತ ಭಕ್ತನಲ್ಲ.
ಬೇಡದೆ ಆ ಭಕ್ತ ತಾನೇ ಮಾಡಿದ ಮಾಟವ
ಪರಿಣಾಮಿಸ ಬಲ್ಲಡೆ ಜಂಗಮ.
ಅವನ ಮನದಿಚ್ಛೆಯ ಸಲಿಸ ಬಲ್ಲಡೆ
ಆತನೇ ಪರಮಭಕ್ತ.

ಎಂದು ಮಹಾಜ್ಞಾನಿ ಚನ್ನಬಸವಣ್ಣನವರು ಅಪ್ಪಣೆ ಕೊಡಿಸಿದ್ದಾರೆ.

ಸಿದ್ಧಲಿಂಗ ಶಿವಯೋಗಿಗಳು ಕೂಡ ಜಂಗಮ ತತ್ವದ ಮಹತಿಯನ್ನು ಚೆನ್ನಾಗಿಯೇ ತಿಳಿಪಡಿಸಿದ್ದಾರೆ.

ಜಂಗಮ ಸಂಪ್ರದಾಯವು ಅವಿಚ್ಛಿನ್ನವಾಗಿ ಸಾಗಿ ಹೋಗುವಲ್ಲಿಯೇ ಸಮಾಜದ ನಾಡಿನ ಶ್ರೇಯಸ್ಸು ಅಡಕವಾಗಿರುವದು.

ಜಗದ್ಗುರು ತೋಂಟದಾರ್ಯರ ೧೮ ನೆಯವರಾದ ಅಭಿನವ ಸಿದ್ಧಲಿಂಗ ಸ್ವಾಮಿಗಳ ಕಾಲದಲ್ಲಿ ಮಠದ ಸರ್ವತೋಮುಖವಾದ ಅಭ್ಯುನ್ನತಿಯಾಗುವದೆಂದು ನಂಬಿರುವೆವು.

# ತೋಂಟದ ಸಿದ್ಧಲಿಂಗ ಯತಿಗಳಡಿಯಲ್ಲಿ

— ಡಾ॥ ಡಿ. ಎಸ್. ಕರ್ಕಿ

೧

ಮಂಗಲಮಯ ಸುಪ್ರಶಾಂತ
ಶಾಂತಿಪೂರ್ಣ ಪರಿಸರ
ಜ್ಞಾನೋದಯವನು ಸೂಚಿಪ
ಧ್ಯಾನೋದಯ ಸುರುಚಿರ
ಬಯಲು ಬಯಲು
ನಿರ್ಭಯಲು
ಸುತ್ತಲು ಕ್ಷಿತಿಜದ ವರೆಗೂ
ತಪೋವನದ ಪರಿಮಳ
ಅಲ್ಲಿ ಅದೋ ಯತಿವರ
'ಯಾರ್' ಎಂಬೆಯ ಬೆರಗಿನಲ್ಲಿ
ತಪೋಮೂರ್ತಿ
ಧವಳ ಕೀರ್ತಿ
ಸಿದ್ಧಲಿಂಗ ಶಿವಯೋಗಿ !

೨

ಧ್ಯಾನದೆಡೆಯು
ಹೆಸರು ಪಡೆದು
ತಾನಾಯಿತು ಎಡೆಯೂರು
ಚಿಜ್ಜ್ಯೋತಿಯತವರೂರು
ಹಸ್ತದಿ ಹೊಳೆಯುವ ಬೆಳಗಿಗೆ

ಚಿತ್ತವನನುಸಂಧಾನಿಸಿ
ಮುಂಡಿಸಿಹರು ನಿಜವತೋರಿ
ಬಂಧುರ ಪದ್ಮಾಸನದಿ
ಮೌನಪೂರ್ಣ
ಧ್ಯಾನ ಲೀನ
ಮುಖ ಮಂಡಲವನು ಬೆಳಗಿ
ಕಿರಣಿಸಿಹುದು ಕರದಲಿಂಗ
ಕಾರುಣ್ಯದ ಕುರುಹ
ಸುತ್ತಲೆಲ್ಲ ಚೆಲ್ಲವರಿಸಿ
ಆಂತರ್ಯದ ಅರುಹ
ಚಿತ್ತ ನೇತ್ರ
ಏಕ ಸೂತ್ರ
ಅಂತರಂಗದಾನಂದ
ತನಗೆ ತಾನೆ ನಿನದಿಸಿಹುದು
ಶಿವಗೀತದ ಛಂದ

೩

ಹೊತ್ತು ಏರಿ ಹೊತ್ತು ಇಳಿದು
ಉರುಳುತಿರಲು ವರುಷ ವರುಷ
ಬೆಳೆದು ಬಂತು ಬೆಳೆದು ಬಂತು
ಮನದೆ ಘನದ ಸಾಮರಸ್ಯ
ಓಂ, ಓಂ, ಓಂ, ಓಂ ಎಂಬ
ಧ್ಯಾನವ ತಾ ಅರಳಿದಂತೆ
ಮೌನವೆ ಕೆನೆಗಟ್ಟಿದಂತೆ
ಶಿವಯೋಗಿಯ ಮೈ ಸುತ್ತ
ಮೂಡಿತೊಂದು ಹುತ್ತ

ಹುತ್ತದ ನಡು ನೆತ್ತಿಯಳದೊ
ಧವಳಿ ವರ್ಣದೊಂದು ಗೋವು
ಸದ್ದಿಲ್ಲದೆ ಸುಳಿದು ಬಂದು
ಸುಪ್ರಸನ್ನ ಚಿತ್ತವೆ ತಾ
ವೈವೆತ್ತಿದೆ ಎನೆ ನಿಂದು
ಬಿಣ್ಗೆಚ್ಚಲಿನಮೃತ ಸವಿದು
ಬೀರುವದಲ ಬೆರಗನ್ನ

೪

ಹೀಗೆ ದಿನವು ಮೂರು ಬಾರಿ
ಬೆಳಗು ನಡುವೆ, ಸಂಜೆಯಲ್ಲಿ
ಧವಳ ಧಾರೆ, ಧಾರೆ ಯಾಗಿ
ಗೋವಿನೆದೆಯ ಮಧುರ ಭಕ್ತಿ
ಮೇಲಿನಿಂದ ಇಳಿದು ಬಹುದು
ಒಂದಿನಿತೂ ತಪ್ಪದೊಂದು
ನಿತ್ಯ ನೇಮ ಹಿಡಿದ ಹಾಗೆ
ಸಿದ್ಧಲಿಂಗ ಯತಿಯ ಕರದ
ಇಷ್ಟಲಿಂಗದಭಿಷೇಕಕೆ
ಒಂದೆ ಮೂಲ
ಒಂದೆ ಕೀಲ
ಮೂವರಲ್ಲು ಒಂದೇ ಶೀಲ

ಶ್ರೀ ವಿರಕ್ತ ತೋಂಟದಾರ್ಯರು ರಚಿಸಿದ
ಸಿದ್ಧೇಶ್ವರ ಪುರಾಣದಲ್ಲಿ ಚಿತ್ರಿತವಾಗಿರುವ

## "ಶ್ರೀ ತೋಂಟದ ಸಿದ್ಧಲಿಂಗ ಯತಿಗಳ

# ಜೀವನ, ಸಾಧನೆ, ಬೋಧನೆಗಳು"

— ಪ್ರೊ. ಬಿ. ಸಿ. ಜವಳಿ

### ತೋಂಟದಾರ್ಯರನ್ನು ಕುರಿತು ಜನರಲ್ಲಿ ಉಪಲಬ್ಧವಿರುವ ನಂಬಿಕೆ

ಕನ್ನಡ ನಾಡಿನಲ್ಲಿ ಮತ್ತು ಇತರ ಕಡೆಗೆ ಎಡೆಯೂರು ತೋಂಟದ ಸಿದ್ಧಲಿಂಗ ಯತಿಗಳು ಸಂಚರಿಸಿದ ಬಗೆಗೆ ಕುರುಹುಗಳು ಇನ್ನೂ ಉಪಲಬ್ಧವಿವೆ. ಅವರ ಹೆಸರಿನಲ್ಲಿ ಹಳ್ಳಿಪಳ್ಳಿಗಳಲ್ಲಿ ಮಠಗಳಿವೆ; ದೇವಾಲಯಗಳಿವೆ; ಜಾತ್ರೆ-ಪರಿಷೆ ನಡೆಯುತ್ತಿವೆ; ರಥೋತ್ಸವಗಳು ನಡೆಯುತ್ತಿವೆ; ಅವರ ಶಕ್ತಿಯ ಬಗೆಗೆ– ಗೈದ ಕಾರ್ಯದ ಬಗೆಗೆ ಜನರಲ್ಲಿ ಅಂದು ಇದ್ದ ಅಪಾರವಾದ ಶ್ರದ್ಧೆ ಹಲವು ಜಾತಿಯವರಲ್ಲಿದ್ದುದು ಇಂದೂ ವ್ಯಕ್ತವಾಗುವುದನ್ನು ಕಾಣುತ್ತೇವೆ.

ಕದಂಬರ ನಾಡಾಗಿದ್ದ ಹಾನಗಲ್ಲು ತಾಲೂಕಿನಲ್ಲಿ ವರದಾನದಿಯ ತಟದಲ್ಲಿರುವ ಹಾವಣಗಿ ಎಂಬ ಚಿಕ್ಕಗ್ರಾಮದಲ್ಲಿ ನಾನು ಜನಿಸಿದುದು. ಆ ಕಿರುಗ್ರಾಮದ ಪೂರ್ವ ದಿಕ್ಕಿನಲ್ಲಿ ಒಂದು ಗುರುಸ್ಥಲದ ಮಠ; ಪಶ್ಚಿಮದ ಗಡಿಯಲ್ಲಿ ಶ್ರೀ ಗುರುವೂ ಮಹಾಮಹಿಮನೂ ಆದ ಶ್ರೀ ತೋಂಟದ ಸಿದ್ಧಲಿಂಗಯತಿಗಳ ಮಠ. ಈ ಮಠ ಇಂದು 'ತೋಟದ ಸ್ವಾಮಿಯ ಗುಡಿ' ಯಾಗಿದೆ. ಇಂದು ಗರ್ಭಗುಡಿ ಮಾತ್ರ ಉಳಿದಿದೆ; ಮಠದ ಸ್ವಾಮಿಯಾಗಲೀ, ಮಠದ ಆಸ್ತಿಯಾಗಲೀ, ಮಠದ ರಥವಾಗಲೀ ಇಲ್ಲ. ಸುಮಾರು ಇಪ್ಪತ್ತೆಂಟು ವರ್ಷಗಳ ಹಿಂದೆ ನಾನು ವಿದ್ಯಾಭ್ಯಾಸಕ್ಕಾಗಿ ಧಾರವಾಡಕ್ಕೆ ಆಗಮಿಸಿದುದು; ಅಲ್ಲಿಯ ವರೆಗೂ ನಾನು ತೋಟದಪ್ಪನ

ಬಗೆಗೆ ನನ್ನೂರಿನಲ್ಲಿ ನನ್ನ ತಂದೆ ಹೇಳುತ್ತಿದ್ದುದನ್ನು ಕೇಳಿದ್ದೇನೆ; ಅವರ ಬಗೆಗೆ ಜನರಾಡುತ್ತಿದ್ದುದನ್ನು ಕಂಡಿದ್ದೇನೆ. ವರ್ಷಕ್ಕೊಂದು ಬಾರಿ ಆ ಸ್ವಾಮಿಯ ರಥೋತ್ಸವ; ಅದಕ್ಕೆ ನಿಶ್ಚಿತ ದಿವಸವಿಲ್ಲ; ಆದರೆ ಆಗುತ್ತಿದ್ದುದು ಮಾತ್ರ ನಿಶ್ಚಿತ. ಅಲ್ಲಿಯ ವರೆಗೆ ಊರಿಗೆ ಖ್ಯಾತಿಯಿತ್ತು; ಜನಗಳಿಗೆ ಸಿರಿವಂತಿಕೆಯಿತ್ತು; ತೋಟದಪ್ಪನ ಗುಡಿಯೂ ಅಂದವಾಗಿ ಕಾಣಿಸುತ್ತಿತ್ತು. ಕೆಲವು ವರ್ಷಗಳ ತರುವಾಯವೂ ರಥೋತ್ಸವ ನಡೆಯುತ್ತಿತ್ತು; ಅದು ಮೊದಲಿನಂತೆ. ವರ್ಷಕ್ಕೊಮ್ಮೆಯಲ್ಲ ಮಳೆಬಾರದಿದ್ದಾಗ; ಊರಿನವರಿಗೆ ಪ್ಲೇಗು ಕಾಲರಾದಂತಹ ರೋಗ ಬಂದಾಗ ಮಾತ್ರ. ಒಳ್ಳೆಯ ಒಣ ಬಿಸಿಲಿನಿಂದ ಪೈರುಗಳೆಲ್ಲ ಒಣಗಿ ಹೋಗುತ್ತಿದ್ದ ಸಮಯದಲ್ಲಿ ಊರಿನ ಕೆಲವು ಹಿರಿಯರಿಗೆ ತೋಟದಪ್ಪನ ಜಾತ್ರೆಯ ನೆನಪು ಬಾರದಿರುತ್ತಿರಲಿಲ್ಲ; ರಥೋತ್ಸವ ಮಾಡಲು ಸಿದ್ಧತೆ, ಊರಿನಲ್ಲಿ ಡಂಗುರ ಹೊಡಿಸಿದೊಡನೆಯೆ ಸಣ್ಣಾಗಿ ಮಳೆ ಆರಂಭವಾಗುತ್ತಿತ್ತು. ರಥವು ಸಿದ್ಧವಾಗಿ ಗಣಾರಾಧನೆ ಪ್ರಾರಂಭವಾಯಿತೆಂದರೆ ಧೋ ಧೋ ಮಳೆ ಬೀಳುತ್ತಿದುದು ಸಹಜದ ಮಾತಾಗಿತ್ತು; ಇಂತಹ ಸನ್ನಿವೇಶಗಳನ್ನು ನಾನು ಹಲವು ಬಾರಿ ಕಂಡಿದ್ದೇನೆ. ಇದನ್ನು ನೀವು ಯಾವ ಹೆಸರಿನಿಂದ ಕರೆದರೂ ಅಷ್ಟೆ; ಇದು ಮಾತ್ರ ಸತ್ಯ. ಇಂದು ಪ್ರಾಯಶಃ ಆ ಜಾಗ್ರತ ಸ್ಥಾನದಲ್ಲಿ ತೋಂಟದ ಸಿದ್ಧೇಶ್ವರರು ಇದ್ದಂತೆ ಕಾಣುವದಿಲ್ಲ! ಅಲ್ಲಿಯ ಮೊದಲಿನ ವೈಭವ ಕಣ್ಮರೆಯಾಗಿ ಊರಿನ ಸ್ಥಿತಿ ತೋಂಟದಪ್ಪನ ಮಠಕ್ಕೂ ಬಂದು ಎರಡೂ ದಾರಿದ್ರ್ಯವನ್ನೇ ಸೂಚಿಸುತ್ತವೆ! ನಮ್ಮೂರಿನಲ್ಲಿಯೇ ಈ ಮಹಾಮಹಿಮರು ಆಡಿಯಿಟ್ಟಿದ್ದರು ವರದಾ ನದಿಯಲ್ಲಿ ಸ್ನಾನ ಮಾಡಿದ್ದರು; ಜನರನ್ನು ಉದ್ಧಾರ ಮಾಡಿದ್ದರು ಎಂಬುದು ಹೆಮ್ಮೆಯ ಮಾತಾಗಿದೆ.

## [೨]

ಸಿದ್ಧೇಶ್ವರ ಪುರಾಣವು ವಿರಕ್ತ ತೋಂಟದಾರ್ಯನೆಂಬ ಕವಿಯಿಂದ ವಾರ್ಧಕ ಷಟ್ಪದಿಯಲ್ಲಿ ಇಪ್ಪತ್ತಯಿದು ಸಂಧಿಗಳಲ್ಲಿ ಒಂದು ಸಾವಿರದ ಐದುನೂರಾ ಮೂವತ್ತೈದು (೧೫೩೫) ಪದ್ಯಗಳನ್ನೊಳಗೊಂಡಿದೆ. ಕವಿಯು ತನ್ನನ್ನು ಕುರಿತು ಹೇಳುವಾಗ ಶ್ರೀ ಬೋಳಬಸವೇಶ್ವರರಿಂದ ಷಟ್‌ಸ್ಥಲವನ್ನು ತಿಳಿದು ನಾಡಿಗೆ ಪ್ರಸಾರಪಡಿಸಿದ-"ಶ್ರೀಗೂಳೂರ ಸಿದ್ಧವೀರೇಶ್ವರನ ಚಿರದಯಾಪಾಂಗಸತ್ಪಾತ್ರನೆಂದೆನಿಪಧಿಕತರನಾದ ತೋಂಟದಾರ್ಯಂ ಪೇಳ್ದ ಅಮಳ ಸಿದ್ಧೇಶ್ವರ ಪುರಾಣ" ಎಂದು ಹೇಳಿಕೊಂಡಿದ್ದಾನೆ— (೨೫ ನೆಯ ಸಂಧಿ ಪದ್ಯ ೨೨). ಅಲ್ಲದೆ "ನುತಮಹಾ ಶಾಸ್ತ್ರಾರ್ಥ ಚತುರನೆಂದೆನಿಸುವಪ್ರತಿಮಗುಣ ಗಂಭೀರ; ನುತಭಕ್ತವಿತತಿಪೂಜಿತ

ವಿರತ ತೋಂಟದಾರ್ಯ" ಎಂದೂ "ಕಾವೇರಿ ಹೇಮಾವತಿಗಳ ಬಂಧುರ ಮಧ್ಯ ದೇಶದೊಳಗಿರ್ಪ ನಂದಿಯಪುರದ ಸಿಂಹಾಸನಾಧಿಪನಹ ಗುರುಚೆನ್ನ ನಂಜೇಶನಮಲ ಕರಕಮಲದೊಳ್ಪರಿರಂಜಿಸುತ್ತೊಗೆದ ಪರ್ವತೇಂದ್ರನ ಹಸ್ತಸರಸಿ ಜೋದ್ಭವ ತೋಂಟದಾರ್ಯ" ನೆಂದೂ ಕರೆದು ಕೊಂಡಿದ್ದಾನೆ— (೧ ನೆಯ ಸಂಧಿ, ಪದ್ಯ ೨೪–೨೫). ಆದುದರಿಂದ ಪರ್ವತೇಶ್ವರನ ಕರಕಮಲ ಸಂಜಾತನಾಗಿ ಷಟ್ಸ್ಥಲಶಾಸ್ತ್ರವನ್ನು ಗೂಳೂರು ಸಿದ್ಧವೀರಣಾರ್ಯರಿಂದ ತಿಳಿದನೆಂಬುದು ಕಂಡು ಬರುತ್ತದೆ. ಅವನಿಗೆ ಪರ್ವತೇಶನು ದೀಕ್ಷಾಗುರುವಾಗಿಯೂ ಗೂಳೂರು ಸಿದ್ಧವೀರ ಣಾರ್ಯನು ವಿರಕ್ತಾಶ್ರಮ ದಯಪಾಲಿಸಿದವನೂ ಆಗಿದ್ದರೆಂದು ತಿಳಿದು ಬರುತ್ತದೆ. ಕವಿಯು ಮಹಾಮಹಿಮನಾದ ತೋಂಟದಾರ್ಯನ ಹೆಸರನ್ನೇ ಇಟ್ಟುಕೊಂಡು ಆ ಹೆಸರನ್ನು ಸಾರ್ಥಕಪಡಿಸಿಕೊಂಡಿದ್ದಾನೆನ್ನಬೇಕು. ಅಲ್ಲದೆ ತೋಂಟದ ಸಿದ್ಧಲಿಂಗಯತಿಗಳ ಘನವಾದ ಶಿಷ್ಯ ಪರಂಪರೆಯಲ್ಲಿಯೇ ಬೆಳೆದು ಬಂದವನಾದುದ ರಿಂದ ತೋಂಟದ ಸಿದ್ಧಲಿಂಗೇಶ್ವರರ ಬಗೆಗೆ ಭಕ್ತಿ ಅಭಿಮಾನಗಳುಳ್ಳವನಾಗಿ, ಅವರ ವಿಷಯವನ್ನು ತನ್ನ ಗುರುಗಳಿಂದಲೇ ಕೇಳಿ ತಿಳಿದವನಾಗಿರಬೇಕು. ಕವಿಯು ಕಥಾನಾಯಕನನ್ನು 'ಸಿದ್ಧೇಶ್ವರ'ಯೆಂದು ಕರೆದಿದ್ದರೂ ಇದು ಬಸವಾದಿ ಶಿವಶರಣರ ಸಮಕಾಲೀನನಾದ ಶಿವಯೋಗಿ ಸಿದ್ಧರಾಮನನ್ನು ಕುರಿತಾದುದು ಎನ್ನುವ ಭ್ರಮೆಯೂ ಉಂಟಾಗಬಹುದು. ಆದುದರಿಂದ ಕೃತಿಗೆ 'ಸಿದ್ಧಲಿಂಗೇಶ ಪುರಾಣ' ವೆಂದಿದ್ದರೆ ಇನ್ನೂ ಸೂಕ್ತವಾಗುತ್ತಿತ್ತೆಂದು ಎನ್ನಿಸುತ್ತದೆ. ಈ ಕವಿಯು ಒಳ್ಳೆಯ ಕವಿಯೂ, ಶಾಸ್ತ್ರಕಾರನೂ ಆಗಿದ್ದನೆಂಬುದು ಕಾವ್ಯವನ್ನು ಓದಿದವರಿಗೆ ಕೂಡಲೆ ಅರ್ಥವಾಗುತ್ತದೆ. ಕವಿಯು ಪ್ರಭುಲಿಂಗಲೀಲೆಯಂತೆ ಈ ಕಾವ್ಯವನ್ನು ಇಪ್ಪತ್ತಯಿದು ಸಂಧಿಗಳಲ್ಲಿ ಬರೆದುದು ಔಚಿತ್ಯಪೂರ್ಣವಾಗಿದೆ. ಈ ಕವಿಗೆ ಹರಿಹರ, ಭೀಮಕವಿ, ಪಾಲ್ಕುರಿಕೆ ಸೋಮನಾಥ, ಚಾಮರಸ ಮೊದಲಾದವರ ಪರಿಚಯ ವಿದ್ದುದಲ್ಲದೆ, ಬಸವೇಶ್ವರಾದಿ ಶಿವಶರಣರ ವಚನಸಾಹಿತ್ಯದ ಗಾಢವಾದ ಪರಿಚಯವೂ ಇದ್ದುದಕ್ಕೆ ಕಾವ್ಯದಲ್ಲಿ ಹೇರಳ ನಿದರ್ಶನಗಳು ದೊರೆಯುತ್ತವೆ. ಈ ಕಾವ್ಯವು ವೀರಶೈವ ಪುರಾಣಗಳಂತೆ ಎಂದರೆ ವಿಶೇಷತಃ ಬಸವ ಪುರಾಣದಂತೆ ಈ ಪುರಾಣವು ಕಥಾನಾಯಕನಾದ ತೋಂಟದ ಸಿದ್ಧಲಿಂಗೇಶ್ವರನ ವಿಷಯವನ್ನು ಮಾತ್ರ ತಿಳಿಸದೆ ಮಹತ್ವದ ಶಿವಶರಣರ ಕಥೆಗಳನ್ನೂ ೨೨-೨೩-೨೪ ನೆಯ ಸಂಧಿ ಗಳಲ್ಲಿ ಷಟ್‌ಸ್ಥಲಾಂತರ್ಗತ ಏಕೋತ್ತರ ಸ್ಥಲದ ವಿಷಯವನ್ನೂ ಪ್ರತಿಪಾದಿಸುತ್ತದೆ. ತೋಂಟದ ಸಿದ್ಧಲಿಂಗನ ವಿಷಯ ನಿರೂಪಣೆ ಮಾಡುವಾಗ ಹಿಂದಿನ ಶಿವಶರಣರು ಗೈದ ಲೋಕೋತ್ತರ ಹಾಗೂ ಜನೋಪಯುಕ್ತ ಕಾರ್ಯಗಳ ವಿವರಗಳನ್ನು ವರ್ಣಿಸಿದ್ದಾನೆ.

ವಿರಕ್ತ ತೋಂಟದಾರ್ಯನು ಈ ಕೃತಿ ಬರೆವಾಗ :

ಅ. "ಪರಮ ಶ್ರೀಗುರು ನಿರಂಜನ ಲಿಂಗವಿಳೆಯೊಳವತರಿಸಿ
ತೋಂಟದ ಸಿದ್ಧಲಿಂಗೇಶನೆಂಬ ಪರತರನಾಮವಾಂತು
ಅಖಿಳಮಹಿಮೆಯಂ ಪಡೆದು ಶಿವಶರಣರಂ ಸಲಹುತಿರ್ದಂ;"

ಆ. "ಈ ಕೃತಿಗಧೀಶ್ವರ ಸಿದ್ಧಲಿಂಗ ಯತಿರಾಜ"

ಇ. "ಪರಮಶ್ರೀಗುರು ನಿರಂಜನಲಿಂಗನವನಿಯಂ ಪರಿರಕ್ಷಿಸಲ್ಕೆಂದು ಬಂದು
ಅಖಿಳ ಮಹಿಮೆಯಂ ಪರುಟವಿಸಿತೋರಿ,
ಸದ್ಭಕ್ತಮಾಹೇಶ್ವರರ ಮನದ ಕತ್ತಲೆಯ ನೂಂಕಿ,
ಉರುತರಮೆನಿಪ್ಪ ಚಿಜ್ಯೋತಿಯಿಂ ಬೆಳಗಿ, ಸುಸ್ಥಿರ
ನಿಜಾನಂದಪದವಿಯನಿತ್ತು ಪೊರೆದುದಂ ವಿರಚಿಸಿದೆ."–

ಎಂದು ಮೊದಲಾಗಿ ಹೇಳಿಕೊಂಡುದನ್ನು ನೋಡಿದರೆ ಕಥಾನಾಯಕನು ಲೋಕೋದ್ಧಾರಕ್ಕಾಗಿ ಅವನಿಗವತರಿಸಿದ ಪ್ರಭುವಿನ ಚರಿತ್ರೆಯೆಂದೆನ್ನುವಂತೆ ಹೇಳುವ ಮನೋಭಾವ ಉಳ್ಳವನಾಗಿದ್ದನೆಂಬುದು ಸ್ಪಷ್ಟವಿದೆ. ಇದಕ್ಕನುಗುಣವಾಗಿ ೨೫ಸಂಧಿಯಷ್ಟು ವಿಸ್ತಾರದವರೆಗೆ ಈ ಕಥೆಯನ್ನು ವಿಸ್ತರಿಸಿ ಇದಕ್ಕೊಂದು ಬೃಹತ್ ಪುರಾಣ - ಸತ್‌ಕಾವ್ಯದ ಸ್ವರೂಪವನ್ನು ಕೊಡಲು ಯತ್ನಿಸಿದ್ದಾನೆ. ಪ್ರತಿಯೊಂದು ಆಶ್ವಾಸದ ಮೊದಲ ಎರಡು ಪದ್ಯಗಳಲ್ಲಿ ಮತ್ತು ಕೊನೆಯ ಪದ್ಯದಲ್ಲಿ ಪರಮಾತ್ಮ ಮತ್ತು ಸಿದ್ಧಲಿಂಗ ಶಿವಯೋಗಿ ಈ ಇಬ್ಬರೂ ಅಭಿನ್ನರೆಂಬಂತೆ ಕಲಾತ್ಮಕವಾಗಿ ವರ್ಣಿಸಿದ್ದಾನೆ. ಅವನ ಉದ್ದೇಶವೇ ಮಹಾಮಹಿಮನಾದ ಗುರುಮಹಿಮೆಯನ್ನು ಹೇಳುವುದರಿಂದ ಈ ರೀತಿಯ ಕವಿಯ ತಿಳುವಳಿಕೆಯು ಅನುಚಿತವೆಂದು ಹೇಳಲಾಗದು. ಈ ಕವಿಯು ತನ್ನ ಕೃತಿಯನ್ನು ಉತ್ತಮ ಕಾವ್ಯವನ್ನಾಗಿ ಮಾಡುವ ಉದ್ದೇಶದಿಂದ ಅಲ್ಲಲ್ಲಿ ಕಾವ್ಯಕ್ಕೆ ಬೇಕಾಗುವ ರಾತ್ರಿ - ಬೆಳಕು, ಸೂರ್ಯೋದಯ - ಸೂರ್ಯಾಸ್ತ, ಚಕೋರಿ - ಕೋಗಿಲೆ - ಗಿಳಿ, ಬನ, ವಸಂತ ಮೊದಲಾದವುಗಳನ್ನು ವೈರಾಗ್ಯಮಯ ವ್ಯಕ್ತಿಯ ಜೀವನನಿರೂಪಣೆಗೆ ಯಾವ ರೀತಿಯಿಂದಲೂ ಧಕ್ಕೆತಾರದರೀತಿಯಲ್ಲಿ ಬಳಸಿಕೊಂಡಿದ್ದಾನೆ. ಅವನ ಕಾಲದಲ್ಲಿಯೆ ಸಿದ್ಧಲಿಂಗಯತಿಯನ್ನು ಭಕ್ತರು ಕೊಂಡಾಡಿದ ರೀತಿಯನ್ನು ವಿರಕ್ತ ತೋಂಟದಾರ್ಯನು ಇಂತು ವಿವರಿಸಿದ್ದಾನೆ :

ಅ. "ಅಖಿಳ ಭಕ್ತರುಗಳೊಲವಿಂದೆ ಮಹಿಮಾತಿಶಯಮಂ ಪೊಗಳ್ದು,
ಪರಮಹರ್ಷಂದಾಳ್ದು, ಪ್ರೀತಿಯಿಂದಾಡುತ್ತೆ ಪಾಡುತ್ತೆ
ಸಿದ್ಧಲಿಂಗೇಶನಾಪವಾಡಂಗಳಾಗೀತಮುಖದಿಂದೆ ನುತಿಸುತ್ತೆ
ಸುಖೋಪೇತರಾಗಿರೆ...." (೧೨ ನೆಯ ಸಂಧಿ, ಪದ್ಯ ೬೫)

ಆ. "ಪಲವು ಒಗೆಯಹ ಗದ್ಯ ಪದ್ಯಗೀತಂಗಳಿಂ ನುತಿಸಿ ಪೊಗಳಿದರು."–
(೧೩. ನೆಯ ಸಂಧಿ, ಪದ್ಯ ೧೯೭)

ಎಂದು ಅವರ ಬಗೆಗೆ ಅಂದಿನಕಾಲದಲ್ಲಿದ್ದ ಘನತೆಗೌರವಗಳನ್ನು ಎತ್ತಿತೋರಿಸಿದ್ದಾನೆ.

[೩]

ಈ ಕವಿಯು ಸಿದ್ಧಲಿಂಗ ಯತಿಗಳ ಬಗೆಗೆ ಬಳಸಿದ ಪ್ರಯೋಗಗಳು :

'ಸುಗುಣರತ್ನಾಕರನೆನಿಪ್ಪ ತೋಂಟದ ಸಿದ್ಧಲಿಂಗ;
ಸುಜ್ಞಾನಕ್ರಿಯಾವೇದ್ಯಂ';
'ಗುರುಸಿದ್ಧೇಂದ್ರ'; 'ಕಾರಣಿಕ ಪುರುಷ';
'ಮಾರಾರಿಯ ಪರಾವತಾರಮೂರ್ತಿ':
'ಯೋಗಿಗಳ ವಲ್ಲಹ'; 'ಖಂಡೇಂದುಧರನೆನಿಪ ಸಿದ್ಧಲಿಂಗೇಶ';
'ಅಖಿಲದೇವತಾವಲ್ಲಭನೆನಿಪ ಸಿದ್ಧದೇಶಿಕಂ';
'ಕಾರುಣಿಕರುದ್ರ'; 'ಜಗದಾರಾಧ್ಯ': 'ಶಿವಯೋಗಿಗಳರಸ';
'ಜಗದೇಕವಲ್ಲಭ'; 'ನಿಗಮದುರ್ಲಭ'; 'ಮಹಾಮಹಿಮ';
'ಸಿದ್ಧಕುಲಸಾರ್ವಭೌಮ' – ಇತ್ಯಾದಿ

ಈ ರೀತಿ ಕಾವ್ಯದ ತುಂಬೆಲ್ಲ ಈ ವ್ಯಕ್ತಿಯನ್ನು ಕುರಿತು ಬಳಸಿರುವ ವಿಶೇಷಣಗಳು ಅರ್ಥಪೂರ್ಣವೂ, ಕಾಂತಿಯುತವೂ, ಆಗಿವೆಯಲ್ಲದೆ ಸಿದ್ಧಲಿಂಗಯತಿಗಳ ವ್ಯಕ್ತಿತ್ವದ ಉನ್ನತಿಯ ದ್ಯೋತಕವಾಗಿವೆ.

[೪]

ಸಿದ್ಧಲಿಂಗೇಶ್ವರರ ಜೀವನ : ಈ ಪುರಾಣದಲ್ಲಿ ಕವಿಯು ಸಿದ್ಧಲಿಂಗೇಶ್ವರರ ಜೀವನ ಚರಿತ್ರೆಯ ಕಡೆಗೆ ವಿಶೇಷ ಗಮನ ಕೊಡದೆ ಅವರು ಗೈದ ಪವಾಡ, ಧಾರ್ಮಿಕ ವಾದವಿವಾದ, ಲೋಕಹಿತ ಕಾರ್ಯ, ವೀರಶೈವ ಧರ್ಮಬೋಧೆಯ ಕಡೆಗೆ ಗಮನವಿತ್ತಿದ್ದಾನೆ. ಮೊದಲಿನ ಸಂಧಿಯಲ್ಲಿ ಕವಿಯು ಪರಮೇಶ್ವರ, ಪಾರ್ವತಿ, ವೀರಭದ್ರ, ಷಣ್ಮುಖ, ಗಣಪತಿ, ಬಸವೇಶ್ವರ,

ಚೆನ್ನಬಸವೇಶ್ವರ, ಅಲ್ಲಮಪ್ರಭು, ಮಹಾದೇವಿಯಕ್ಕ, ಮೋಳಿಗೆಯ ಮಾರಯ್ಯ, ಸಿದ್ಧರಾಮ, ಘಟ್ಟಿವಾಳಯ್ಯ, ದಸರಯ್ಯ, ಮುಸುಟೆಯ ಚೌಡಯ್ಯ, ಸಪ್ಪೆಯ ಯತೀಶ, ಬೋಳ ಬಸವೇಶ, ಗೂಳೂರ ಸಿದ್ಧವೀರೇಶ, ಪಾಲ್ಕುರಿಕೆ ಸೋಮ ನಾಥ, ಪದ್ಮರಸ, ಹರಿದೇವ, ಬಾಣ, ಕವಿ ಕಾಳಿದಾಸ, ಮಳಯರಾಜ, ಭೋಜರನ್ನು ತನ್ನ ಕಾವ್ಯದಲ್ಲಿ ಸ್ತುತಿಸಿದ್ದಾನೆ. ಶಿವನ ಸಭೆ ನಡೆದಿರುತ್ತದೆ. ದೇವತೆಗಳೆಲ್ಲ ಅಲ್ಲಿ ವಿರಾಜಮಾನರಾಗಿರುತ್ತಾರೆ. ಕರತಳದ ವೀಣಾದಂಡದಿಂದ ನಾರದಮುನೀಶ್ವರರು ಅಲ್ಲಿಗೆ ಬಿಜಯಂಗೈಸುತ್ತಾರೆ. ಭೂಲೋಕದ ಸಂಚಾರ ದಲ್ಲಿ "ಮಾನುಷ್ಯ ಸಂಘಾತವಂ ಕಂಡು ಬೇವಸಗೊಂಡು ತಿರುಗಿದೆಂ; ನೀಂ ಕರುಣದಿಂದಲ್ಲಿ ಗೈದಿ ರಕ್ಷಿಪುದು ಮನುಜವ್ರಾತಮಂ ಸರ್ವಜ್ಞ" ಎಂದು ಶಿವನಲ್ಲಿ ಬೇಡಿಕೊಳ್ಳುತ್ತಾನೆ. ಶ್ರೀ ವಿಭೂತಿ, ರುದ್ರಾಕ್ಷಿ, ಪಂಚಾಕ್ಷರಿಗಳುಳ್ಳವರು, ಗುರುಲಿಂಗ ಜಂಗಮವೆ ಶಿವನೆಂಬ ಭಾವದಿಂ ಭಜಿಸಿ, ತೀರ್ಥ ಪ್ರಸಾದವ ಕೊಂಡು ಸಾವಧಾನದೊಳಿರ್ಪವರಲ್ಲಿಲ್ಲ; ಶಿವಭಕ್ತರಲ್ಲಿ ಜಾತಿ ಸೂತಕವ ಕಲ್ಪಿಸಿ ಕೊಟ್ಟಿದ್ದಾರೆ: ಜೈನ, ಬೌದ್ಧ, ವೈಷ್ಣವ, ಚಾರ್ವಾಕರು ಹೆಚ್ಚಿದ್ದಾರೆ. ಅಲ್ಲದೆ ಶಿವನ ನಿಂದೆ ಮಾಡುತ್ತಾರೆ; ಅರವತ್ತು ಮೂವರು ಇಳೆಯೊಳವತರಿಸಿ ಕಲಿಯುಗದ ಮೊದಲ ಪಾದದಲ್ಲಿ ಮೆರೆದರು; ಅಗ್ಗಳರೆನಿಪ ಬಸವೇಶ್ವರಾದಿ ಶರಣರ್ ಬಳಿಕ ಬಂದು ಲೋಕವನೆ ಸಲಹಿ ಗಳಿಲನೆ ಆ ವೀರಶೈವದ ಆಚಾರವನ್ನು ಸ್ಥಿರಂ ಗೊಳಿಸಿದರು; ಅಲ್ಲಿಂದ ನಂತರ ಶಿವಭಕ್ತಿ ಮಾಸಿದೆ" ಎಂದು ನಾರದನು ಶಿವಂಗೆ ಬಿನ್ನೈಸಿದುದರಿಂದ ಅಲ್ಲಿರ್ದ ಹೃನ್ನಿಲಯನೆಂಬ ಬಸವೇಶನು, "ಶಿವನೇ ಚಿಂತೆಯೇಕೆ, ನನ್ನ ಹೃದಯದಲ್ಲಿರ್ದ ಆನಂದ ರೂಪಿನ ಅನಾದಿ ಜಂಗಮ ಶಿವಭಕ್ತಿಯ ಉದ್ಧಾರಕ್ಕೆ ಹೋಗುವೆನೆಂದು ನುಡಿಯುತ್ತಾನೆ" ಎನ್ನುತ್ತಾನೆ. ಹೀಗೆ ಬಸವೇಶನ ಹೃದಯವಾಸಿಯಾಗಿದ್ದ ಅನಾದಿ ಜಂಗಮವೇ ತೋಂಟದ ಸಿದ್ಧಲಿಂಗನಾಗಿ ಧರೆಗೆ ಶಿವಭಕ್ತಿಯ ಕಾರ್ಯಕ್ಕೆ ಆಗಮಿಸುತ್ತಾನೆ. ಈ ಭಾಗದಲ್ಲಿ ಕವಿಯು ಭೂಲೋಕದಲ್ಲಿ ಅರವತ್ತು ಮೂವರು ಪುರಾತನರ ತರುವಾಯ ಶಿವಭಕ್ತಿಯನ್ನು ಪಸರಿಸಿದವರು ಬಸವೇಶ್ವರಾದಿ ಶಿವಶರಣರೇ ಎಂಬುದನ್ನು ತಿಳಿಸಿದ್ದಾನೆ. ಶಿವನ ಅಪ್ಪಣೆಯ ಮೇರೆಗೆ ಕರ್ನಾಟ ದೇಶದಲ್ಲಿ ವಾಣಿಜ್ಯಪುರಿ (ಹರದನಹಳ್ಳಿ) ಯಲ್ಲಿ ಅಮೃತೇಶ್ವರನೆಂಬ ಗುಡಿಯಲ್ಲಿ ಅಲ್ಲಿಯ ಹರದರು ಆದಿಗಣೇಶನೆಂಬ ಚರಮೂರ್ತಿಯನ್ನು ನೆಲೆಗೊಳಿಸಿದರು. ಆತನಿಂದ ಆದಿಗಣನಾಥ, ನಿರ್ಮಾಯಗಣವರ, ನಿರಂಜನ ಗಣೇಶ್ವರ, ಜ್ಞಾನಾನಂದ, ಆತ್ಮ ಗಣನಾಥ, ಅಧ್ಯಾತ್ಮ ಗಣನಾಥ, ರುದ್ರದೇವ, ಬಸವಪ್ರಭು, ಆದಿಲಿಂಗೇಶ, ಚನ್ನವೀರೇಶ, ಗೋಸಲ ಯತೀಶ, ಶಂಕರೇಶ, ದಿವ್ಯ ಲಿಂಗೇಶ, ಅವನ ಶಿಷ್ಯ ಶ್ರೀಗುರು ಚನ್ನಬಸವ ದೇಶಿಕ ಎಂಬ ಹದಿನಾಲ್ಕು ಜನ ಶಿಷ್ಯರು ಆ ದೇವಾ ಲಯದಲ್ಲಿ ಸ್ಥಾನಪತಿಗಳಾದರು. ಇಲ್ಲಿ ಕೆಲವು ಹೆಸರುಗಳು ಪರಂಪರೆ

ಯಲ್ಲಿ ತಿಳಿಯಲಾರದುದರಿಂದ ಕಾಲ್ಪನಿಕವಾಗಿವೆಯಾದರೂ ವ್ಯಕ್ತಿಗಳು (ಬೇರೆ ಹೆಸರಿನವರು) ಇರಬೇಕೆಂಬುದು ತಿಳಿದು ಬರುತ್ತದೆ. ಈ ವಾಣಿಜ್ಯಪುರಿಯಲ್ಲಿ ಶಿವನು ಕೈಲಾಸದಿಂಡಿಳಿದು ಎಂಟು ವರುಷದ ಶಿಶುತ್ವವನ್ನು ಹೊಂದಿ, ತೇಜಸ್ಸನ್ನು ಪಡೆದು, ಆ ದೇವಾಲಯಕ್ಕೆ ಬಂದು ಶ್ರೀಗುರು ಚನ್ನಬಸವ ದೇಶಿಕನಲ್ಲಿ ಶಿಶುತ್ವವನ್ನು ವಹಿಸಿಕೊಳ್ಳುತ್ತಾನೆ. ದೀಕ್ಷಾಕಾಲದಲ್ಲಿ ಶಿವಶರಣರು ಆ ಶಿಶುವಿಗೆ "ಸಿದ್ಧಲಿಂಗೇಶ" ಎಂದು ನಾಮಕರಣ ಮಾಡುತ್ತಾರೆ. ಇಲ್ಲಿ ಈ ಶಿಶುವಿನ ಮೂಲ ಹೆಸರು ಅವನ ತಾಯ್ತಂದೆಗಳ ಹೆಸರು ಉಕ್ತವಾಗಿಲ್ಲ. ಗುರುವಿನಲ್ಲಿ ಸಿದ್ಧಲಿಂಗೇಶನು ಅತಿ ಭಕ್ತಿಯಿಂದ ಗುರುಸೇವೆ-ಶಿವಭಕ್ತಿ, ವಿರಕ್ತ ದೀಕ್ಷೆ ಕೈಕೊಂಡು "ಅಖಿಲ ಜಗವನ್ನು ನಿರೀಕ್ಷಿಸುತೆ ರಕ್ಷಿಸಪೋಪುದಯ್ಯಾ" ಎಂಬ ಆಜ್ಞೆ ಪಡೆದು, ಪೊಡವಿಯನ್ನು ಪಾಲಿಸಲು ಚರಮೂರ್ತಿಗಳ ಗಣದೊಡನೆ ಸಮತೆ, ಸದ್ಭಾವ, ದೃಢತೆ, ದಯೆ, ವೈರಾಗ್ಯ ಸುಜ್ಞಾನಗಳನ್ನು ಪಡೆದು ದೇಶ ಸಂಚಾರ ಕೈಕೊಳ್ಳುತ್ತಾನೆ. ಸೌರಾಷ್ಟ್ರದ ನೀಲಕಂಠ, ಶ್ರೀಶೈಲ, ಕೊಲ್ಲಿಪಾಕಿ, ಕೇತಾರ, ದ್ರಾಕ್ಷಾರಾಮ, ಗೋಕರ್ಣ, ಹಂಪೆ, ಶಿವಗಂಗೆ, ರಾಮೇಶ್ವರ, ಪೊನ್ನಾಂಬು, ಕಾಳಹಸ್ತಿ, ಅರುಣಾದ್ರಿ, ಮೊದಲಾದೆಡೆಗಳಲ್ಲಿ ಸಂಚರಿಸುತ್ತಾನೆ. ದಾರಿಯಲ್ಲಿ ಅನೇಕ ಗ್ರಾಮಗಳನ್ನು ಸಂದರ್ಶಿಸುತ್ತಾನೆ. ಕೊಂಕಣ ದೇಶಕ್ಕೆ ಆಗಮಿಸುತ್ತಾನೆ; ಗೋದಾವರಿಯ ತೀರದಲ್ಲಿ ಶಿವಪೂಜೆಗೈದು ಅಲ್ಲಿಯ ಭೂಸುರರಿಗೆ ಶಿವಾಧಿಕ್ಯವನ್ನು ಸಾರಿ ಜಂಗಮಾಧಿಕ್ಯವನ್ನು ತಿಳಿಸುತ್ತಾನೆ; ಸ್ಥಾವರಕ್ಕಿಂತ ಜಂಗಮವೇ ಮೇಲೆಂಬ ಬಸವಣ್ಣನ ತತ್ವವನ್ನು ನೆಲೆಗೊಳಿಸುತ್ತಾನೆ. ಅಲ್ಲಿಯ ತ್ರಿಯಂಬಕೇಶ್ವರನಿಗೆ ಜಂಗಮ ಪ್ರಸಾದವನ್ನು ಸೇವಿಸುವಂತೆ ಮಾಡುತ್ತಾನೆ. ಅಲ್ಲಿಯೇ ಗೋದಾವರೀ ತೀರದಲ್ಲಿ ಶಿವಯೋಗವನ್ನು ಸಂಪಾದಿಸುತ್ತಾನೆ. ಅಲ್ಲಿ ಹೋರಾಡುತ್ತಿದ್ದ ರಾಜರುಗಳ ವೈರವನ್ನು ಉಪಶಮನಗೊಳಿಸುತ್ತಾನೆ. ಓಪೇಶ್ವರಕ್ಕೆ ಬಂದು ವೀರಣ್ಣನೆಂಬ ಸದ್ಭಕ್ತನಲ್ಲಿರುತ್ತಾನೆ; ಅಲ್ಲಿಯ ಭೈರವರನ್ನು ಸೋಲಿಸುತ್ತಾನೆ; ಕುಟಿಲಸಿದ್ಧನಾದ ಉತ್ತುಂಗ ಯೋಗಿಯ ಗರ್ವಭಂಗ ಮಾಡುತ್ತಾನೆ. ಉಳುವಿಗೆ ಬಂದು ಜನಾರ್ದನಜಿಯೆಂಬ ವೈಷ್ಣವನನ್ನು ವಾದದಲ್ಲಿ ಸೋಲಿಸುತ್ತಾನೆ; ಕಾರ್ಕಳಕ್ಕೆ ಆಗಮಿಸಿ ಜೈನರನ್ನು ಸೋಲಿಸುತ್ತಾನೆ.

ಕಗ್ಗೆರೆಯ ಪುಷ್ಪವಾಟಿಯಲ್ಲಿ ಸುಸ್ಥಿರದಿಂದ ವಲ್ಮೀಕವನ್ನು ಪ್ರವೇಶಿಸಿ ನಾಗಿಣೀ ನದಿಯ ತೀರದಲ್ಲಿ ಯೋಗಮಗ್ನನಾಗಿ ಮಹಾ ಶಿವಯೋಗವನ್ನು ಸಂಪಾದಿಸುತ್ತಾರೆ. ಇಲ್ಲಿ ಯೋಗದ ಸಿದ್ಧಿ ಪಡೆದುದು ಅತ್ಯದ್ಭುತವಾಗಿದೆ. ಅಲ್ಲಿಂದ ಮುಂದೆ ಮತ್ತೆ ಸಂಚಾರಕ್ಕೆ ಹೊರಟು ಭೂತ ಬೇತಾಳ, ಶಾಪಗ್ರಸ್ತರಾದ ಗಂಧರ್ವರ ಶಾಪ ವಿಮೋಚನೆ, ಪ್ರಾಣಿಗಳಿಗೆ ಅನುಕಂಪೆ, ಜೀವಿಗಳಿಗೆ

ಜೀವದಾನ ಮಾಡುತ್ತ ಕಾರಣಿಕ ಪುರುಷರಾಗಿ ಕನ್ನಡ ನಾಡಿನ ತುಂಬೆಲ್ಲ ಸಂಚ ಸುತ್ತಾರೆ. ಅವರ ವಿಖ್ಯಾತಿಯು ದಿಗ್ ದಿಗಂತಗಳಿಗೂ ಹರಡುತ್ತದೆ. ಅವರಲ್ಲಿ ಶಿಷ್ಯತ್ವವನು ವಹಿಸಿ ಅನೇಕರು ಆಗಮಿಸುತ್ತಾರೆ.

[೫]

ಸಿದ್ಧಲಿಂಗೇಶ್ವರರ ಶಿಷ್ಯಾವಳಿ: ಈ ಕಾವ್ಯದ ಹದಿನೈದನೆಯ ಸಂಧಿಯಲ್ಲಿ ಸಿದ್ಧಲಿಂಗ ಯತಿಗಳ ಶಿಷ್ಯರ ಹೆಸರುಗಳಿವೆ; ಅವು ಇಂತಿವೆ: ಸಪ್ಪೆಯ ಯತೀಶ, ಬೋಳ ಬಸವೇಶ, ಉಪ್ಪಿನಹಳ್ಳಿಯಾರ್ಯ, ರಾಜವೀಟಿಯ ದೇವ, ಗುಮ್ಮಳಾ ಪುರದ ಸಿದ್ಧಲಿಂಗದೇವ, ಪಟ್ಟಣದ ದೇವ, ಗುರುಚಂದ್ರಶೇಖರದೇವ, ಗುರು ದೊಡ್ಡ ಸಿದ್ಧೇಶ, ಶೀಲವಂತೇಶ್ವರ, ಗಟ್ಟಿ ಸಿದ್ಧಯ್ಯ, ಸುತ್ತೂರು ಸಿದ್ಧಮಲ್ಲೇಶ, ಘನಲಿಂಗಿದೇವ, ಬತ್ತಲೇಶ, ಹುಚ್ಚ ಪರ್ವತದೇವ, ಚಿಟ್ಟಿಗದೇವ, ಕಟ್ಟೆಯ ಪುರದ ನಂಜದೇಶಿಕೇಂದ್ರ, ತಿಪ್ಪೂರೊಡೆಯ ಕಂಕಣದೇವ, ಹೀಗೆ ಪ್ರಮುಖರಾದ ಹದಿನೆಂಟು ಶಿಷ್ಯರ ಹೆಸರುಗಳಿಲ್ಲಿ ಉಕ್ತವಾಗಿವೆ. ಇವರೆಲ್ಲರೂ ಕನ್ನಡ ವಾಙ್ಮಯಕ್ಕೆ ಪರಿಚಿತರಾದವರು; ಕೆಲವರಂತೂ ಅತಿ ಪ್ರಸಿದ್ಧರು. ಗುಮ್ಮಳಾಪುರದ ಸಿದ್ಧ-ಲಿಂಗದೇವನು ಶೂನ್ಯ ಸಂಪಾದನೆಕಾರನು. ಕರ್ನಾಟಕದಲ್ಲಿ ಬಸವಣ್ಣನವ ರೊಬ್ಬರನ್ನು ಬಿಟ್ಟರೆ ಇಷ್ಟೊಂದು ಮೇಧಾವಿ ಶಿಷ್ಯ ವರ್ಗವನ್ನು ಪಡೆದ ವ್ಯಕ್ತಿಗಳು ಸಿಗುವುದು ದುರ್ಲಭವೆಂದೇ ಹೇಳಬೇಕು. ಈ ಶಿಷ್ಯಕೋಟಿಯು ಸಾಧಿಸಿದ ಕಾರ್ಯವು ಅನುಪಮವಾಗಿದೆ. ಅದರ ಶ್ರೇಯಸ್ಸೆಲ್ಲಾ ಯತಿಸಾರ್ವಭೌಮನಾದ ಶ್ರೀ ಸಿದ್ಧಲಿಂಗನಿಗೇ ಸಲ್ಲಬೇಕು.

[೬]

ಸಿದ್ಧಲಿಂಗೇಶ್ವರರ ಸಾಧನೆ ಮತ್ತು ಬೋಧನೆ: ಸಿದ್ಧಲಿಂಗೇಶ್ವರರು ಚಿಕ್ಕಂದಿನಲ್ಲಿಯೇ ವೈರಾಗ್ಯಶೀಲರಾಗಿದ್ದು ಗುರುಗಳ ಬಳಿ ಶಿವಭಕ್ತಿ, ಗುರುಸೇವೆ ಸಾಧಿಸಿ, ಒಬ್ಬ ನಿಜ ಯತಿಯಾಗಿ ಸಮಸ್ತ ನಾಡಿನ ತುಂಬೆಲ್ಲಾ ಸಂಚರಿಸಿ ನಾಡಿನ ಪರಿಚಯ ಪಡೆದು ಹಲವಾರು ಮತ, ಧರ್ಮ ಮತ್ತು ಯೋಗಿಗಳ ಪರಿಚಯ ಪಡೆದು ಪ್ರಸಿದ್ಧ ಯೋಗಿಯೆನ್ನಿಸಿಕೊಂಡರು. ಅದರಿಂದಲೇ ಅಂದಿನ ಜನತೆಯೂ ಅವರನ್ನು ಸಾಕ್ಷಾತ್ ಶಿವನೆಂದೇ ಭಾವಿಸಿತು. ಚಾರ್ವಾಕ, ವೈಷ್ಣವ, ಜೈನರನ್ನು ಸೋಲಿಸಿ, ವೀರಶೈವ ಧರ್ಮದ ಮೇಲ್ಮೆಯನ್ನು ಸ್ಥಿರಗೊಳಿಸಿದರು. ಅದ್ಭುತ ಕಾರ್ಯಗೈದಿದರು; ಕೀಳು ದೈವದ ಖಂಡನೆ, ನಾಸ್ತಿಕ ವಿಚಾರ ಖಂಡನೆ, ಏಕದೇವೋಪಾಸನೆ ಇವು ಅವರ ಬೋಧೆಯ ಮುಖ್ಯ ವಿಷಯಗಳಾಗಿವೆ. ಒಂದೆಡೆ ಒಬ್ಬ ಸ್ತ್ರೀ ಸಹಗಮನ ಮಾಡುವದನ್ನು ತಡೆದಿದ್ದಾರೆ. ಭಗೀರಥನಂತೆ

ಸಾಹಸಗೈದಿದ್ದಾರೆ; ಸಿದ್ಧರಾಮ, ಅಲ್ಲಮ, ರೇವಣಸಿದ್ಧರಂತೆ ಕುಟಿಲ ಯೋಗಿಗಳನ್ನು ನುಗ್ಗು ಮಾಡಿದ್ದಾರೆ. ಹಿಂದಿನ ಶಿವ-ಶರಣರಂತೆ ಅನೇಕರ ರೋಗ ಪರಿಹಾರಗೊಳಿಸಿದ್ದಾರೆ. ಅಕಾಲದಲ್ಲಿ ಫಲ ಜಲವ ಪಡೆವ ಶಕ್ತಿ ಅವರಿಗಿತ್ತೆಂದು ಕವಿಯ ನಂಬಿಕೆ; ಶಾಪ ವಿಮೋಚನ ಮಾಡುವ ಶಕ್ತಿಯೂ ಅವರಿಗೆ ಲಭ್ಯವಾಗಿತ್ತು. ಅವರ ನಿರಾಶೆ, ಉಲ್ಲಾಸ, ಧೈರ್ಯ, ಪರಮ ಶಾಂತಿ, ಬಲ್ಲಿತಹ ವೈರಾಗ್ಯ, ಕ್ರೋಧವಿರಹಿತತ್ವ ಇವು ಎಂತಹರನ್ನೂ ಬೆರಗುಗೊಳಿಸಬಲ್ಲವಾದುದರಿಂದ ಅವರನ್ನು ಊರಿಂದೂರಿಗೆ ಜನತೆಯು ಪ್ರೀತಿಯಿಂದ ಆಮಂತ್ರಿಸುತ್ತಿತ್ತು. ಅವರನ್ನು ಭಕ್ತಿಯಿಂದ ಗೌರವಿಸಿದವರಿಗೆ ಸಕಲ ಸಿದ್ಧಿಗಳೂ ಲಭ್ಯವಾಗಬಹುದಾಗಿದ್ದುವು. ಅದರಿಂದ ಜನತೆ ಅವರೆಡೆಗೆ ಆಕರ್ಷಿತವಾಗಿತ್ತು. ತಮ್ಮ ಜೀವಿತಾವಧಿಯಲ್ಲಿ ಯೋಗಿಯಾದವನು ಹೇಗೆ ಇರಬೇಕೆಂಬುದಕ್ಕೆ ಅವರೊಂದು ಮಾದರಿಯಾಗಿದ್ದರು. ಜನತೆಗೆ ಕಳವು, ವಂಚನೆಗಳಿಂದ ದೂರವಿರಲು ಕಲಿಸಿದರು. ಅಸತ್ಯದಿಂದ ಆಗುವ ಅನಿಷ್ಟವನ್ನು ತೋರಿಸಿದರು. ಹಿಂದಿನ ಶರಣರ ಸಮಗ್ರ ಗುಣಗಳೆಲ್ಲ ಈ ಯತೀಶನಲ್ಲಿ ಬೆರೆತಿದ್ದವೆಂಬುದೇ ಈ ಕವಿಯು ಹೇಳುವ ವೈಶಿಷ್ಟ್ಯವಾಗಿದೆ. ಭಕ್ತಿಯಿಂದ ಕರೆದವರ ಬಳಿಗೆ ಹೋಗಿ ಅವರನ್ನು ಸಂತೋಷಪಡಿಸುವುದು ಈ ಯತಿರಾಜನ ದೊಡ್ಡ ಗುಣವಾಗಿದೆ. ಲೋಕವನ್ನು ಒಂದು ಕುಟುಂಬದಂತೆ ಸಲಹುವದೆ ಅವನ ಗುರಿಯಾಗಿದ್ದಿತು. ನಿಂದಿಸಿದವರಿಗೆ ಕೇಡು ತಾನಾಗಿಯೇ ಉಂಟಾಗುತ್ತಿತ್ತು. ಭೂತಾನುಕಂಪೆ, ಪ್ರಾಣಿದಯೆ, ನಿಸರ್ಗಶಕ್ತಿಗಳನ್ನು ದಮನ ಮಾಡುವ ಸಿದ್ಧಿ, ವೈರಿಗಳನ್ನು ನಾಶ ಮಾಡುವ ಶಕ್ತಿ ಸಾಮರ್ಥ್ಯ ಇವು ಅವರಿಗೆ ಅವರು ಗೈದ ಉಗ್ರವಾದ ಶಿವಯೋಗದ ಸಾಧನೆಯಿಂದ ಲಭ್ಯವಾಗಿವೆ. ಷಟ್‌ಸ್ಥಲಶಾಸ್ತ್ರದಲ್ಲಿ ಬಲ್ಲಿದರಾಗಿ ಭಕ್ತನಿಂದ ಮೊದಲ್ಗೊಂಡು ಐಕ್ಯನವರೆಗೆ ಸಾಧಿಸಬಹುದಾದ ಸಿದ್ಧಿಯನ್ನು–ಪರಿಣಾಮವನ್ನು ಸಮಸ್ತ ಜನತೆಗೆ ಅರುಹಿ ವೀರಶೈವ ಧರ್ಮದ ಮರುಸಂಸ್ಥಾಪಕರಾದರೆಂದು ಹೇಳಬಹುದು; ನೂತನ ಮಹಾದೇವನೆಂದೆನಿಸಿದರು. ಗುರುಶ್ರೀ ಬೋಳ ಬಸವೇಶನಿಗೆ ತಮ್ಮ ತರುವಾಯ ಪಟ್ಟಗಟ್ಟಿ ವೀರಶೈವ ಧ್ವಜವು ಯಾವಾಗಲೂ ಮೇಲೆ ಹಾರಾಡುವಂತೆ ಆಶೀರ್ವದಿಸಿದರು. ಆದುದರಿಂದ ಅವರ ಕುರುಹುಗಳು ನಾಡಿನ ತುಂಬೆಲ್ಲವಿದ್ದು ಅವರು ಸಂಚರಿಸಿದ ಸ್ಥಳಗಳು ಇನ್ನೂ ಜಾಗ್ರತ ಸ್ಥಳಗಳಾಗಿವೆಯೆನ್ನಬಹುದು. ಹೇರಂಬನಂತಹ ಬ್ರಾಹ್ಮಣ ಕವಿಯೊಬ್ಬನು ಈತನ ಬಗೆಗೆ ಕಾವ್ಯ ಬರೆದುದು ಆತನ ಅಗ್ಗಳಿಕೆಯ ಕುರುಹುಗಳಲ್ಲೊಂದಾಗಿದೆ.*



---

*ಶ್ರೀ ಮನ್‌ಮಹಾರಾಜ ನಿರಂಜನ ಜಗದ್ಗುರು ತೋಂಟದಾರ್ಯ ಮಹಾ ಸಂಸ್ಥಾನ ಮಠ, ಗದಗ ಇವರಿಂದ ೧೯೩೧ ರಲ್ಲಿ ಪ್ರಕಟಿಸಲ್ಪಟ್ಟ ಶ್ರೀ ಸಿದ್ಧೇಶ್ವರ ಪುರಾಣದಿಂದ ಈ ಲೇಖಕನು ಸಾಮಗ್ರಿಯನ್ನು ಬಳಸಿಕೊಂಡಿದ್ದಾನೆ.

# ಶ್ರೀ ಸಂಗಮನಾಥನ ವಚನಗಳು

— ಸಂಗಮೇಶ ಹೊಸಮನಿ

ಬಾ ಎನದೆ ಬಂದಿರಾ ?
ಹೋಗೆನದೆ ಹೋದಿರಾ ?
ಯಾರು ಕರೆದರಯ್ಯ ನಿಮ್ಮನು ?
ಯಾರು ಕಳುಹಿದರಯ್ಯ ನಿಮ್ಮನು ?

ತನುವ ತೋಂಟವ ಮಾಡಿ
ಮನ ಮಲ್ಲಿಗೆಯರ್ಪಿಸಿ
ಘನ ಪೂಜೆಯನು ಸಲ್ಲಿಸಿದಿರಯ್ಯ !

ಮಂಜಿನ ಮಾಯೆಯು ತರಹರಿಸಿ
ರಂಜನೆಯ ನಂಜನಳಿದಳಿದು
ನೆಲದ ಮರೆಯ 'ನಿಧಾನ'ಕೆ – 'ಅಂಜನ' ವಾದಿರಯ್ಯ !

'ನಿರಂಜನ' ಶಿವಯೋಗಿ ವರೇಣ್ಯ
ತೋಂಟದಾರ್ಯ ಪ್ರಭುವೆ !
ಬಾಳಿಗಂಟಿದ ಹದಿನೆಂಟು ಅಂಟುರೋಗಗಳಿಗೆ
ಮದ್ದು ನೀಡಿ ಅನುಪಾನಕನುಗೊಳಿಸಿ
ಶ್ರೀ ಸಂಗಮನಾಥನ ಶ್ರೀಚರಣ ಸೇವೆಗಣಿಗೊಳಿಸಯ್ಯ !!

ತೋಂಟದ ಸಿದ್ಧಲಿಂಗೇಶ್ವರರು ನಿರೂಪಿಸಿದ

# ವೀರಶೈವ ಸಿದ್ಧಾಂತ

— ಶ್ರೀಮತಿ ನೀಲಗಂಗಾದೇವಿ ಚರಂತಿಮಠ

ನಿರವಯ ನಿರಾಮಯಂ ನಿರಾಕುಳಂ;
ನಿರ್ದ್ವಂದ್ವಂ ನಿರ್ಮಳ ನಿಜಸ್ವರೂಪಂ;
ನಿರ್ಭಾವ ನಿಃಪುರುಷ ನಿರಂಜನ ನಿರಾಕಾರಂ;
ನಿರಾವರಣ ನಿರುಪಮ ನಿರ್ಗುಣ ನಿರಾಧಾರ ನಿರಾಲಂಬಂ;
ಸರ್ವಾಧಾರ ಸದಾಶಿವಂ ಅತ್ಯತಿಷ್ಟದ್ದಶಾಂಗುಲಂ ನಿತ್ಯನಿಶ್ಚಿಂತಂ;
ನಿರ್ಮಲ ನಿರ್ಮಾಯ ನಿರಾಳಕಂ;
ಹರ ಹರಾ ಶಿವಶಿವಾ ಜಯ ಜಯ ಜಯತು;
ಶರಣ ಕರುಣಾಕರ ತ್ರಾಹಿಮಾಂ ಭಕ್ತಿ ವತ್ಸಲ ಮತ್ಪ್ರಾಣನಾಥ
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ

ಭಾರತೀಯ ಧರ್ಮದ ಅತಿ ಪುರಾತನ ಶಾಖೆಗಳಲ್ಲಿ ಶೈವಧರ್ಮವೂ ಒಂದು. ಸಿಂಧು ಸಂಸ್ಕೃತಿಯಲ್ಲಿಯೇ ಶಿವನ ಉಪಾಸನೆಯ ಬೇರುಗಳಿವೆ. ಶೈವಧರ್ಮ ಮುಂದೆ ಬಹು ಶಾಖೆಗಳನ್ನು ಚಾಚಿ ಬೆಳೆದರೂ ಅವುಗಳಲ್ಲಿ ಪರಿಪೂರ್ಣತೆಯನ್ನು ಸಾಧಿಸಿದುದು ವೀರಶೈವ ಎನ್ನಬಹುದು. ಎಲ್ಲ ಶೈವಸಿದ್ಧಾಂತಗಳ ಒಳ್ಳೆಯ ಅಂಶಗಳನ್ನು ತನ್ನಲ್ಲಿ ಸಮಾವೇಶಗೊಳಿಸಿಕೊಂಡು ವ್ಯಾಪಕವಾದ ಒಂದು ತತ್ವಸಿದ್ಧಾಂತವನ್ನೂ, ಆಚರಣೆಯ ಮಾರ್ಗವನ್ನೂ ಅದು ರೂಪಿಸಿಕೊಂಡಿತು. ಬಸವಾದಿ ಪ್ರಮಥರ ಪ್ರಭಾವದಿಂದ ಈ ಧರ್ಮ ಹೊಸಮೆರಗನ್ನು ಪಡೆಯಿತು. ಹೊಸದಾಗಿ

ಸ್ಥಾಪಿತವಾದಷ್ಟೇ ಪ್ರಸಿದ್ಧಿಯನ್ನು ಪಡೆಯಿತು. ಹನ್ನೆರಡನೇ ಶತಮಾನದಲ್ಲಿ ಕರ್ನಾಟಕ ಕಂಡ ಈ ಯುಗ ಅದ್ವಿತೀಯವಾದುದು. ಇಲ್ಲಿ ಸಾಹಿತ್ಯಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ, ಕ್ರಾಂತಿಗಳಿಗೆ ಧರ್ಮವೇ ಕಾರಣವಾಯಿತು. ಈ ಕ್ರಾಂತಿಯ ಕಿಡಿ ಹದಿಮೂರು ಹದಿನಾಲ್ಕನೆ ಶತಮಾನಗಳಲ್ಲಿ ಮಂದವಾಗಿದ್ದರೂ ಮುಂದೆ ಹದಿನೈದನೇ ಶತಮಾನದಲ್ಲಿ ತನ್ನ ಪ್ರಖರವಾದ ಬೆಳಕನ್ನು ಬೀರಿತು. ಹನ್ನೆರಡನೇ ಶತಮಾನದಲ್ಲಿ ಸಾಹಿತ್ಯಿಕ ಕ್ರಾಂತಿಯಾಯಿತೆಂದು ಹೇಳಬಹುದು ಅದೇ ಹದಿನೈದನೇ ಶತಮಾನದಲ್ಲಿ ವೀರಶೈವಧರ್ಮದ ವಿವೇಚನೆ ಪ್ರತಿಪಾದನೆ ವಿಜಯನಗರದ ಸುವರ್ಣಯುಗದ ಆ ಕಾಲದಲ್ಲಿ ನಡೆದವು.

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣ ವೀರಶೈವಧರ್ಮದ ಕಾರ್ಯ ಕ್ಷೇತ್ರವಾಗಿದ್ದಂತೆ ಹದಿನೈದನೆಯ ಶತಮಾನದಲ್ಲಿ ಹಂಪಿ ಮತ್ತು ಎಡಿಯೂರುಗಳು ವೀರಶೈವ ಧರ್ಮದ ಕಾರ್ಯಕ್ಷೇತ್ರಗಳಾಗಿದ್ದವು. ನೂರೊಂದು ವಿರಕ್ತರಲ್ಲಿ ಜಕ್ಕಣಾರ್ಯರು ಅಗ್ರಗಣ್ಯರಾಗಿದ್ದಾರೆ. ಏಳು ನೂರೊಂದು ವಿರಕ್ತರಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಅಗ್ರಗಣ್ಯರು. ಮಿಕ್ಕ ಏಳುನೂರು ಜನರು ಅವರ ಶಿಷ್ಯರಾಗಿದ್ದರು. ಸಹಸ್ರಾರು ವರುಷಗಳ ಅವಧಿಯಲ್ಲಿ ವೀರಶೈವ ದರ್ಶನವು ಕಾಲಕಾಲಕ್ಕೆ ತಕ್ಕ ಮಾರ್ಪಾಡುಗಳನ್ನು ಪಡೆಯುತ್ತ ತೋಂಟದ ಸಿದ್ಧಲಿಂಗೇಶ್ವರರ ಹಾಗೂ ಷಣ್ಮುಖಸ್ವಾಮಿಗಳ ಕಾಲದಲ್ಲಿ ಅದು ಪರಿಪೂರ್ಣ ದೆಸೆಯನ್ನು ಮುಟ್ಟಿತು. ವೀರಶೈವ ದರ್ಶನದ ತಾತ್ವಿಕ ವಿಚಾರಗಳನ್ನು ತೋಂಟದ ಸಿದ್ಧಲಿಂಗ ಯತಿಗಳು ಬಹು ಸೂಕ್ಷ್ಮವಾಗಿ ಪ್ರತಿಪಾದನೆ ಮಾಡಿದ್ದಾರೆ. ತಾತ್ವಿಕ ಸಿದ್ಧಾಂತ ಮತ್ತು ಆಚರಣೆಯ ಮಾರ್ಗ ಈ ಎರಡೂ ದೃಷ್ಟಿಯಿಂದ ವೀರಶೈವ ಧರ್ಮವನ್ನು ಪರಿಶೀಲಿಸಿದ್ದಾರೆ.

ವೀರಶೈವ ದರ್ಶನದಲ್ಲಿ ಪರಬ್ರಹ್ಮವನ್ನು ಲಿಂಗಸ್ಥಲ, ಬಯಲು, ಸಹಜ ಮತ್ತು ಶೂನ್ಯ ಎಂಬ ಹೆಸರುಗಳಿಂದ ಕರೆದಿದ್ದು ಈ ಸೃಷ್ಟಿ ವ್ಯಕ್ತಗೊಂಡು ಅಸ್ತಿತ್ವಕ್ಕೆ ಬರುವುದಕ್ಕೆ ಮುನ್ನ ಸೃಷ್ಟಿಗೆ ಕಾರಣನಾದ ಆ ಪರಬ್ರಹ್ಮನನ್ನು ಕುರಿತು ತೋಂಟದ ಸಿದ್ಧಲಿಂಗೇಶ್ವರರು ಈ ತೆರನಾಗಿ ಹೇಳಿದ್ದಾರೆ.

"ಅಂತರವಿಲ್ಲದಂದು ಬಾಹ್ಯವಿಲ್ಲದಂದು
ಅಡಿಮುಡಿ ಒಡಲು ಮತ್ತೊಂದೆಡೆ ಏನೂ ಇಲ್ಲದಂದು
ದಶದಿಕ್ಕುಗಳು ವಿಶ್ವಪ್ರಪಂಚಗಳು ಏನೂ ಇಲ್ಲದಂದು
ಸ್ಥಾವರಾತ್ಮಕಂಗಳಿಗೆ ಆಧಾರ ಕರ್ತು ಎಂಬ ನಾಮಂಗಳೇನು
ಇಲ್ಲದಂದು

ಸರ್ವಶೂನ್ಯ ನಿರಾಲಂಬ ನಾಗಿರ್ದೆಯಲ್ಲ
ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ "

ಅಂತರಬಾಹ್ಯ, ಅಡಿಮುಡಿ, ದಶದಿಕ್ಕು ಈ ವಿಶ್ವಪ್ರಪಂಚಗಳ ಸೃಷ್ಟಿಯಾಗದಂದು ಸರ್ವಶೂನ್ಯನಾಗಿದ್ದನೆಂದು ವರ್ಣಿಸುವರಲ್ಲದೆ

"ಆದಿ ಅನಾದಿಗಳಿಲ್ಲದಂದು
ನಾದ ಬಿಂದು ಕಳೆ ಮೊಳೆದೋಜದಂದು
ದೇಹ ದೇಹಿಗಳುತ್ಪತ್ತಿಯಾಗದಂದು
ಜೀವಾತ್ಮ ಪರಮಾತ್ಮರೆಂಬವರಿಲ್ಲದಂದು
ಸಕಲ ಸಚರಾಚರಂಗಳ ಸುಳುಹಿಲ್ಲದಂದು
ಇವೇನು ಏನೂ ಇಲ್ಲದಂದು
ನೀನೂ ಶೂನ್ಯನಾಗಿದ್ದೆಯಯ್ಯಾ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ "

ಆದಿ ಅನಾದಿ ಇಲ್ಲದಂದು ಅವನು ನಾದಬಿಂದು ಕಳಾತೀತ; ಅಖಂಡ ಪರಿಪೂರ್ಣನಾಗಿ ತನ್ನ ಸ್ವಲೀಲೆಯಲ್ಲಿ ತಾನೇ ತಾನಾಗಿದ್ದ ಆ ಸ್ಥಿತಿಯಲ್ಲಿ ನಾನು ನೀನೆಂಬ ಭ್ರಾಂತಸೂತಕವಿರಲಿಲ್ಲ. ಆಗ ಜ್ಞಾನಾ ಜ್ಞಾನಗಳಿರಲಿಲ್ಲ, ರೂಪ-ನಿರೂಪ ಹುಟ್ಟಿರಲಿಲ್ಲ ಕಾಮನಿಃಕಾಮಗಳಿರಲಿಲ್ಲ, ಅಲ್ಲಿ ಅಂತರವಿರಲಿಲ್ಲ ಬಾಹ್ಯವಿರಲಿಲ್ಲ. ಅಡಿ, ಮುಡಿ, ಒಡಲು, ಮತ್ತೊಂದೆಡೆಯೇನೂ ಇರಲಿಲ್ಲ. ಸರ್ವ ಶೂನ್ಯ ಸ್ಥಿತಿ ಒಂದೇಯಾಗಿತ್ತು. ಆ ಸರ್ವಶೂನ್ಯವನ್ನು ಸಿದ್ಧಲಿಂಗೇಶ್ವರರು ನಿರಾಲಂಭವೆಂದು ಕರೆದಿರುವದು ವೈಶಿಷ್ಟ್ಯಪೂರ್ಣವಾಗಿದೆ. ಆದರೆ ಅದು ಅಶೂನ್ಯವು; ಅಸ್ತಿತ್ವ ರಹಿತವಾದ ಶೂನ್ಯವಲ್ಲ. ಅದು ಸರ್ವಾಸ್ತಿ ಸೂಚಕ. ಎಲ್ಲವನ್ನೂ ಒಳಕೊಂಡಿರುವ ಶೂನ್ಯವದು. ಈ ತೋರಿಕೆಯ ಎಲ್ಲ ಸೃಷ್ಟಿಗೂ ಕಾರಣವಾದ. ಆದರೆ ಇದೆಲ್ಲಕ್ಕು ಅತೀತವಾದ, ಸೃಷ್ಟಿಕರ್ತನ ಸೃಷ್ಟಿಪೂರ್ವದ ಸ್ವರೂಪ ಅದು. ಈ ಮೊದಲು ನೋಡಿದಂತೆ ಇದರಲ್ಲಿಯೂ ಮೂರು ಹಂತಗಳನ್ನು ಮಾಡಿ ಶೂನ್ಯ ಲಿಂಗಕ್ಕಿಂತ ಪೂರ್ವದ ಸ್ಥಿತಿಯೊಂದನ್ನು ಕಲ್ಪಿಸಿ ಅದನ್ನು ಸರ್ವಶೂನ್ಯ ನಿರಾಲಂಬ ಎಂದು ಕರೆದಿದ್ದಾರೆ. 'ಶೂನ್ಯಲಿಂಗ' ಎಂದಾಗಲೇ ಅದರಲ್ಲಿ ಸ್ವಲ್ಪ ಮಟ್ಟಿಗೆ ಸೃಷ್ಟಿಮುಖವಾದ ಸಾಕಾರಕ್ರಿಯೆ ಸೂಚಿತವಾಗುತ್ತದೆ. ಇದಕ್ಕಿಂತ ಹಿಂದಿನ ಸ್ಥಿತಿಯೊಂದನ್ನು ಸರ್ವಶೂನ್ಯ ನಿರಾಲಂಬ ಸ್ಥಿತಿ ಎಂದು ಕರೆದಿದ್ದಾರೆ. "ಆದಿ ಅನಾದಿ ಇಲ್ಲದಂದು ಶೂನ್ಯ ನಿಶ್ಶೂನ್ಯವಿಲ್ಲದಂದು ಭೇದಾಭೇದಂಗಳೇನೂ ಇಲ್ಲದಂದು ನಿಮ್ಮ ನೀವರಿಯದೆ ಇರ್ದಿರಲ್ಲಾ." ಎಂಬಂತಹ ಸರ್ವಶೂನ್ಯ ನಿರಾ

ಲಂಬ ಸ್ಥಿತಿ ಇದು. ಇಲ್ಲಿಂದ ಮುಂದಿನ ಸ್ಥಿತಿ ಎಂದರೆ ಶೂನ್ಯಲಿಂಗ; ಕೇವಲ ನಿರಾಲಂಬ ಸ್ಥಿತಿಯಿಂದ ಶೂನ್ಯದ ಅವಲಂಬನೆಗೆ ಇಳಿದಿರುವ ಸ್ಥಿತಿ. ಇಲ್ಲಿಯೂ ಆದಿ ಅನಾದಿಗಳಿಲ್ಲ. ನಾದಬಿಂದುಗಳಿಲ್ಲ ಶಿವಶಕ್ತಿಯಿಲ್ಲ, ಶಿವಶಕ್ತಿಗೆ ಕಾರಣವಾದ ಸತು ಚಿತ್ತಾನಂದ ನಿತ್ಯ ಪರಿಪೂರ್ಣನೆಂಬ ನಿಃಕಳ ಶಿವತತ್ವವೂ ಇಲ್ಲ; ಜೀವ ಪರಮಾತ್ಮರೆಂಬುವರಿಲ್ಲ, ದೇಹಿ ದೇಹಂಗಳಿಲ್ಲ ಆದರೆ ಶೂನ್ಯ ನಿರಾಲಂಬ ಇಳಿದು "ಶೂನ್ಯನಾಗಿ" ಇರ್ದ ಈ ಸ್ಥಿತಿಯನ್ನು ತೋಂಟದ ಸಿದ್ಧಲಿಂಗೇಶ್ವರರು ಅರ್ಥ ವತ್ತಾಗಿ ಹೇಳುತ್ತಾರೆ. ಈ ಎರಡೂ ಸ್ಥಿತಿಗಳಿಗಿರುವ ಅಂತರ ಬಹಳ ಸೂಕ್ಷ್ಮ ವಾದುದು. ಇಲ್ಲಿಂದ ಮುಂದಿನ ಮನಿಃಕಲಲಿಂಗ, ಇಲ್ಲಿ ಸಚ್ಚಿದಾನಂದ ಪರಬ್ರಹ್ಮ ಎಲ್ಲ ತತ್ವಗಳಿಗೂ ಆಶ್ರಯದಾತ; ಎಲ್ಲಕ್ಕೂ ಆದಿ, ಆಧಾರಭೂತ ಆದನ್ನು ಶಿವಯೋಗಿಗಳು "ಅಂಗವಾರು ಲಿಂಗವಾರು ಶಕ್ತಿಯಾರು ಇಂತಿವೆಲ್ಲವ ಗರ್ಭೀ ಕರಿಸಿಕೊಂಡು, ಸಚ್ಚಿದಾನಂದ ನಿತ್ಯ ಪರಿಪೂರ್ಣ, ನೀನಾದ ಕಾರಣ ನಿನ್ನ ನಿಃಕಲ ಶಿವತತ್ವವೆಂದೆನು ಕಾಣಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ" ಎಂದು ನಿರೂಪಿಸಿದ್ದಾರೆ. ಈ ವರ್ಣನೆಯೂ ಸೃಷ್ಟಿಪೂರ್ವದ ಸ್ಥಿತಿಯೇ ಆದರೆ ಸರ್ವಶೂನ್ಯ ನಿರಾಲಂಬದಲ್ಲಿ ಕಂಡು ಬರುವಂತೆ ಅಲ್ಲಿಂದ ನಿಃಕಲ ಲಿಂಗವಾಗಿ ಪರಿಣಮಿಸಿದೆ. ಸೃಷ್ಟಿಮುಖವಾದ ಪ್ರವೃತ್ತಿ ಮಾರ್ಗದಲ್ಲಿ ಹೆಜ್ಜೆ ಇಡುವ ವಿಕಾಸ ಕ್ರಮವನ್ನು ಇಲ್ಲಿ ಕಂಡುಕೊಳ್ಳಬಹುದು.

ಇದರ ಮುಂದಿನ ಹೆಜ್ಜೆಯೇ ಮಹಾಲಿಂಗ. ನಿಃಕಲ ಲಿಂಗದಲ್ಲಿ ಶಕ್ತಿ ಸಂಚಾರವಾಗಿ ಅದು ಓಂಕಾರಕ್ಕೆ ಕಾರಣವಾಗುತ್ತದೆ. ಆ ಪ್ರಣವ ಸ್ವರೂಪಿ ಯಾದದ್ದೇ ಮಹಾಲಿಂಗ. ತೋಂಟದ ಸಿದ್ಧಲಿಂಗೇಶ್ವರರ ಮಾತುಗಳಲ್ಲಿ ಇದನ್ನು ನೋಡಬಹುದು. "ನಿಃಕಲ ಶಿವತತ್ವದಲ್ಲಿ ಜ್ಞಾನ ಉದಯವಾಯಿತು. ಆ ಚಿತ್ತಿನಿಂದ ಅ ಕಾರ, ಉ ಕಾರ, ಮ ಕಾರಗಳೆಂಬ ಅಕ್ಷರತ್ರಯಂಗಳಾದವು ಅ ಕಾರವೇ ನಾದ, ಉ ಕಾರವೇ ಬಿಂದು, ಮ ಕಾರವೇ ಕಳೆ. ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು. ಇಂತೀ ನಾಲ್ಕು ಒಂದಾದಲ್ಲಿ ಓಂಕಾರನೆಂಬ ಪ್ರಣವ ಉತ್ಪತ್ತಿಯಾಯಿತ್ತು. ಆ ಓಂಕಾರ ಪ್ರಣವವೇ ಅಖಂಡ ಪರಿಪೂರ್ಣ ಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ." ಇಲ್ಲಿ ಮೊಟ್ಟಮೊದಲನೆಯ ಬಾರಿ ಲಿಂಗಕ್ಕೆ ಸಾಕಾರ ಸೂಚನೆ ಕಂಡು ಬರುತ್ತದೆ. ಇದಕ್ಕೆ ಹಿಂದಿನವೆಲ್ಲವೂ ನಿರಾಕಾರ ನಿಲವು. ಮಹಾಲಿಂಗವು ಮಾತ್ರ ಗೋಳಕಾಕಾರ ತೇಜೋಮೂರ್ತಿಯಾಗಿ ಪ್ರಕಾಶಿಸುತ್ತದೆ. ಪಂಚಶಕ್ತಿ, ಪಂಚಸಾದಾಖ್ಯ, ಪಂಚಕಲೆ, ಪಂಚಾಕ್ಷರ, ಪಂಚಭೂತಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡು ಮುಂದಿನ ಎಲ್ಲ ಸೃಷ್ಟಿಗೂ ಕಾರಣವಾಗುತ್ತದೆ. ಈ ಮಹಾಲಿಂಗದಲ್ಲಿ ಮೈದೋರಿದ ಸಾದಾಖ್ಯಗಳಲ್ಲಿ

ಉತ್ಪತ್ತಿಯಾದ ತತ್ವಗಳು ಆತ್ಮಗಳಿಗೆ ದೇಹವಾಗುತ್ತವೆ. ಆತ್ಮರಿಗೆ ದೇಹ ಸಂಬಂಧ ಉಂಟಾಗಲು ದೇಹ ಕರಣಂಗಳಲ್ಲಿ ಅಹಂ ಮಮತೆ ಉಂಟಾಗುತ್ತದೆ. ಈ ದೇಹ ಕರಣಂಗಳೇ ನಾನೆಂಬ ಭಾವನೆಯು ಅಜ್ಞಾನ. ಈ ಅಜ್ಞಾನದಿಂದ ಬದ್ಧನಾದ ಆತ್ಮನು ಜೀವನೆನಿಸುತ್ತಾನೆ. ಲೀಲೆಯಲ್ಲಿ ಶುದ್ಧ ಚಿದ್ರೂಪನಾದ ಪರಮಾತ್ಮನು ಸೇವ್ಯ ಸೇವಕ. ಪೂಜ್ಯ ಪೂಜಕವಾದಂತೆ ಭೋಕ್ತೃ ಭೋಜ್ಯನೂ ಆಗಿದ್ದಾನೆ. ಜೀವಾತ್ಮನೇ ಭೋಕ್ತೃವೆನಿಸುವನು. ಆತನು ಅಜ್ಞಾನದ ಮೂಲಕ ಮಲತ್ರಯಗಳಿಗೆ ಒಳಗಾಗಿರುವನು. ಆಣವ ಮಲದಿಂದ ಅಪರಿಪೂರ್ಣತ್ವ, ಕಾರ್ಮಿಕ ಮಲದಿಂದ ಕರ್ತೃತ್ವ, ಮಾಯಾಮಲದಿಂದ ಅಲ್ಪಜ್ಞತ್ವ ಪ್ರಾಪ್ತವಾಗುತ್ತವೆ. ಮಲತ್ರಯ ಬಂಧಿತನಾದ ಆತ್ಮನ ಸರ್ವ ಕರ್ತೃತ್ವ ಶಕ್ತಿ ಅತ್ಯಂತ ಸಂಕೋಚ ಸ್ಥಿತಿಯನ್ನು ಹೊಂದಿರುವುದೇ ಕಲಾತತ್ವ, ಅಲ್ಪಜ್ಞಾನ ತತ್ವದ ಸ್ಥಿತಿಯೇ ವಿದ್ಯಾತತ್ವ, ಅಪರಿಪೂರ್ಣತ್ವ ರೂಪವೇ ವಿಷಯಾಸಕ್ತಿಯನ್ನುಂಟು ಮಾಡುವ ರಾಗತತ್ವ, ಅನಿತ್ಯತ್ವ ರೂಪವೇ ಭೂತ, ಭವಿಷ್ಯ, ವರ್ತಮಾನದ ಕಲ್ಪನೆಯುಳ್ಳ ಕಾಲತತ್ವ. ಅವ್ಯಾಪಕತ್ವ ರೂಪವೇ ನಿಯಮ ಹೇತು ಭೂತವಾದ ನಿಯತಿತತ್ವ. ಇವು ಪಂಚ ಕಂಚುಕಗಳು. ಈ ಪಂಚ ಕಂಚುಕದ ಬಂಧನಕ್ಕೊಳಗಾದ ಪುರುಷನು ಕಂಚುಕಿಯು. ಪಂಚ ಕಂಚುಕಗಳು, ಇಪ್ಪತ್ತೈದು ತತ್ವಗಳು ಒಟ್ಟುಗೂಡಿ ೩೧. ಅಶುದ್ಧ ತತ್ವಗಳಾಗುತ್ತವೆ.

ಪರಶಿವ ಬ್ರಹ್ಮವು ಜ್ಞಾನಶಕ್ತಿಯಲ್ಲಿ ಬೆರೆತು ನಾನು ಸರ್ವಜ್ಞನು ಎಂಬ ಅಭಿಮಾನವನ್ನು ಪಡೆದು ಶಿವತತ್ವವೆನಿಸಿಕೊಳ್ಳುವುದು. ಈ ಶಿವತತ್ವವು ಸೃಷ್ಟಿ ನಿರ್ಮಾಣಕ್ಕೆ ಕಾರಣವಾಗುವದು ಅದೇ ಪರಶಿವಬ್ರಹ್ಮವು. ಕ್ರಿಯಾಶಕ್ತಿಯಲ್ಲಿ ಕೂಡಿ ನಾನು ಸರ್ವ ಕರ್ತೃವೆಂಬ ಅಭಿಮಾನವನ್ನು ಪಡೆದು ಶಕ್ತಿತತ್ವವೆನಿಸುವದು. ಈ ಶಕ್ತಿತತ್ವವು ಸೃಷ್ಟಿ ನಿರ್ಮಾಣಕ್ಕೆ ಉಪಾದಾನ ಕಾರಣವಾಗುವದು. ಶಕ್ತಿ ತತ್ವವು ಜ್ಞಾನಶಕ್ತಿಯೊಡನೆ ಬೆರೆತು 'ಅಹಮಿದಂ' ನಾನು ಈ ಪ್ರಪಂಚವು ಎಂಬ ಅಭಿಮಾನವನ್ನು ಪಡೆದು ಸದಾಶಿವತತ್ವವೆನಿಸುವದು. ಅದೇ ಶಕ್ತಿತತ್ವವು ಕ್ರಿಯಾಶಕ್ತಿಯಲ್ಲಿ ಬೆರೆಸಿ 'ಅಹಮಿದಂ' ಅಭಿಮಾನವನ್ನು ಪಡೆದು ಈಶ್ವರತತ್ವ ವೆನಿಸಿಕೊಳ್ಳುವದು. ಈ ಶಕ್ತಿತತ್ವವೇ ನಾನು ಎಂಬ ಅಹಂಕಾರಕ್ಕೂ, ಇದು ಎಂಬ ಪ್ರಪಂಚಕ್ಕೂ ಅಭೇದ ಜ್ಞಾನವನ್ನು ಕಲ್ಪಿಸಿಕೊಡುತ್ತದೆ. ಅಲ್ಲದೆ, ಶುದ್ಧ ವಿದ್ಯಾತತ್ವವೆನಿಸುತ್ತದೆ. ವೀರಶೈವ ಒಪ್ಪಿಕೊಂಡ ತತ್ವಗಳು ಒಟ್ಟು ಮೂವತ್ತಾರು. ಆದರೆ ಸಿದ್ಧಲಿಂಗ ಶಿವಯೋಗಿಗಳು ಸ್ಪಷ್ಟವಾಗಿ ಹೇಳುವದು ಇಪ್ಪತ್ತೈದು ತತ್ವಗಳನ್ನು ಮಾತ್ರ. ಈ ಇಪ್ಪತ್ತೈದು ತತ್ವಗಳ ವಿವರಣೆಯಲ್ಲಿ ಚೆನ್ನಬಸವೇಶ್ವರ, ಪ್ರಭುದೇವರು, ತೋಂಟದ ಸಿದ್ಧಲಿಂಗೇಶ್ವರರು ಒಂದು

ಅಭಿಪ್ರಾಯವನ್ನು ತಳೆದಿದ್ದರೆ ಮಹಾದೇವಿಯಕ್ಕ ಭಿನ್ನಾಭಿಪ್ರಾಯ ತಳೆದಿರುವರು. ವೀರಶೈವ ಧರ್ಮದ ಇಪ್ಪತ್ತೈದು ತತ್ವಗಳು ಸಂಖ್ಯಾದೃಷ್ಟಿಯಿಂದ ಸಾಂಖ್ಯಕ್ಕೆ ಹೋಲುವಂತೆ ಇದ್ದರೂ ಅವುಗಳ ನಿಷ್ಪತ್ತಿ ಹಾಗೂ ಯೋಜನೆ ಬೇರೆ ತೆರನಾಗಿದೆ ಯೆಂಬುದು ಸಿದ್ಧಲಿಂಗ ಶಿವಯೋಗಿಗಳ ವಚನದಿಂದ ಸ್ಪಷ್ಟವಾಗುತ್ತದೆ. ಸಿದ್ಧಲಿಂಗ ಶಿವಯೋಗಿಗಳು ಆತ್ಮನಿಂದ ಆಕಾಶ, ಆಕಾಶದಿಂದ ವಾಯು ಮೊದಲಾದವು ಜನಿಸಿದವೆಂದು ಹೇಳುವಲ್ಲಿ ತೈತ್ತಿರೀಯೋಪನಿಷತ್ತಿನ ಅಭಿಪ್ರಾಯ ಕಂಡುಬಂದರೂ ಆ ವಿವರಣೆಯಲ್ಲಿ ಕಂಡು ಬರುವ ಸಾದಾಖ್ಯದ ಕಲ್ಪನೆ ಉಪನಿಷತ್ತುಗಳಲ್ಲಾಗಲಿ, ಇತರ ಶೈವದರ್ಶನಗಳಲ್ಲಾಗಲೀ ಕಂಡು ಬರುವದಿಲ್ಲ. ಇಪ್ಪತ್ತೈದು ತತ್ವಗಳ ಜೊತೆಗೆ ಮತ್ತೆ ಹನ್ನೊಂದು ತತ್ವಗಳನ್ನು ಅಂಗೀಕರಿಸಿ ವೀರಶೈವವು ಮೂವತ್ತಾರು ತತ್ವಗಳನ್ನು ಒಪ್ಪಿವೆ. ಪರಶಿವತತ್ವದಿಂದ ಸೃಷ್ಟಿನಿರ್ಮಾಣವಾದ ಲೀಲೆಯನ್ನು ಸಿದ್ಧಲಿಂಗ ಶಿವಯೋಗಿಗಳು ಇನ್ನೊಂದು ಬಗೆಯಿಂದ ಹೀಗೆ ವರ್ಣಿಸಿರುವರು :

> "ಮಹಾಲಿಂಗ ಮಧ್ಯದಲ್ಲಿ ಪಂಚಮುಖ, ದಶಭುಜ ದಶ-ಪಂಚನೇತ್ರಗಳಿಂದ ಒಪ್ಪುತ್ತಿರುವ ಸದಾಶಿವಮೂರ್ತಿ ಉದಯವಾದನು. ಆತನ ಈಶಾನ್ಯ ಮುಖದಲ್ಲಿ ಆಕಾಶ,ತತ್ಪುರುಷ ಮುಖದಲ್ಲಿ ವಾಯು, ಅಘೋರ ಮುಖದಲ್ಲಿ ಅಗ್ನಿ, ವಾಮದೇವನ ಮುಖದಲ್ಲಿ ಅಪ್ಪು, ಮನಸ್ಸಿನಲ್ಲಿ ಚಂದ್ರ, ಚಕ್ಷುವಿನಲ್ಲಿ ಸೂರ್ಯ, ಗೌಪ್ಯ ಮುಖದಲ್ಲಿ ಆತ್ಮ ಜನಿಸಿದವು. ಈ ಅಷ್ಟಮೂರ್ತಿಯಿಂದ ಸಮಸ್ತ ಜಗತ್ತಾಯಿತು. ಆ ಜಗತ್ತುಗಳು, ಚತುರ್ದಶ ಭುವನಗಳು, ಸಪ್ತ ಸಮುದ್ರಗಳು, ಸಪ್ತ ದ್ವೀಪಗಳು, ಸಪ್ತ ಕುಲಪರ್ವತಗಳು, ಸಪ್ತ ಗ್ರಹರಾಶಿ, ತಾರಾಪಥಗಳು, ಇವೆಲ್ಲವನು ಗರ್ಭೀಕರಿಸಿಕೊಂಡುದೇ ಬ್ರಹ್ಮಾಂಡ."

ಇದು ಜಗತ್ತಿನ ವೈವಿಧ್ಯದ ಕಲ್ಪನೆ.

ಆ ಪರಬ್ರಹ್ಮನಲ್ಲಿ ಹುದುಗಿರುವ ಈ ಸೃಷ್ಟಿಯನ್ನು ವೀರಶೈವರು ಮಯೂರದ ಅಂಡಕ್ಕೆ ಹೋಲಿಸಿದ್ದಾರೆ. ಮಯೂರದ ಅಂಡದಲ್ಲಿ ಮುಂದಾಗಲಿರುವ ಮಯೂರದ ಬಣ್ಣ, ರೂಪ, ಆಕಾರ ಎಲ್ಲವೂ ಯಾವರೀತಿ ಸುಪ್ತವಾಗಿರುವದೋ ಅದರಂತೆ ಆ ಪರಬ್ರಹ್ಮನಲ್ಲಿ ಈ ಸೃಷ್ಟಿಯು ಸೂಪ್ತವಾಗಿರುವದು. ಆ ಪರಬಹ್ಮವು ತನಗೆ ಬೇಕಾದಡೆ ಸೃಷ್ಟಿಯನ್ನು ನಿರ್ಮಾಣಮಾಡುವನು ಸಾಕಾದಡೆ ತನ್ನಲ್ಲಿ ಅಡಗಿಸಿಕೊಳ್ಳುವನು. ವೀರಶೈವವು ತನ್ನ ಸಿದ್ಧಾಂತವನ್ನು ಈ ಅವಿಕೃತ ಪರಿಣಾಮವಾದದ ಆಧಾರದಿಂದ ಸ್ಪಷ್ಟಪಡಿಸಿತು.

ವೀರಶೈವ ಸಿದ್ಧಾಂತವನ್ನು ಭೇದಾಭೇದ ದ್ವೈತಾದ್ವೈತ ಎಂದು ಕರೆದಿರುವದುಂಟು. ಆದರೆ ಸಿದ್ಧಲಿಂಗ ಶಿವಯೋಗಿಗಳು ಅದನ್ನು ಒಪ್ಪಿಕೊಳ್ಳದೆ ಶಿವಾದ್ವೈತವೆಂದೇ ಪ್ರತಿಪಾದಿಸಿದ್ದಾರೆ ಎಂಬುದನ್ನು ಕೆಳಗಿನ ಮಾತಿನಲ್ಲಿ ನೋಡಬಹುದು :

'ಈ ಷಟ್‌ಸ್ಥಲ ಮಾರ್ಗವು ದ್ವೈತಾ ದ್ವೈತದ ಪರಿವರ್ತನೆಯಲ್ಲ;
ಅದೇನು ಕಾರಣವೆಂದಡೆ,
ಇದು ಶಿವಾದ್ವೈತ ಮಾರ್ಗವಾದ ಕಾರಣ'
'ಈ ಷಡುಸ್ಥಲ ಮಾರ್ಗವನು ದ್ವೈತಾದ್ವೈತದೊಳಗೆ
ಕೂಡಲಿಕ್ಕೆ ನುಡಿಯಲಾಗದು'

ವೀರಶೈವ ಸಿದ್ಧಾಂತವನ್ನು ಸಿದ್ಧಲಿಂಗ ಶಿವಯೋಗಿಗಳು ಶಿವಾದ್ವೈತವೆಂದು ಕರೆದುದು ಔಚಿತ್ಯಪೂರ್ಣವಾಗಿದೆ. ಅನುಭಾವಮಾರ್ಗ ಪ್ರಧಾನವಾದ ಈ ಸಿದ್ಧಾಂತವನ್ನು ದ್ವೈತಾ ದ್ವೈತಗಳ ಸಾಲಿನಲ್ಲಿ ನಿಲ್ಲಿಸಕೂಡದೆಂಬುದೇ ಶಿವಯೋಗಿಗಳಮತ.

ಈ ಶಿವಾದ್ವೈತವೇ ಲಿಂಗಾಂಗ ಸಾಮರಸ್ಯ, ಪರಬ್ರಹ್ಮವು ಲಿಂಗನೆಂದೂ ಅಂಗವೆಂದೂ ಎರಡಿತ್ತು. ಅಂಗವೇ ಜೀವಾತ್ಮ, ಲಿಂಗವೇ ಪರಮಾತ್ಮ, ಲಿಂಗಗತವಾದ ಶಕ್ತಿ ಅಂಗದಲ್ಲಿ ಭಕ್ತಿಯಾಗಿ ನೆಲೆ ನಿಂತಿತು. ಈ ಶಕ್ತಿ ಭಕ್ತಿಗಳ ಸಾಮರಸ್ಯ ಹೊಂದುವುದೇ ಲಿಂಗಾಂಗ ಸಾಮರಸ್ಯ. ಈ ಲಿಂಗಾಂಗ ಸಾಮರಸ್ಯಕ್ಕೆ ಷಟ್‌ಸ್ಥಲವೇ ಆಧಾರ. ವೀರಶೈವ ಮುಕ್ತಿಯ ಸೋಪಾನಕ್ಕೆ ಷಟ್‌ಸ್ಥಲವೇ ಮಾರ್ಗವಾಗಿ ಪರಿಣಮಿಸಿದೆ. ಶುದ್ಧಾತ್ಮನಾದ ಅಂಗನಲ್ಲಿ ಪರಮಾತ್ಮನ ಶಕ್ತಿಯೇ ಭಕ್ತಿ ಭಾವದಲ್ಲಿರುವದು. ಅಂಗನು ಲಿಂಗ ಮುಖಕ್ಕೆ ಅರ್ಪಣ ಮಾಡುವುದೇ ಭಕ್ತಿ. ಆ ಭಕ್ತಿ ಎಂಬುದು ಎರಡಿಲ್ಲದ ಕೂಟ.

ಮೊದಲಲ್ಲಿ ನಿಃಕಲ ಪರಶಿವನಲ್ಲಿ ಲಿಂಗಸ್ಥಲ, ಅಂಗಸ್ಥಲ, ಎಂದು ಎರಡು ತೆರನಾಗುವದು. ಲಿಂಗಸ್ಥಲದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಮೂರು ತೆರನಾಗಿ ಒಂದೊಂದು ಲಿಂಗ ಎರಡಾಗಿ ಆರಾಗಿ ಪರಿಣಮಿಸುತ್ತವೆ. ಅದರಂತೆ ಅಂಗಸ್ಥಲದಲ್ಲಿ ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಮೂರು ಪ್ರಕಾರವಾಗಿ ಆ ಮೂರು ಅಂಗಗಳು ಒಂದೊಂದು ಎರಡಾಗಿ ಪರಿಣಮಿಸುತ್ತವೆ. ಹೀಗೆ ಷಡಂಗಗಳು ಷಡ್ಲಿಂಗಗಳು ಆಗುವ ಬಗೆಯನ್ನು ತೋಂಟದ ಸಿದ್ಧಲಿಂಗೇಶ್ವರರು ಹೀಗೆ ನಿರೂಪಿಸಿರುವರು :

"ಇನ್ನು ಒಂದು ಅಂಗ ಮೂಱು ತೆರನಾಯಿತು
ಅದು ಹೇಗೆಂದಡೆ;
ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು
ಮೂರು ಪ್ರಕಾರವಾಯಿತು;
ಈ ತ್ರಯಾಂಗ ಒಂದೊಂದು ಎರಡೆರಡಾಗಿ
ಆಱು ತೆರನಾಯಿತ್ತು; ಹೇಗೆಂದಡೆ
ಯೋಗಾಂಗವೇ ಐಕ್ಯನೆಂದು ಶರಣನೆಂದು
ಎರಡು ತೆಱನಾಯಿತು.
ಭೋಗಾಂಗವೇ ಪ್ರಾಣಲಿಂಗಿ ಪ್ರಸಾದಿಯೆಂದು
ಎರಡು ತೆಱನಾಯಿತು.
ತ್ಯಾಗಾಂಗವೇ ಮಾಹೇಶ್ವರನೆಂದು ಭಕ್ತನೆಂದು
ಎರಡು ತೆಱನಾಯಿತು.
ಹೀಗೆ ಒಬ್ಬ ಶರಣನು ಆಱು ತೆರನಾದನು"

ಇದು ಅಂಗ ಷಟ್‌ಸ್ಥಲ. ಈ ಅಂಗಷಟ್‌ಸ್ಥಲದಿಂದ ಪೂಜೆಗೊಳ್ಳಲು ಲಿಂಗ ಷಟ್‌ಸ್ಥಲವಾಯಿತು. ಅದು ಹೇಗೆಂದಡೆ:

"ಭಾವಲಿಂಗವೆಂದು, ಪ್ರಾಣಲಿಂಗವೆಂದು, ಇಷ್ಟಲಿಂಗವೆಂದು
ಮೂಱು ತೆಱನಾಯಿತು.
ಆ ಭಾವಲಿಂಗ ಪ್ರಾಣಲಿಂಗ ಇಷ್ಟಲಿಂಗವೆಂಬ ಲಿಂಗ ತ್ರಯವು
ಒಂದೊಂದು ಲಿಂಗವೆರಡೆರಡಾಗಿ ಆಱು ತೆಱನಾಯಿತು.
ಅದು ಹೇಗೆಂದಡೆ :
ಭಾವಲಿಂಗವು ಮಹಾಲಿಂಗವೆಂದೂ ಪ್ರಸಾದಲಿಂಗವೆಂದೂ
ಎರಡು ತೆಱನಾಯಿತು.
ಪ್ರಾಣಲಿಂಗವು ಜಂಗಮ ಲಿಂಗವೆಂದೂ ಶಿವಲಿಂಗವೆಂದೂ
ಎರಡು ತೆರನಾಯಿತು.
ಇಷ್ಟಲಿಂಗವು ಗುರುಲಿಂಗವೆಂದೂ ಆಚಾರಲಿಂಗವೆಂದೂ
ಎರಡು ತೆಱನಾಯಿತು.
ಹೀಗೊಬ್ಬ ಶಿವನು ಆಱು ತೆಱನಾದನು"

ಈ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮಹಾಲಿಂಗ. ಆರು ಲಿಂಗಗಳು ಕ್ರಮವಾಗಿ ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ, ಚಿತ್‌ಶಕ್ತಿ, ಈ ಆರು ಶಕ್ತಿಗಳನ್ನು ಆಶ್ರಯಿಸುತ್ತವೆ. ಇದರಂತೆ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯ ಸ್ಥಲಗಳು ಕ್ರಮವಾಗಿ ಶ್ರದ್ಧಾ ಭಕ್ತಿ ನೈಷ್ಠಿಕಭಕ್ತಿ, ಅವಧಾನ ಭಕ್ತಿ, ಅನುಭಾವ ಭಕ್ತಿ, ಆನಂದ ಭಕ್ತಿ, ಸಮರಸ ಭಕ್ತಿಗಳನ್ನು ಆಶ್ರಯಿಸುತ್ತವೆ.

ಇನ್ನು ಮೂವತ್ತಾರು ಸ್ಥಲಗಳ ವಿಭಾಗ ಕ್ರಮವನ್ನು ವೀರಶೈವ ದಾರ್ಶನಿಕರು ಪ್ರತಿಪಾದಿಸಿದ್ದಾರೆ. ಇದರ ಹಿಂದಿರುವ ತತ್ವ ಗಮನಾರ್ಹವಾದುದು. ಭಕ್ತ ಸ್ಥಲದಿಂದ ಮಹೇಶ್ವರ ಸ್ಥಲಕ್ಕೆ ಮತ್ತು ಅಲ್ಲಿಂದ ಮುಂದೆ ಇತರ ಸ್ಥಳಗಳಿಗೆ ಸಾಧಕ ಮುನ್ನಡೆಯುತ್ತಿರುವಾಗ ಗೆರೆ ಕೊರೆದಂತೆ ಅದನ್ನು ವಿಭಜಿಸಿ ಆತನನ್ನು ಯಾವದೇ ಒಂದು ಸ್ಥಲಕ್ಕೆ ಸೀಮಿತಗೊಳಿಸದೇ ಭಕ್ತಸ್ಥಲದಲ್ಲಿರುವಾಗಲೇ ಉಳಿದ ಐದು ಸ್ಥಲದ ಅಂಶಗಳು ಗೋಚರವಾಗಬಹುದು. ಇದರಂತೆ ಉಳಿದ ಐದು ಸ್ಥಲಗಳಲ್ಲಿಯೂ ಅಂಶಗಳು ಹೀಗೆಯೇ ಗೋಚರವಾಗಬಹುದು. ಅಂತೆಯೆ ಈ ತಾತ್ವಿಕ ದೃಷ್ಟಿಯಿಂದ ಆರು ಸ್ಥಲಗಳಲ್ಲಿ ಒಂದೊಂದನ್ನು ಮತ್ತೆ ಆರು ಸ್ಥಲಗಳನ್ನಾಗಿ ವಿಭಾಗಿಸುವ ಕ್ರಮವನ್ನು ಶಿವಯೋಗಿಗಳು ಪ್ರತಿಪಾದಿಸಿದ್ದಾರೆ. ಆ ವಿಭಾಗ ಕ್ರಮ ಈ ತೆರನಾಗಿದೆ.

೧. ಭಕ್ತಸ್ಥಲದಲ್ಲಿ: ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ, ಭಕ್ತನ ಐಕ್ಯ.

೨. ಮಹೇಶ ಸ್ಥಲದಲ್ಲಿ: ಮಹೇಶನ ಮಹೇಶ, ಮಹೇಶನ ಭಕ್ತ, ಮಹೇಶನ ಪ್ರಸಾದಿ, ಮಹೇಶನ ಪ್ರಾಣಲಿಂಗಿ, ಮಹೇಶನ ಶರಣ, ಮಹೇಶನ ಐಕ್ಯ.

೩. ಪ್ರಸಾದಿಯ ಸ್ಥಲದಲ್ಲಿ: ಪ್ರಸಾದಿಯ ಪ್ರಸಾದಿ, ಪ್ರಸಾದಿಯ ಭಕ್ತ, ಪ್ರಸಾದಿಯ ಮಹೇಶ, ಪ್ರಸಾದಿಯ ಪ್ರಾಣಲಿಂಗಿ, ಪ್ರಸಾದಿಯ ಶರಣ, ಪ್ರಸಾದಿಯ ಐಕ್ಯ.

೪. ಪ್ರಾಣಲಿಂಗ ಸ್ಥಲದಲ್ಲಿ: ಪ್ರಾಣಲಿಂಗಿಯ ಪ್ರಾಣಲಿಂಗಿ, ಪ್ರಾಣ ಲಿಂಗಿಯ ಭಕ್ತ, ಪ್ರಾಣಲಿಂಗಿಯ ಮಹೇಶ, ಪ್ರಾಣಲಿಂಗಿಯ ಪ್ರಸಾದಿ, ಪ್ರಾಣಲಿಂಗಿಯ ಶರಣ, ಪ್ರಾಣಲಿಂಗಿಯ ಐಕ್ಯ.

೫. ಶರಣಸ್ಥಲದಲ್ಲಿ: ಶರಣನ ಶರಣ, ಶರಣನ ಭಕ್ತ, ಶರಣನ ಮಹೇಶ, ಶರಣನ ಪ್ರಸಾದಿ, ಶರಣನ ಪ್ರಾಣಲಿಂಗಿ, ಶರಣನ ಐಕ್ಯ.

೬. ಐಕ್ಯ ಸ್ಥಲದಲ್ಲಿ : ಐಕ್ಯನಐಕ್ಯ, ಐಕ್ಯನ ಭಕ್ತ, ಐಕ್ಯನ ಮಹೇಶ; ಐಕ್ಯನ ಪ್ರಸಾದಿ, ಐಕ್ಯನ ಪ್ರಾಣಲಿಂಗಿ, ಐಕ್ಯನ ಶರಣ.

ಹೀಗೆ ಒಟ್ಟು ಮೂವತ್ತಾರು ಸ್ಥಲಗಳಾಗುತ್ತವೆ. ಇದೇ ಕ್ರಮವನ್ನು ಇನ್ನೂ ಮುಂದುವರಿಸಿ ಒಂದೊಂದರಲ್ಲಿಯೂ ಮತ್ತೆ ಆರು ಭಾಗಗಳನ್ನು ಮಾಡುವ ಪ್ರಯತ್ನವು ಕಂಡು ಬರುತ್ತದೆ. ಮೂವತ್ತಾರು ಸ್ಥಲಗಳ ನಿರೂಪಣೆಯನ್ನು ಸಿದ್ಧಲಿಂಗ ಶಿವಯೋಗಿಗಳು ಸೂಕ್ಷ್ಮವಾಗಿ ನಿರೂಪಿಸಿದ್ದಾರೆ. ಇಲ್ಲಿ ಮೂವತ್ತಾರು ಸ್ಥಲದ ನಿರೂಪಣೆಗೆ ಹೋಗದೆ ಕೇವಲ ಆರು ಸ್ಥಲದ ನಿರೂಪಣೆ ಮಾಡಲಾಗಿದೆ.

ಭಕ್ತಸ್ಥಲ ಆರಂಭವಾಗುವದು ಪಿಂಡಸ್ಥಲದಲ್ಲಿಯೇ. ತನ್ನ ನಿಜವನ್ನು ಮರೆತು ಅಜ್ಞಾನದಲ್ಲಿಬಿದ್ದು ತೊಳಲಾಡುತ್ತಿರುವ ಜೀವಿಗೆ ಪೂರ್ವ ಸುಕೃತದಿಂದ ನಿಜದತ್ತ ದೃಷ್ಟಿ ಹರಿಯುತ್ತದೆ. ಆ ಸುಕೃತ ನಿಮಿಷವೇ ಪಿಂಡೋದಯದ ಮಂಗಲ ಮುಹೂರ್ತ. ಪಾಪ ಸಮೂಹವನ್ನು ಕಳೆದುಕೊಂಡು ಶುದ್ಧಾಂತಃಕರಣನಾದವನು ಪಿಂಡಸ್ಥಲಕ್ಕೆ ಯೋಗ್ಯನಾಗುತ್ತಾನೆ. ಆಗತಾನೇ ಊರ್ಧ್ವಗತಿಯತ್ತ ಅವನು ಮನಸ್ಸು ತಳೆಯುತ್ತಾನೆ. ತನ್ನ ನಿಜಸ್ವರೂಪವನ್ನು ತಿಳಿಯಬೇಕೆಂಬ ಆಕಾಂಕ್ಷೆ ಹುಟ್ಟುತ್ತದೆ. ಈ ಪಿಂಡಸ್ಥಲವನ್ನು ಸಿದ್ಧಲಿಂಗ ಶಿವಯೋಗಿಗಳು ಹೀಗೆ ವರ್ಣಿಸಿರುವರು :

"ದೇಹದ ಮರೆಗೊಂಡಿಪ್ಪ ಆತ್ಮನಂತೆ
ಶಕ್ತಿಯ ಮರೆಗೊಂಡಿಪ್ಪ ಶಿವನಂತೆ
ಕ್ಷೀರವ ಮರೆಗೊಂಡಿಪ್ಪ ತುಪ್ಪದಂತೆ
ವಾಚ್ಯವ ಮರೆಗೊಂಡಿಪ್ಪ ಅನಿರ್ವಾಚ್ಯದಂತೆ"

ಎಂದು ಮುಂತಾಗಿ ವಿವರಿಸಿದ್ದಾರೆ. ನಿಜದತ್ತ ದೃಷ್ಟಿ ಹರಿದ ಜೀವಿಯು ಅಂಗನಾಗಿ ಪರಿಣಮಿಸಿ ತನ್ನ ಸ್ವ ಸ್ವರೂಪದತ್ತ ದೃಷ್ಟಿ ಹರಿಸುವನು. "ಸ್ಫಟಿಕದ ಘಟದೊಳಗೆತ್ತಿದ ಜ್ಯೋತಿ ಒಳಹೊಱಗೊಂದೇ ಸ್ವಯವಾಗಿ ಪ್ರಜ್ವಲಿಸುವಂತೆ ಎನ್ನೊಳಗಿಪ್ಪಾತನನೂ ಹೊಱಗಿಪ್ಪಾತನನೂ ಒಂದೇ ವಸ್ತು" ಎಂದು ಆ ಪಿಂಡದಲ್ಲಿ ಜ್ಞಾನೋದಯವಾಗುವಲ್ಲಿ ಮೂಲ ಸಂಬಂಧದ ಅರಿವಾಗುವದು. ತಾನು ಶಿವ ಸ್ವರೂಪ ಎಂಬ ಭಾವನೆ ಉಂಟಾಗುತ್ತದೆ. ತನ್ನ ಸ್ವರೂಪವನ್ನು ತತ್ತ್ವತಃ ತಿಳಿದ ಭಕ್ತ ಆದರಿಂದ ವಿಸ್ಮೃತಿಗೊಂಡು ತನ್ನ ಇಂದಿನ ಪರಿಮಿತ ಶಕ್ತಿಯನ್ನು ಪರಿಭಾವಿಸುತ್ತಾನೆ. ತನ್ನ ಮರೆವೆಗೆ ಕಾರಣವಾದ ಸಂಸಾರದ ವಿಚಾರದಲ್ಲಿ ಜಿಹಾಸೆ ಸಹಜವಾಗಿಯೇ ಉಂಟಾಗುತ್ತದೆ. ಅದೇ ಸಂಸಾರ ಹೇಯಸ್ಥಲ.

ಸಂಸಾರ ಹೇಯಸ್ಥಲದ ನಿರೂಪಣೆಯನ್ನು ಶಿವಯೋಗಿಗಳು ಬಹಳ ಪರಿಣಾಮ ಕಾರಿಯಾಗಿ ಮಾಡಿದ್ದಾರೆ :

"ಶಶಿಮುಖಿಯರ ಸಂಗಕ್ಕೆ ಏಣಿಸುವ ಪಶುಪ್ರಾಣಿಗಳು
ಪಶುಪತಿಯ ಸಂಗಸುಖಕ್ಕೆ ಯಾಕೆ ಎಣಿಸಲೊಲ್ಲರಯ್ಯಾ
ಶಿವ ಶಿವಾ ! ನೀ ಮಾಡಿದ ವಿಸ್ಮಯದ ವಿಧಿ
ಈರೇಳು ಲೋಕವನಂಡಲೆವುತ್ತಿದೆ ನೋಡಾ"

ಶಿವನೇ ರಚಿಸಿದ ವಿಷಯಂಗಳು ಲೋಕವನ್ನೇ ತಮ್ಮ ಒಡಲಲ್ಲಿ 'ತುಂಬಿಕೊಂಡು ಉಂಡು ಅಲೆಯುತ್ತಿವೆ. ಆದರಂತೆಯೇ ನಿನ್ನ ಸಂಗ ಸುಖಕ್ಕೆ ಯಾಕೆ ಹಾತೊರೆಯಲೊಲ್ಲರಯ್ಯಾ ? ಎಂದು ಕೇಳುವರು ಶಿವಯೋಗಿಗಳು.

ಇನ್ನೊಂದು ವಚನದಲ್ಲಿ–

"ಊರೊಳಗೆ ಉದಕ ತುಂಬಿ ಬಾಗಿಲೆಲ್ಲಾ ಕೆಸರಾದವು ನೋಡಾ.
ಮನೆಯೊಳಗೆ ಕಸಹೆಚ್ಚಿ, ಶಶಿಯ ನೆಳಲೀಯದು ನೋಡಿರೆ.
ಊರೊಳಗಣ ಉದಕವ ಹೊರಡಿಸಿ
ಬಾಗಿಲೊಳಗಣ ಕೆಸರ ಸುಟ್ಟು,
ಮನೆಯೊಳಗಣ ಕಸವ ತೆಗೆದು
ಶಶಿಯ ಸಲಹಿಕೊಂಬುದು ನೀನೊಲಿದು ಕರುಣಿಸಯ್ಯಾ
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ"

ಎನ್ನುವಲ್ಲಿ ಬಸವಣ್ಣನವರ "ಮನೆಯಲ್ಲಿ ಮನೆಯೊಡೆಯ ಇದ್ದಾನೋ ಇಲ್ಲವೋ" ಎಂಬ ವಚನದ ನೆನಪು ಬರುತ್ತದೆ. ಎಲೆ ಮರುಳೇ ವಿಷಯದ ಆಗರವಾದ ಈ ದೇಹವನ್ನು ಸ್ವಚ್ಛಮಾಡಿ ಆ ಶಿವನಿಗೆ ಇಂಬುಮಾಡು ಎಂದು ಹೇಳಿದ್ದಾರೆ ಶಿವಯೋಗಿಗಳು. ಸಂಸಾರಹೇಯ ಭಾವನೆಯನ್ನು ಅವರು ಅತೀ ಪರಿಣಾಮಕಾರಿ ಯಾಗಿ ಮಾಡಿದ್ದಾರೆ.

"ಭವತಿಮಿರವೆಂಬ ಅಜ್ಞಾನದಿಂದ ಮುಸುಕಿಕೊಂಡು ಕಾಣಬಾರದೆಯಿದ್ದ ಕಣ್ಣಿಂಗೆ ಜ್ಞಾನವೆಂಬ ಅಂಜನವನಚ್ಚು ಶಿವಪಥವಿದೆಂದು" ತೋರುವನು ಸದ್ಗುರು. ಸಂಸಾರ ಹೇಯಭಾವನೆ ತೀಕ್ಷ್ಣವಾದಾತ್ಮನಿಗೆ ಗುರು ಕಾರುಣ್ಯ ಫಲಿಸುತ್ತದೆ. ಅಂಥ ಗುರುವು ಯೋಗ್ಯನಾಗಿರಬೇಕು. ಮತ್ತು ಶಿಷ್ಯನೂ ಯೋಗ್ಯನಾಗಿರಬೇಕು, ಎಂಬುದು ಶರಣರ ಅಭಿಪ್ರಾಯ. ವೀರಶೈವ ಧರ್ಮದಲ್ಲಿ

ದೀಕ್ಷಾ ವಿಧಾನವು ಬಹಳ ಮಹತ್ವವನ್ನು ಪಡೆದಿದೆ. ಅದನ್ನು ಶಿವಯೋಗಿಗಳು ಹೀಗೆ ವಿವರಿಸುತ್ತಾರೆ.

"ಶ್ರೀಗುರು ಶಿಷ್ಯನ ಮಸ್ತಕದಲ್ಲಿ ತನ್ನ ಹಸ್ತಕಮಲವನಿರಿಸಿ
ಲಿಂಗಕಳೆಯ ಪ್ರತಿಷ್ಠೆಯ ಮಾಡಿದನಾ

ಆಗುರುವಿನ ಹಸ್ತದಿಂದ ಆ ಕಳೆ ಹುಟ್ಟಿ,
ಅವೇ ಕರಸ್ಥಲಕ್ಕೆ ಇಷ್ಟಲಿಂಗವಾಯಿತ್ತು;

ಭಾವ ಭರಿತ ಭಾವಲಿಂಗವಾಯಿತು;
.... .... .... ...."

ಎಂದು ಸಿದ್ಧಲಿಂಗ ಶಿವಯೋಗಿಗಳು ಸಂಕ್ಷಿಪ್ತವಾಗಿ ವಿವರಿಸಿರುವರು. ಬ್ರಹ್ಮ ರಂಧ್ರದಲ್ಲಿಟ್ಟ ಪರಮ ಚಿತ್ಕಳೆಯನ್ನು ಗುರುವು ಭಾವ, ಮನ, ಕರದಲ್ಲಿ ತಂದು ಇಂಬು ಮಾಡುವನು, ಈ ದೀಕ್ಷೆ ಮೂರು ತೆರನಾಗಿರುವದು. ವೇದಾದೀಕ್ಷೆ, ಕ್ರೀಯಾದೀಕ್ಷೆ, ಮಂತ್ರದೀಕ್ಷೆ ಗುರುವಿನಿಂದ ಉಪದೇಶ ಪಡೆದ ಶಿಷ್ಯನು ಮುನ್ನಿನ ತಂದೆ-ತಾಯಿಗಳನ್ನು ನೆನೆಯುವದಿಲ್ಲ. ಅವನಿಗೆ ಗುರುವೇ ತಂದೆ-ತಾಯಿ ಬಂಧುಬಳಗ. ಶಿವಯೋಗ ಸಾಧನೆಗೆ ಈ ಗುರುಕೊಟ್ಟ ಇಷ್ಟಲಿಂಗವೇ ಕಾರಣ ವಾಗುವದು. ಆ ಶಿಷ್ಯನು ಸಾಕಾರವಿಡಿದು ತನ್ನ ಚಿತ್ಕಳೆಯಾದ ಇಷ್ಟಲಿಂಗವನ್ನು ಪೂಜಿಸಿ ಪ್ರಾಣಲಿಂಗ ಭಾವಲಿಂಗ ಹಂತಕ್ಕೆ ಏರುವನು. ಅಲ್ಲಿ ಗುರು ಶಿಷ್ಯ ಸಂಬಂಧವಡಗಿ ತಾನೇ ಗುರು, ತಾನೇ ಶಿಷ್ಯ, ತಾನೇ ಲಿಂಗಜಂಗಮವಾಗಿ ಪರಿಣಮಿಸುತ್ತಾನೆ. ಒಟ್ಟಿನಲ್ಲಿ ಷಟ್‌ಸ್ಥಲ ಮಾರ್ಗದಲ್ಲಿ ದೀಕ್ಷಾವಿಧಾನ ಬಹಳ ಮಹತ್ವದ್ದು. ಇನ್ನು ಈ ಭಕ್ತಸ್ಥಲದಲ್ಲಿಯೇ ಅಷ್ಟಾವರಣ ಕಲ್ಪನೆಯೂ ಬರುತ್ತದೆ. ಈ ಸ್ಥಲದಲ್ಲಿ ಆಚಾರವೇ ಮುಖ್ಯ. ಶ್ರದ್ಧೆ ಬಲಿತು ಅದರ ಪರಿಣಾಮವಾಗಿ ಭಕ್ತಸ್ಥಲಯುಕ್ತನಾದ ಸಾಧಕನು ಪೃಥ್ವಂಗದಲ್ಲಿ ನಿಂದು ಕ್ರಿಯಾಶಕ್ತಿಯುಕ್ತ ನಾದನು. ಆಚಾರ ಲಿಂಗವನ್ನು ಶ್ರದ್ಧಾಭಕ್ತಿಯಿಂದ ಅರ್ಚಿಸುವನು. ಚಿತ್ತ ಸುಚಿತ್ತವಾಗಿ, ಸುಚಿತ್ತವೇ ಹಸ್ತವಾಗಿ ಪೃಥ್ವಿಗುಣವಾದ ಗಂಧ ದಾರ್ಥವನ್ನು ಗ್ರಹಿಸಿ ಪ್ರಾಣೇಂದ್ರಿಯದ ಮುಖದಲ್ಲಿ ಆಚಾರಲಿಂಗಕ್ಕೆ ಅರ್ಪಿಸುವನು.

ಶ್ರದ್ಧಾಭಕ್ತಿಯನ್ನು ಆಚರಿಸಿದ ಸದ್ಭಕ್ತನಿಗೆ ತನ್ನ ಪ್ರಸಾದ ಫಲವಾಗಿ ಆ ಶ್ರದ್ಧಾಭಕ್ತಿಯಲ್ಲಿ ಕೃತ ನಿಶ್ಚಿಯ ನೆಲೆಗೊಂಡ ಮಹೇಶ ಸ್ಥಲದಲ್ಲಿ ನಿ ಯಾಗುತ್ತದೆ. ಇಲ್ಲಿ ಗುರುವು ಕರುಣಿಸಿ ಕರಸ್ಥಲಕ್ಕೆ ತಂದುಕೊಟ್ಟ ಚಿತ್‌ಕಳೆ ಲಿಂಗವು ಕಣ್ಣಮುಂದೆ ಬೆಳಗುತ್ತಿರಲು ಬೇರೆ ತಿಥಿ, ವಾರ, ಕರ್ಮಸೂತ್ರ ತೀರ್ಥಯಾತ್ರೆಗೆ ಇಲ್ಲಿ ಇಂಬಿಲ್ಲ. ಶಿಚ್ಚಳ ಪತಿವ್ರತೆಗೆ ದೇವನೊಬ್ಬ ಪತಿದೇವ

ವ್ರತ ಒಂದು ಪತಿವ್ರತ. ಪತಿಯೇ ಕುಲ, ಪತಿಯೇ ಜಾತಿ, ಪತಿಯೇ ತೀರ್ಥಕ್ಷೇತ್ರ, ಆತನೇ ಭಾಗ್ಯ ಸಂಪತ್ತು. ಇಂಥ ಮಹಾಸತಿಯ ಪರಿಶುದ್ಧಪ್ರೇಮ ತನ್ನ ನಾಥನಲ್ಲಿಯೇ ನಿಷ್ಠನಾಗಿರುವಂತೆ ಸದ್‌ಭಕ್ತನ ಭಕ್ತಿ ಲಿಂಗೈಕ ನಿಷ್ಠವಾಗಿದೆ. ಅಸತ್ಯ, ಅನೀತಿ, ಪರಧನ, ಪರಸ್ತ್ರೀ, ಪರಹಿಂಸೆ, ಪರಲೋಕ, ಪರದೈವ ಇವೆಲ್ಲವೂ ತಾಜ್ಯವಾಗುತ್ತವೆ. ಮಹೇಶ್ವರನ ಲಕ್ಷಣವನ್ನು ಶಿವಯೋಗಿಗಳು ಹೀಗೆ ಹೇಳಿರುವರು.

"ಜಲವೆ ಅಂಗವಾದ ಮಾಹೇಶ್ವರನಲ್ಲಿ
ಪ್ರಸಾದಿ ಪ್ರಾಣಲಿಂಗ ಶರಣ ಐಕ್ಯ ಭಕ್ತನಪ್ಪ
ಅಂಗಪಂಚಕವು ಗರ್ಭೀಕೃತವಾಗಿ
ಆ ಮಹೇಶ್ವರಂಗೆ ಗುರುಲಿಂಗಸಂಬಂಧವಾಗಿ
ಆ ಗುರುಲಿಂಗದಲ್ಲಿಯೆ
ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ 'ಮಹಾಲಿಂಗ
ಲಿಂಗ ಪಂಚಕವು ಗರ್ಭೀಕೃತವಾಗಿ
ಗುರುಲಿಂಗವೆ ಆಶ್ರಯವಾಗಿ
ಇಂತೀ ಷಢ್ವಿಧಲಿಂಗದಲ್ಲಿಯೆ
ಬೆರಸಿ ಬೇರಿಲ್ಲದಿರಬಲ್ಲರೆ ಮಾಹೇಶ್ವರನೆಂಬೆನಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಈ ಸ್ಥಲದಲ್ಲಿ ಜಲಾಂಗದಲ್ಲಿದ್ದ ಮಹೇಶ್ವರನು ನಿಷ್ಠ ಭಕ್ತಿಯುಕ್ತನಾಗಿ ಜ್ಞಾನ ಶಕ್ತಿಯೊಡಗೂಡಿ ಗುರುಲಿಂಗವನ್ನು ಪೂಜಿಸುವನು. ಈ ಸ್ಥಲದಲ್ಲಿ ಮಹೇಶ್ವರನು ರಸ ಪದಾರ್ಥವನ್ನು ಗ್ರಹಿಸಿ ಜಿಹ್ವಾಮುಖದಲ್ಲಿ ಗುರುಲಿಂಗಕ್ಕರ್ಪಿಸುವನು. ಆ ರಸ ಪದಾರ್ಥ ಭೋಗಿಸಿದ ಮಹೇಶ್ವರ ಪ್ರಸಾದಿಯಾಗುವನು.

ಶ್ರದ್ಧಾಭಕ್ತಿ, ನೈಷ್ಠಿಕಾಭಕ್ತಿ ಮುಖದಿಂದ ಆಚರಿಸಿದ ಮಹೇಶ್ವರನು ಅವಧಾನ ಭಕ್ತಿಯಿಂದ ಶಿವಪ್ರಸನ್ನತ್ವವನ್ನು ಪಡೆಯುವನು. ಶಿವಪ್ರಸನ್ನತೆಯಿಂದ ಶಿವಪ್ರಸಾದತ್ವ ಪ್ರಾಪ್ತವಾಗುತ್ತದೆ. ಅಂತೆಯೇ ಅದು ಪ್ರಸಾದಿಸ್ಥಲವೆನಿಸಿರುವದು. ಅದನ್ನು ಶಿವಯೋಗಿಗಳು ಹೀಗೆ ವಿವರಿಸಿದ್ದಾರೆ.

"ಸರ್ವಾಂಗವನು ಲಿಂಗನಿಷ್ಠೆಯಿಂದ ಘಟ್ಟಿಗೊಳಿಸಿ
ಮನವ ಉನ್ಮನಿಯಾವಸ್ಥೆಯ ನೆಯ್ದಿಸಿ
ಶತಪತ್ರದಲ್ಲಿ ಸೈತಿಟ್ಟು ಲಿಂಗಕ್ಕೆ ಅರ್ಪಿಸಿದ ನೈವೇದ್ಯವ
ಲಿಂಗನೆನಹಿನಲ್ಲಿಯೆ ಸ್ವೀಕರಿಸುವುದು
ಲಿಂಗಾರ್ಪಿತವ ವಿಸರ್ಜಿಸುವುದಯ್ಯಾ;

ತಟ್ಟುವ ಮುಟ್ಟುವ ಸೋಂಕುವ ಮರ್ಮವನರಿದು
ಲಿಂಗಮುಖಕ್ಕೆ ನಿವೇದಿಸಿ
ಲಿಂಗಪ್ರಸಾದವ ಸ್ವೀಕರಿಸುತಿರ ಬಲ್ಲರೆ
ಪ್ರಸಾದಿಸ್ಥಲವಿದೆಂಬೆನಯ್ಯಾ !
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !

ಪ್ರಸಾದಿ ಸ್ಥಲದಲ್ಲಿ ಸಾಧಕ ತಾನು ಉಪಭೋಗಿಸುವವೆಲ್ಲ ಶಿವನವೇ ಎಂದು ಅರಿದು ಮತ್ತೆ ಅವನ್ನು ಲಿಂಗ ಮುಖಕ್ಕೆ ಪ್ರಸಾದವಾಗಿ ನಿವೇದಿಸುವನು. ತನು, ಮನ, ಧನವು ಗುರುಲಿಂಗ ಜಂಗಮಕ್ಕೆ ಅರ್ಪಿತವಾಗುವದು. ಕೊನೆಗೆ ತಾನೂ ಶಿವಪ್ರಸಾದಿಯಾಗುವನು. ಪ್ರಸಾದಿ ಸ್ಥಲದಲ್ಲಿ ಅವಧಾನ ಭಕ್ತಿಯಿಂದ ಪರಮಾತ್ಮನತ್ತ ಜಾಗ್ರತಿಯುಂಟಾಗುವದು. ಪರಮಾತ್ಮನ ಜ್ಞಾನಪ್ರಸಾದ ಪ್ರಾಪ್ತವಾಗುವುದು. ಪ್ರಸಾದಿಸ್ಥಲ ಸಂಪನ್ನನಾದ ವೀರಶೈವನಿಗೆ ಅಗ್ನಿಯೇ ಅಂಗ. ಇಚ್ಛಾಶಕ್ತಿ ಸಮೇತವಾದ ಶಿವಲಿಂಗವೇ ಪೂಜ್ಯವಸ್ತು.

ಪ್ರಸಾದಸ್ಥಲದಿಂದ ಮುಂದಿನ ಹಂತವೇ ಪ್ರಾಣಲಿಂಗಸ್ಥಲ. ಪ್ರಾಣಲಿಂಗ ಸ್ಥಲದಲ್ಲಿ ಸಾಧನೆ ಧ್ಯಾನದ ಕಡೆಗೆ, ಅನುಸಂಧಾನದ ಕಡೆಗೆ ತಿರುಗುತ್ತವೆಂಬ ದನ್ನು ಮುಖ್ಯವಾಗಿ ಗಮನಿಸಬೇಕು. ಇಲ್ಲಿ ಲಿಂಗ ಉಪಾಸ್ಯನಾದ ಸ್ಥೂಲ ವಸ್ತು ಮಾತ್ರವಾಗಿ ಉಳಿಯುವುದಿಲ್ಲ. ಅದು ಅಂತರಂಗ ಬಹಿರಂಗವನ್ನೆಲ್ಲ ವ್ಯಾಪಿಸಿದ ಶಕ್ತಿಯಾಗುತ್ತದೆ. ಪ್ರಸಾದಿಸ್ಥಲದ ಇಷ್ಟಲಿಂಗೋಪಾಸನೆ ಪ್ರಾಣ ಲಿಂಗ ಸ್ಥಲದಲ್ಲಿ ಅಂತಃಶಕ್ತಿಗಳನ್ನು ಜಾಗ್ರತಗೊಳಿಸುವ ಯೋಗದ ಕಡೆ ತಿರುಗುತ್ತದೆ. ಈ ಪ್ರಾಣಲಿಂಗ ಸ್ಥಲದಲ್ಲಿ ಸಿದ್ಧಲಿಂಗೇಶ್ವರರು ಯೋಗದ ಕಲ್ಪನೆಯನ್ನು ಬಲು ಮಾರ್ಮಿಕವಾಗಿ ಕೊಟ್ಟಿದ್ದಾರೆ. ಇತರ ಯೋಗಗಳನ್ನು ಈ ಸ್ಥಲದಲ್ಲಿ ಅವರು ಕಟುವಾಗಿ ಖಂಡಿಸಿದರೂ ಅದರ ಹಿಂದಿರುವ ಮನೋ ಧರ್ಮವನ್ನು ಅರ್ಥ ಮಾಡಿಕೊಳ್ಳಬೇಕು. ಪರಮ ಗುರಿಯನ್ನು ಸಾಧಿಸ ಅದಕ್ಕೆ ಅಡ್ಡಿಯಾಗುವ ಅವುಗಳ ವಿಚಾರದಲ್ಲಿ ಈ ಎಚ್ಚರಿಕೆ ಅಗತ್ಯ. ಲಿಂಗ ಪ್ರಾಣಿಗಳು, ಪ್ರಾಣಲಿಂಗ ಸಂಬಂಧರು, ಪ್ರಸಾದ ಮುಕ್ತರು ಇದು ಶುದ್ಧ ಯೋಗಿಗಳ ಸ್ವರೂಪ ಎಂಬ ಮಾತು ಅರ್ಥವತ್ತಾದುದು. ಸಿದ್ಧಲಿಂಗ ಶಿ ಯೋಗಿಗಳು ಶಿವಯೋಗದ ಲಕ್ಷಣವನ್ನು ಈ ರೀತಿಯಾಗಿ ವಿವರಿಸಿರುವರು.

"....ಬ್ರಹ್ಮರಂಧ್ರದಲ್ಲಿಪ್ಪ ನಾದ ಚೈತನ್ಯವಪ್ಪ ಪರಮ ಚಿತ್ಕಳೆಯೇ ಭಾವ ಮನ ಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ,ಭಾವದಲ್ಲಿ ಸತ್‌ಸ್ವರೂಪ ಮಪ್ಪ ಇಷ್ಟಲಿಂಗವೆಂದೆನಿಸಿ, ಒಂದೇ ವಸ್ತು ತನು, ಮನ, ಭಾವಂಗಳಲ್ಲಿ ಇಷ್ಟ

ಪ್ರಾಣಭಾವವಾದ ಭೇದವನರಿಯದೆ ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ, ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ, ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ, ಈ ಲಿಂಗತ್ರಯವಿಡಿದು ಆಚರಿಸಿ ಲಿಂಗದೊಡನೆ ಕೂಡಿ ಲಿಂಗವೇ ತಾನು ತಾನಾಗಿ ವಿರಾಜಿಸುತಿರ್ಪುದೀಗ ಶಿವಯೋಗ ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ".

ಅಂದರೆ ಲಿಂಗತ್ರಯವಿಡಿದು ಲಿಂಗವೇ ತಾನಾಗಿ ಪರಿಣಮಿಸುವದೇ ಶಿವಯೋಗ ಎನ್ನುತ್ತಾರೆ ಶಿವಯೋಗಿಗಳು. ಶಿವಯೋಗವನ್ನು ರಾಜಶಿವಯೋಗ ವೆಂದೂ ಸಿದ್ಧಲಿಂಗ ಶಿವಯೋಗಿಗಳು ಕರೆದಿರುವುದು ಅರ್ಥಪೂರ್ಣವಾಗಿದೆ. ಶರಣರ ಯೋಗಾಭ್ಯಾಸವು ಯಾತನಾಮಯವಾಗದೆ ಕ್ಲಿಷ್ಟವಾಗದೆ, ಕ್ಷುಲ್ಲಕ ವಿಷಯಗಳಿಗೆ ವಿನಿಯೋಗವಾಗದೆ, ಆಹ್ಲಾದ ಮಧುರವಾಗಿ ಅನಂತವಾದ ಆನಂದಾ ನುಭವಕ್ಕೆ ಸಾಧಕವಾಯಿತು. ಒಟ್ಟನಲ್ಲಿ ಪ್ರಾಣಲಿಂಗ ಸ್ಥಲದಲ್ಲಿ ಪ್ರಾಣನ ಪೂರ್ವಾಶ್ರಯವಳಿಯುವುದು, ಲಿಂಗದ ನೆನಹು ಸಂಬಂಧಿಸುವುದು, ಲಿಂಗವೇ ಪ್ರಾಣವಾಗಿ, ಪ್ರಾಣವೇ ಲಿಂಗಯೆನಿಸುವನು. ಪ್ರಾಣಲಿಂಗಿಗೆ ವಾಯುವೆ ಅಂಗ. ಆದಿಶಕ್ತಿ ಸಮೇತವಾದ ಜಂಗಮು ಲಿಂಗವೇ ಲಿಂಗ. ಈ ಲಿಂಗವನ್ನು ಆತನ ಅನುಭಾವಭಕ್ತಿಯಿಂದ ಆರಾಧಿಸುವನು. ಇಲ್ಲಿ ಸುಮನೋಯುಕ್ತನಾಗಿ ಸ್ಪರ್ಶ ಪದಾರ್ಥವನ್ನು ಕೈಕೊಂಡು ತ್ವಗಿಂದ್ರಿಯ ಮುಖದಲ್ಲಿಟ್ಟು ಜಂಗಮ ಲಿಂಗಕ್ಕರ್ಪಿ ಸುವನು.

ಇದರ ಮುಂದಿನ ಸ್ಥಲ ಶರಣಸ್ಥಲ. 'ಶರಣ' ಎನ್ನುವ ಮಾತನ್ನು ಶಿವನಿಗೆ ಶರಣು ಹೊಕ್ಕುವನು ಶಿವಯೋಗ ಸಾಧತ ಎಂಬ ಸಾಮಾನ್ಯಾರ್ಥದಲ್ಲಿಯೂ ಬಳಸಿರುವುದುಂಟು. ಆದರೆ ಶರಣಸ್ಥಲದ ನಿಲವನ್ನು ಹೇಳುವಾಗ ಇದಕ್ಕೆ ಲಭಿಸುವ ಅರ್ಥವೇ ಬೇರೆ. ಮೊದಲ ನಾಲ್ಕು ಹಂತಗಳನ್ನು ದಾಟ ಶಿವಯೋಗದ ತುತ್ತ ತುದಿಯಲ್ಲಿ ನಿಂತ ಅನುಭಾವಿ ಎಂಬ ಅರ್ಥದಲ್ಲಿ ಈ ಮಾತು ಬರುತ್ತದೆ. ಆಧ್ಯಾತ್ಮಿಕವಾಗಿ ಆತನು ಸಿದ್ಧಿಯ ಶಿಖರದಲ್ಲಿ ನಿಂತವನು. ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ ಭಕ್ತಿಗಳನ್ನು ದಾಟಿ ಆನಂದ ಭಕ್ತಿಯಲ್ಲಿ ನಿಬ್ಬೆರಗಾದವನು. ಶರಣ ಸ್ಥಲದ ಲಕ್ಷಣವನ್ನು ಸಿದ್ಧಲಿಂಗ ಶಿವಯೋಗಿಗಳು ಈ ತೆರನಾಗಿ ವಿವರಿಸುತ್ತಾರೆ.

"ಲಿಂಗವೆ ಪತಿಯಾಗಿ ತಾನೆ ಸತಿಯಾಗಿ
ಅನ್ಯವನಱಿಯದೆ, ಪಂಚೇಂದ್ರಿಯ ರಹಿತನಾಗಿ
ತೆಱಹಿಲ್ಲದಱುಹು ತಾನಾಗಿ, ನೆಱೆ ಅಱುಹಿನೊಳು ನಿಬ್ಬೆರಗಾಗಿ

ಹೃದಯಕಮಲ ಮಧ್ಯದಲ್ಲಿ ಪರಮೇಶ್ವರ ನೊಳಗಣ
ಸಮರಸ ಸ್ನೇಹ ಬೆರಸಿ

ಅಗಲದಿಪ್ಪುದೀಗ ಶರಣಸ್ಥಲವಿಡೆಂಬೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ"

ಈ ಸ್ಥಲದಲ್ಲಿ ಶರಣಸತಿ ಲಿಂಗ ಪತಿ ಎಂಬ ಭಾವ ಪ್ರಕಟವಾಗುವದು. ಪಂಚೇಂದ್ರಿಯರಹಿತನಾಗಿ ತೆರಹಿಲ್ಲದರುಹು ತಾನಾಗಿರುವನು. ಆ ಅರುಹಿನಲ್ಲಿ ಬೆರಸಿ ಬೇರಿಲ್ಲದೆ ನಿಬ್ಬೆರಗಿನಲ್ಲಿರುವನು. ಹೃದಯ ಕಮಲ ಮಧ್ಯದಲ್ಲಿರುವ ಪರಮಾತ್ಮನಲ್ಲಿ ಪರಮ ಸ್ನೇಹದಿಂದಿರುವನು. ವ್ಯೋಮಕಾಯನಾಗಿ ಪರಾಶಕ್ತಿಯುಕ್ತವಾದ ಪ್ರಸಾದ ಲಿಂಗವನ್ನು ಆನಂದಭಕ್ತಿಯಿಂದ ಆರಾಧಿಸುವನು. ಅವನ ಜ್ಞಾನ ಸುಜ್ಞಾನವಾಗುವದು. ಶಬ್ದ ಪದಾರ್ಥವನ್ನು ಗ್ರಹಿಸಿ ಶ್ರೋತ್ರೇಂದ್ರಿಯ ಮುಖದಲ್ಲಿ ಪ್ರಸಾದಲಿಂಗಕ್ಕರ್ಪಿಸುವನು. ತತ್ಪರಿಣಾಮವಾಗಿ ಶಬ್ದಪದಾರ್ಥ ಪ್ರಸಾದವಾಗುವದು. ಮುಂದೆ ಐಕ್ಯಸ್ಥಲ ಪ್ರಾಪ್ತವಾಗುವದು.

"ಘೃತಘೃತವ ಬೆರಸಿದಂತೆ
ಕ್ಷೀರ ಕ್ಷೀರವ ಬೆರಸಿದಂತೆ
ತೈಲ ತೈಲವ ಬೆರಸಿದಂತೆ
ನೀರು ನೀರು ಬೆರಸಿದಂತೆ
ಜ್ಯೋತಿ ಜ್ಯೋತಿಯ ಕೂಡಿದಂತೆ
ಪ್ರಾಣ ಪ್ರಾಣ ಸಂಯೋಗವಾದ
ಶರಣಲಿಂಗ ಸಮರಸವನೇನೆಂಬೆನಯ್ಯಾ"

ಎಂದು ಶಿವಯೋಗಿಗಳು ಐಕ್ಯಸ್ಥಲದ ನಿರೂಪಣೆಯನ್ನು ಕೊಟ್ಟಿರುವರು. ಕರ್ಪೂರ ಅಗ್ನಿ ಸಂಯೋಗವಾಗಿ ಕರ್ಪುರ ಗುಣವಳಿದು ಅಗ್ನಿಯಾದಂತೆ ಲಿಂಗವ ನೆನೆದು ಲಿಂಗವೇ ತಾನಾಗಿ ಪರಿಣಮಿಸುತ್ತಾನೆ. ಅಂಗ ಲಿಂಗಗಳಲ್ಲಿ ಎರಡೆಂಬ ಭಾವವವಳಿದು ಏಕೋಭಾವ ಉಂಟಾಗುತ್ತದೆ. ಭಿನ್ನವಾದ ಭಾವ ವಳಿದು ಅವಿರಳ ಸಮರಸ ಸೌಖ್ಯದ ಅದ್ವೈತ ಸಿದ್ಧಿಸುತ್ತದೆ. ಪ್ರವೃತ್ತಿ ಮಾರ್ಗದಲ್ಲಿ ಒಂದು ಮೂರಾಗಿ, ಮೂರು ಆರಾದಂತೆ ನಿವೃತ್ತಿ ಮಾರ್ಗದಲ್ಲಿ ಆರು ಮೂರಾಗಿ ಮೂರು ಒಂದರಲ್ಲಿ ಅಡಗುತ್ತದೆ.

ಚಿನ್ನದಿಂದಲಾದ ಹಲವು ಬಂಗಾರವನಳಿದು ಕರಗಿಸಿದರೆ ಮುನ್ನಿನ ಚಿನ್ನವೆ ಆದಂತೆ, ಉದಕದಿಂದಾದ ವಾರಿಕಲ್ಲು ಕರಗಿ ಮುನ್ನಿನ ಉದಕವೆ ಆದಂತೆ,

ಚಿನ್ಮಯ ವಸ್ತುವಿನಿಂದುದಯಿಸಿದ ಚಿತ್‌ಸ್ವರೂಪವಾದ ಶರಣನು ಆ ಚಿನ್ಮಯ ಪರವಸ್ತುವನೆ ಬೆರಸಿ ಪರಮ ಶಿವಯೋಗಿಯಾಗುವನು ಎಂದೂ, ಮತ್ತು

"ತನುವ ನೀವು ಸೋಂಕಿ ತನು ನಷ್ಟವಾಯಿತ್ತಯ್ಯಾ
ಮನವ ನೀವು ಸೋಂಕಿ ಮನ ನಷ್ಟವಾಯಿತ್ತಯ್ಯಾ
ಧನವ ನೀವು ಸೋಂಕಿ ಭ್ರಮೆ ನಷ್ಟವಾಯಿತ್ತಯ್ಯಾ"

ತೋಂಟದ ಸಿದ್ಧಲಿಂಗೇಶ್ವರರು ಹೇಳುವಂತೆ ತನುವನ್ನು ಲಿಂಗ ಸೋಂಕಿ ತನು ನಷ್ಟವಾಗುವದು, ಮನವನ್ನು ಲಿಂಗ ಸೋಂಕಿ ಮನ ನಷ್ಟವಾಗುವದು, ಧನವನ್ನು ಲಿಂಗ ಸೋಂಕಿ ಧನ ನಷ್ಟವಾಗುವದು. ಅಲ್ಲಿ ಭಾವವೆಲ್ಲಾ ನಿರ್ಭಾವವಾಗುತ್ತದೆ. ನಿರ್ಲೇಪ ನಿರಂಜನ ವಸ್ತು ತಾನೇ ತಾನಾಗುತ್ತದೆ. ಷಟ್‌ಸ್ಥಲಗಳಿಗೂ ಅತೀತವಾದ ನಿಃಸ್ಥಲದ ನಿಲವು ಇಲ್ಲಿ ಕಾಣುತ್ತದೆ. ಮನವೇ ಲಿಂಗವಾದ ಬಳಿಕ ಅಲ್ಲಿ ಯಾರನ್ನು ಯಾರು ನೆನೆವುದು ? ಭಾವವೇ ಐಕ್ಯವಾದ ಬಳಿಕ ಬಯಸುವದೇನನ್ನು ? ಅರಗಿನ ದೇಗುಲದಲ್ಲಿ ಉರಿಯಲಿಂಗ ಮಾಡಿದಂತೆ, ಉರಿಯ ಪರ್ವತಕ್ಕೆ ಅರಗಿನ ಬಾಣವ ಬಿಟ್ಟಂತೆ.

ಇನ್ನು ವೀರಶೈವ ಧರ್ಮದ ಧಾರ್ಮಿಕ ಆಚರಣೆಯ ಗುಂಪಿಗೆ ಸೇರಿದವು ಅಷ್ಟಾವರಣಗಳು. ಷಟ್‌ಸ್ಥಲದಲ್ಲಿಯೇ ಅಷ್ಟಾವರಣಗಳು ಸೇರಿದರೂ ಆ ಎಂಟು ಆವರಣಗಳನ್ನು ಒಂದು ಗುಂಪು ಮಾಡಿ ಅದರದೇ ಆದ ವಿಶಿಷ್ಟ ನಿರೂಪಣೆ ವೀರಶೈವ ಧರ್ಮದಲ್ಲಿ ಬರುತ್ತದೆ. ಎಂಟು ಆವರಣಗಳ ಗುಂಪಿಗೆ ಅಷ್ಟಾವರಣ ಎಂದು ಕರೆದಿರುವರು. ಈ ಅಷ್ಟಾವರಣಗಳು ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ. ಇವುಗಳಲ್ಲಿ ಗುರು ಲಿಂಗ ಜಂಗಮ ಬಹಳ ಪ್ರಮುಖ ಸ್ಥಾನವನ್ನು ವಹಿಸುತ್ತವೆ. ಷಟ್‌ಸ್ಥಲ ಮಾರ್ಗದ ತ್ರಿವಿಧ ದಾಸೋಹಕ್ಕೆ ಇವು ಆಧಾರ ಸ್ವರೂಪ. ಸಾಧನೆಯ ನೆಲೆ ಸಾಧ್ಯ. ಮೌನವಾದ ಕುರುಹು. ಮತ್ತು ಸಿದ್ಧಿಯ ನಿಲವು. ಈ ಮೂರು ಅಂಗಗಳನ್ನು ಇವು ಪ್ರತಿನಿಧಿಸುತ್ತವೆ. ಪಾದೋದಕ ಪ್ರಸಾದಗಳೆರಡೂ ಇವುಗಳಿಂದ ಲಭ್ಯವಾಗುತ್ತವೆ. ಇನ್ನು ವಿಭೂತಿ ರುದ್ರಾಕ್ಷಿಗಳು ಒಂದು ಗುಂಪಾಗಿ ನಿಲ್ಲುತ್ತವೆ. ಸ್ಥೂಲ ದೇಹದ ಮೇಲೆ ಧರಿಸುವ ಇವುಗಳೂ ತಮ್ಮ ಮೂಲ ಮತ್ತು ಚೂಲಗಳೆರಡನ್ನೂ ಆಂತರಿಕ ವಿದ್ಯುತ್‌ಕೋಶದ ಶಕ್ತಿ ಕೇಂದ್ರಕ್ಕೇ ಸೇರಿಸುತ್ತವೆ. ಅಷ್ಟವರಣಗಳಲ್ಲಿ ಕೊನೆಯದು ಮಂತ್ರ. ಇವೆಲ್ಲಕ್ಕಿಂತಲೂ ಬೇರೆಯಾದ ವಿಶಿಷ್ಟ ನಿಲುವು ಇದರದು. ಇವೆಲ್ಲಕ್ಕೂ ಜೀವವನ್ನು ತುಂಬುವ ಮಾಂತ್ರಿಕ ಶಕ್ತಿ ಇದು.

ಅಷ್ಟಾವರಣಗಳು ದೇಹದಲ್ಲಿರುವ ಸುಪ್ತಶಕ್ತಿಗಳನ್ನು ಜಾಗ್ರತಗೊಳಿಸುವುದಕ್ಕೆ ಕಾರಣವಾಗುವವು. ಶಿವಯೋಗಿಗಳು ಷಟ್‌ಸ್ಥಲದಲ್ಲಿ ಅಷ್ಟಾವರಣ ನಿರೂಪಣೆಯನ್ನು ಮಾರ್ಮಿಕವಾಗಿ ಕೊಟ್ಟಿದ್ದಾರೆ.

ಸಿದ್ಧಲಿಂಗ ಶಿವಯೋಗಿಗಳು ಹದಿನೈದನೇ ಶತಮಾನದಲ್ಲಿ ವೀರಶೈವ ಧರ್ಮಕ್ಕೆ ಪ್ರೇರಕ ಮತ್ತು ಪ್ರಚೋದಕರಾಗಿ ಪರಿಣಮಿಸಿದರು. ಅವರಂಥ ಮಹಾನ್ ವ್ಯಕಿತ್ವ ವೀರಶೈವ ದರ್ಶನಕ್ಕೆ ಹದಿನೈದನೇ ಶತಮಾನದಲ್ಲಿ ಬೆಳಕನ್ನು ನೀಡದಿದ್ದರೆ ವೀರಶೈವ ಧರ್ಮವು ಒಂದು ಪರಿಪೂರ್ಣಾವಸ್ಥೆಯನ್ನು ಪಡೆಯುತ್ತಿತ್ತೋ ಇಲ್ಲವೋ ಎಂಬುದನ್ನು ಹೇಳಲಾಗದು. ಅವರ ವಚನಗಳೇ ಅವರ ದಿವ್ಯವಾದ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಗಳಾಗಿವೆ. ಬಸವಾದಿ ಪ್ರಮುಥರನ್ನು ಶಿವಯೋಗಿಗಳು ಅಪಾರವಾದ ಭಕ್ತಿಯಿಂದ ಸ್ತುತಿಸಿರುವದರಿಂದ ಅವರ ಪ್ರಭಾವ ಶಿವಯೋಗಿಗಳ ಮೇಲೆ ವಿಶೇಷವಾಗಿತ್ತು ಎಂದು ಹೇಳಬಹುದು. ಶಿವಯೋಗಿಗಳು ಘನವಿದ್ವಾಂಸರು, ಶಾಸ್ತ್ರಪರಿಣಿತರು, ಅಪಾರ ಲೋಕಾನುಭವ ಉಳ್ಳವರು ಆಗಿದ್ದರೆಂದು ಅವರ ವಚನದಿಂದ ತಿಳಿದು ಬರುತ್ತದೆ.

ಸಿದ್ಧಲಿಂಗ ಶಿವಯೋಗಿಗಳು, ಶಿವಾನುಭಾವಿಗಳು. ಷಟಸ್ಥಲ ಜ್ಞಾನಿಗಳು, ವೀರಶೈವ ಉದ್ಧಾರಕರೂ, ಶ್ರೇಷ್ಠ ತರಗತಿಯ ವಚನಕಾರರು ಆಗಿ, ಏಳುನೂರು ಶಿಷ್ಯವೃಂದದೊಡನೆ ನಾಡಿನ ಮೂಲೆ ಮೂಲೆಯಲ್ಲಿ ಸಂಚರಿಸಿ ಧಾರ್ಮಿಕ ಜಾಗ್ರತಿಯನ್ನುಂಟು ಮಾಡಿದರು. ಅವರು ಅಡಿಯಿಟ್ಟ ನೆಲ ಪಾವನವಾಗಿದೆ; ಪುಣ್ಯಕ್ಷೇತ್ರವಾಗಿದೆ; ಮುಟ್ಟಿದ ಕಲ್ಲು ಕರಗಿ ತೀರ್ಥವಾಗಿ ಹರಿದಿದೆ. ಆಡಿದ ನುಡಿ ಮಂತ್ರವೆನಿಸಿದೆ; ನಡೆದುದು ಧರ್ಮವಾಗಿ ಪರಿಣಮಿಸಿದೆ.

# ತೋಂಟದಾರ್ಯರ ಶಿವಯೋಗವೈಭವ

— ಡಾ. ನಿಜಲಿಂಗಮ್ಮ ಕೊಪ್ಪಳ

ಪರತರ ಸುಕ್ಷಟ್‌ಸ್ಥಲ ಬ್ರಹ್ಮಸ್ವರೂಪ ನಿಜ
ಶರಣ ಶಾಶ್ವತನನರ್ಘನಪ್ರತಿಮ ಘನಮಹಿಮ
ಸುರುಚಿರ ಶಿವಜ್ಞಾನಿ ಕರ್ಮಪಾಶಚ್ಛೇದಿ ಸಂಸಾರದುಃಖಾಪಹಂ
ದುರಿತದಾರಿದ್ರ್ಯತುಲಮೇಘಝುಂಝಾವಾತ
ಸರಸ ಭಕ್ತಿಜ್ಞಾನ ವೈರಾಗ್ಯ ಸಂಪನ್ನ
ಪರಮ ಸದ್‌ಭಕ್ತಾಂತರಂಗ ತೋಂಟದ ಸಿದ್ಧಲಿಂಗ
ಕರುಣಾಪಾಂಗನು.

[ಸಿದ್ಧನಂಜೇಶ ವಿರಚಿತ ಶ್ರೀ ಗುರುರಾಜ ಚಾರಿತ್ರ
ಪುಟ ೨೬೪ ಪದ್ಯ ೮೭]

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಪ್ರಮಥರು ಕ್ರಾಂತಿಯ ಕಹಳೆಯನ್ನೂದಿ ನಾಡ ನಾಡಿಗಳಲ್ಲೆಲ್ಲ ಅಂತಃಪ್ರಜ್ಞೆ ನಿರಂತರವೂ ಪ್ರಜ್ವಲಿಸುವಂತೆ ಸಾಹಸಗೈದರು. ವೀರಶೈವ ದರ್ಶನಕ್ಕೆ ಮೆರುಗು ತಂದರು. ಷಟ್‌ಸ್ಥಲ ಸಿದ್ಧಾಂತ ಮನೆ ಮನೆಯನ್ನು ಬೆಳಗುವಂತೆ ಮಾಡಿದರು. ನಂತರ ಅನೇಕ ಕವಿಪುಂಗವರನ್ನೊಳಗೊಂಡು ಅತಿ ಪ್ರಾಮುಖ್ಯ ಶಿವಕವಿಗಳೆನ್ನಿಸಿದ ಹರಿಹರ, ರಾಘವಾಂಕ ಕೆರೆಯ ಪದ್ಮರಸ ಮೊದಲಾದವರು ತಮ್ಮ ಅಮರ ಕೃತಿಗಳನ್ನು ರಚಿಸಿ ವೀರಶೈವ ದರ್ಶನಕ್ಕೆ ಘನತರವಾದ ಸೇವೆಯನ್ನು ಸಲ್ಲಿಸಿದರು. ಮುಂದೆ ಭೀಮಕವಿಯ

'ಬಸವ ಪುರಾಣ' ಪದ್ಮಣಾಂಕನ 'ಪದ್ಮರಾಜ ಪುರಾಣ'ಗಳು ವೀರಶೈವ ಧರ್ಮ ಪುರಾಣ ಗ್ರಂಥಗಳಿಗೆ ನಾಂದಿಯಾಗಿ ಜನತೆಯ ಜೀವನವನ್ನು ಬೆಳಗಿದವು, ಶ್ರ ನಿಷ್ಠೆಗಳನ್ನು ಹೆಚ್ಚಿಸಿದವು, ಮೋಕ್ಷ ಮಾರ್ಗದತ್ತ ಮನ ಸೆಳೆದವು. ತರುವಾ ವಿಜಯನಗರ ಸಾಮ್ರಾಜ್ಯವನ್ನಾಳಿದ ಅರಸು ಮನೆತನಗಳಲ್ಲಿ ಸಂಗಮ ವಂ ದೊರೆಗಳು ಶೈವಮಾರ್ಗಾವಲಂಬಿಗಳಾಗಿದ್ದರು. ಅದರಿಂದಾಗಿ ಈ ಮನೆತನ ಇಮ್ಮಡಿ ದೇವರಾಯನು ಪ್ರೌಢದೇವರಾಯನೆಂಬ ಅಭಿಧಾನದಿಂದ ವೀರಶೈ ಸಾಹಿತ್ಯದಲ್ಲಿ ಪ್ರಖ್ಯಾತನಾಗಿದ್ದಾನೆ. ಅದೃಶ್ಯನೆಂಬ ವೀರಶೈವ ಕವಿ (ಕ್ರಿ. ೧೫೮೦) ಪ್ರೌಢದೇವರಾಯನ ಕಾವ್ಯವನ್ನು ಬರೆದನು. ಕ್ರಿ. ಶ. ೧೪೪೯-೪೬ ವರೆಗೆ ಆಳಿದ ಈ ದೊರೆಯ ಆಳಿಕೆ ವೀರಶೈವದ ಇತಿಹಾಸದಲ್ಲಿ 'ನೂರೊಂದು ವಿರಕ್ತರ' ಯುಗವೆಂದು ಹೆಸರಾಗಿದೆ. ಆದರೆ ಈ ವಿರಕ್ತರ ಹೆಸರು, ಅವರೆಸಗಿ ಮಹತ್ಕಾರ್ಯಗಳು ನಮಗೆ ಸ್ಪಷ್ಟವಾಗಿ ದೊರಕುವದಿಲ್ಲ. ಅದರೂ ಅದೃಶ್ಯ ಕವಿಯ ಪ್ರೌಢರಾಯನ ಕಾವ್ಯ, ವಿರೂಪಾಕ್ಷ ಪಂಡಿತನ (ಕ್ರಿ. ಶ. ೧೫೮೪) 'ಚೆನ್ನಬಸವ ಪುರಾಣ'ಗಳು ಅಲ್ಪಮಟ್ಟಿಗೆ ಮತ್ತು ಪೋದಿಯ ರುದ್ರನ (ಕ್ರಿ.ಶ. ೧೭೩೭) 'ನೂರೊಂದು ವಿರಕ್ತರ ಕಾವ್ಯ' ವಿಸ್ತೃತವಾದ ಪವಾಡಗಳೊಂದಿ ಈ ನೂರೊಂದು ವಿರಕ್ತರ ಚರಿತೆಯನ್ನು ನಮಗೆ ಒದಗಿಸುತ್ತವೆ. ೧೫ ನೆಯ ಶತಮಾನದ ವೀರಶೈವ ಧರ್ಮ ಕ್ರಾಂತಿಗೆ ಈ ನೂರೊಂದು ವಿರಕ್ತರೆ ಕಾರಣರು ಇವರೇ '.....ಕಲ್ಯಾಣ ಮಂಡಲದ ಶಿವಭಕ್ತರ ಸಂತಾನ (ನೂರೊಂದು ವಿರಕ್ತ ಕಾವ್ಯ ೩-೨೨). ಇವರೇ ೧೨ ನೆಯ ಶತಮಾನದ ಅನಂತರ ಷಟ್‌ಸ್ಥಲವನ್ನು ಉದ್ಧರಿಸಿದ ಮಹಾಪುರುಷರು.. ಇವರ ಧರ್ಮಾನುಷ್ಠಾನದ ಅಲ್ಪಾವಧಿಯಲ್ಲಿ ಮತ್ತೆ ವೀರಶೈವ ಧರ್ಮದ ಬೆಳವಣಿಗೆಯಲ್ಲಿ ಅಲ್ಪ ಮಟ್ಟಿಗೆ ಸಡಿಲುಂಟಾದಂತೆ ತೋರುತ್ತದೆ. ಈ ಸಮಯದಲ್ಲಿ ಏಳುನೂರು ಜನ ವಿರತರು ಉದಿಸಿ ಷಟ್‌ಸ್ಥ ವನ್ನು ಉದ್ಧರಿಸಿದರೆಂದು ವಿರೂಪಾಕ್ಷ ಪಂಡಿತನ 'ಚನ್ನಬಸವ ಪುರಾಣ'ವು ಸೂಚಿಸುತ್ತದೆ.

ಸುರಪನನಿಮಿತ್ತದಿಂದಿಳೆಯೊಳಗೆ ನೂರೊಂದು
ವರಗಣೇಶ್ವರರುದಿಸಿ ಜಂಗಮಸ್ಥಲವಾಂತು
ಪರನು ಷಟ್‌ಸ್ಥಲವನುದ್ಧರಿಸಿ ಬಳಿಕವರಿರದೆ ನಿರವಯವನೆಯ್ದಲಿ
ಧರೆಯೊಳಗೆ ವೀರಶೈವಾಚಾರವಡಗಿತ್ತು
ಕರುಣದಿಂ ನೀವೆ ಚಿತ್ತೈಸಿ ಷಟ್‌ಸ್ಥಲವನು
ದ್ಧರಿಸೆಂದು ನಾರದಂ ಬಿನ್ನವಿಸಲೀಶಂ ನಿರಂಜನ ಗಣೇಶನೊಡನೆ
ವರಗಣೇಶ್ವರರನೇಳ್ನೂರ್ವರಂ ಕೂಡಿಕೊಂ

ಧರಿಪೆ ಭೂಮಿಯೊಳುದಿಸಿ ಜಂಗಮಸ್ಥಲವಾಂತು
ಪರಮ ಷಟ್‌ಸ್ಥಲವನುದ್ಧರಿಸೆಂದು ಕಳುಹಲು....

[ಚೆನ್ನಬಸವ ಪುರಾಣ ಸಂ. ೬೩, ಪ. ೪೬-೪೩]

ಷಟ್‌ಸ್ಥಲವನ್ನುದ್ಧರಿಸಲು ಏಳನೂರು ವಿರತರು ಭುವಿಗವತರಿಸಿದರು, ಇವರಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಶ್ರೇಷ್ಠರು. ಇನ್ನುಳಿದವರು ಅವರ ಮಾರ್ಗಾವಲಂಬಿಗಳಾಗಿ ಕಂಗೊಳಿಸಿದ್ದಾರೆ. ಚೆನ್ನಬಸವ ಪುರಾಣ, ತೋಂಟದ ಸಿದ್ಧಲಿಂಗೇಶ್ವರ ಪುರಾಣ, ಸಿದ್ಧಲಿಂಗೇಶ್ವರ ಸಾಂಗತ್ಯ, ಎಡೆಯೂರ ಶಾಸನ, ಗುರುರಾಜ ಚಾರಿತ್ರಗಳು ಸಿದ್ಧಲಿಂಗ ಶಿವಯೋಗಿಗಳನ್ನು ಅಗ್ರಸ್ಥಾನದಲ್ಲಿರಿಸಿ ಪೂಜಿಸುತ್ತವೆ. ಉಳಿದ ವಿರತರೆಲ್ಲ ಆ ಮಹಾಮಹಿಮನ ಅನುಯಾಯಿಗಳೆಂಬ ರೀತಿಯಲ್ಲಿ ವರ್ಣಿಸುತ್ತವೆ.

ಶಿವಶರಣರು ೧೨ ನೆಯ ಶತಮಾನದಂದು ಮೂಡಿಸಿದ ಪ್ರಜ್ಞಾನ ಪ್ರಭೆ ನಿರಂತರವಾಗಿ ತೋಂಟದ ಸಿದ್ಧಲಿಂಗೇಶ್ವರರ ಕಾಲದ ವರೆಗೆ (ಕ್ರಿ. ಶ. ೧೪೮೦) ಉಳಿದು ಬಂದಿದೆ. ಶಿವಯೋಗಿಗಳು ತಮ್ಮ ಏಳು ನೂರು ಜನ ಶಿಷ್ಯರೊಡನೆ ಮೂಲೆ ಮೂಲೆಗಳಲ್ಲೆಲ್ಲ ಸಂಚರಿಸಿದರು; ಜನತೆಯಲ್ಲಿ ಧಾರ್ಮಿಕ ಜಾಗ್ರತೆಯನ್ನುಂಟು ಮಾಡಿದರು. ಷಟ್‌ಸ್ಥಲ ಸಿದ್ಧಾಂತದ ತಿರುಳನ್ನೂ ಅದಕ್ಕನುಗುಣವಾದ ಶಿವಯೋಗ ರಹಸ್ಯವನ್ನೂ ಜನತೆಗೆ ಬೋಧಿಸಿದರು. ಸಹಜ ಮುಕ್ತಿಯ ಪಥವನ್ನು ತೋರಿದರು. ಇಂತು ಶ್ರೀಮದಲ್ಲಮಪ್ರಭು ದೇವರ ಅಪರಾವತಾರಿಗಳಾಗಿ, ಷಟ್‌ಸ್ಥಲ ಬ್ರಹ್ಮಸ್ವರೂಪರಾಗಿ, ಸುರುಚಿರ ಶಿವಜ್ಞಾನಿಗಳಾಗಿ, ಶ್ರೇಷ್ಠ ಶಿವಯೋಗಿಗಳಾಗಿ ಅಂದಿನಿಂದ ಇಂದಿನವರೆಗೆ ಜನತೆಯ ಹೃದಯ ಮಂದಿರದಲ್ಲಿ ಪ್ರತಿಷ್ಠಾಪಿತರಾಗಿದ್ದಾರೆ. ಇಂಥ ಗಣ್ಯ ಶಿವಯೋಗಿಗಳು ಸಾಧಿಸಿ ಸಿದ್ಧಿ ಪಡೆದ ಶಿವಯೋಗದ ರಹಸ್ಯವೇನು ? ನೆಲೆ ಕಲೆ ಎಂಥದು ?

ಶಿವಯೋಗ ಸಾಧನೆಗೆ ಷಟ್‌ಸ್ಥಲ ಜ್ಞಾನವೇ ಆಧಾರಸ್ತಂಭ. ಷಟ್‌-ಸ್ಥಲಾನುಸಂಧಾನದಲ್ಲಿ ಸಾಧಕನು ನಿರತನಾದನೆಂದರೆ ಶಿವಯೋಗ ಸಾಧನೆ ಇಷ್ಟಲಿಂಗದ ಮೇಲಿರಿಸಿದ ಅನಿಮಿಷ ದೃಷ್ಟಿಯಿಂದಲೇ ಆರಂಭವಾಗುತ್ತದೆ. ಇಷ್ಟಲಿಂಗಾರ್ಚನೆ ಅನುಸಂಧಾನಗಳಿಗೆ ಅರೆತೆರೆದ ಅನಿಮಿಷ ದೃಷ್ಟಿಯು ಮೂಲ ಸೂತ್ರ. ಮಾನಸಿಕವಾಗಿ ಪರಮಾತ್ಮ ತತ್ವವನ್ನು ಚಿಂತಿಸುವದು ಷಟ್‌ಸ್ಥಲದ ಮುಖ್ಯ ಧ್ಯೇಯ. ಆದ್ದರಿಂದ ಶರಣರ ಆಚರಣೆಯಲ್ಲಿ ಮೋಕ್ಷದ ಬಗೆಗೆ ಒಂದು ವಿಶಿಷ್ಟವಾದ ವಿಚಾರವಿದೆ, ಆತ್ಮನು ದೇಹವನ್ನು ತ್ಯಜಿಸಿದಾಗ ಮಾತ್ರ ದುಃಖದಿಂದ ಬಿಡುಗಡೆಯಾಗುತ್ತದೆ. ಸ್ವತಂತ್ರವಾಗಿ ವಿಹರಿಸಲು ಸಾಧ್ಯವಾಗುತ್ತದೆ. ಅದುವೇ ಮೋಕ್ಷ ಎಂಬುದು ಇಲ್ಲಿಯ ಅಭಿಪ್ರಾಯವಲ್ಲ.

ಷಟ್‌ಸ್ಥಲದ ಮಾರ್ಗದಿಂದ ಸಾಧಕನು ದೇಹಸಹಿತ ಪ್ರಸಾದಕಾಯನಾಗುತ್ತಾನೆ. ಅವನ ಅಂಗೇಂದ್ರಿಯಗಳು ಲಿಂಗೇಂದ್ರಿಯಗಳಾಗಿ ಪರಿಶುದ್ಧವಾಗುತ್ತವೆ. ಈ ಬಗೆಯ ಆಂತರಿಕ ಪರಿವರ್ತನೆ ಷಟ್‌ಸ್ಥಲದ ಉದ್ದೇಶ.

ಬಸವಾದಿ ಪ್ರಮಥರ ಕಾಲದಲ್ಲಿ ಷಟ್‌ಸ್ಥಲ ಯೋಜನೆಯ ಎರಡು ಘಟ್ಟಗಳನ್ನು ಕಾಣುತ್ತೇವೆ. ಭಕ್ತಸ್ಥಲದಲ್ಲಿ ನಿಂತ ಬಸವಣ್ಣನವರ ವಚನಗಳಲ್ಲಿ ಕಂಡು ಬರುವ ಘಟ್ಟ ಒಂದು.

" ಮೆಲ್ಲಮೆಲ್ಲನೆ ಭಕ್ತನಪ್ಪೆ, ಮೆಲ್ಲಮೆಲ್ಲನೆ ಮಹೇಶನಪ್ಪೆ
ಮೆಲ್ಲಮೆಲ್ಲನೆ ಪ್ರಸಾದಿಯಪ್ಪೆ, ಮೆಲ್ಲಮೆಲ್ಲನೆ ಪ್ರಾಣಲಿಂಗಿಯಪ್ಪೆ
ಮೆಲ್ಲಮೆಲ್ಲನೆ ಶರಣನಪ್ಪೆ, ಮೆಲ್ಲಮೆಲ್ಲನೆ ಐಕ್ಯನಪ್ಪೆ........"

— ಬಸವಣ್ಣ

ಇಲ್ಲಿ ಸ್ಥಲಗಳನ್ನು ಒಂದೊಂದಾಗಿಯೆ ಏರಿ ಕೊನೆಗೆ ಐಕ್ಯ ಸ್ಥಲಾನುಭವವನ್ನು ಮುಟ್ಟಬೇಕು. ಇದು ಕ್ರಮವಿಕಾಸ. ಇನ್ನೊಂದು ಷಟ್‌ಸ್ಥಲಬ್ರಹ್ಮಿ ಚನ್ನಬಸವಣ್ಣ ವಿವರಿಸಿದ ಸಮವಿಕಾಸ—

'ಮೆಲ್ಲಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಾಹೇಶ್ವರ
ಮೆಲ್ಲಮೆಲ್ಲನೆ ಪ್ರಸಾದಿ, ಮೆಲ್ಲಮೆಲ್ಲನೆ ಪ್ರಾಣಲಿಂಗಿ
ಮೆಲ್ಲಮೆಲ್ಲನೆ ಶರಣ, ಮೆಲ್ಲಮೆಲ್ಲನೆ ಐಕ್ಯರಾದವೆಂಬರು ನಿಮ್ಮ ಶರಣರು
.... .... .... ....
.... .... .... ....
ಆವ ಸ್ಥಲದಲ್ಲಿ ನಿಂದರೂ ಆ ಸ್ಥಲದಲ್ಲಿ ಷಡುಸ್ಥಲವಡಗಬೇಕು'

[ಚನ್ನಬಸವಣ್ಣ ವ. ಕ. ವಿ. ವಿ. ಪ್ರಕಟನೆ ೨೭ ಅ. ಟ.]

ಎಂದು ಗುಣವರ್ಗೀಕರಣದ ಮೇಲೆ ಚನ್ನಬಸವಣ್ಣ ಷಟ್‌ಸ್ಥಲ ಯೋಜನೆಯನ್ನು ಚಿತ್ರಿಸಿದುದು ಗೊತ್ತಾಗುತ್ತದೆ.

ಸಾಧಕನು ಷಟ್‌ಸ್ಥಲ ಕ್ರಮವಿಡಿದು ಲಿಂಗ ನಿರೀಕ್ಷಣೆಯಲ್ಲಿ ತೊಡಗಿರಲು ಆತ ಭಕ್ತಸ್ಥಲದಲ್ಲಿ ಸದಾಚಾರ ಶಿವಭಕ್ತಿ ನಿಷ್ಠನಾಗುತ್ತಾನೆ. ಶಿವಲಾಂಛನವ ಕಂಡಲ್ಲಿ ಕೈಮುಗಿಯುತ್ತಾನೆ. ಲಿಂಗ ಜಂಗಮನು ಒಂದೆ ಎಂದು ಭಾವಿಸುತ್ತಾನೆ. ಭೃತ್ಯಾಚಾರ ಸದಾಚಾರ ಯುಕ್ತನಾಗುತ್ತಾನೆ. ಹೀಗಿರಲು ಅವನಲ್ಲಿ ಪೃಥ್ವಿತತ್ವ ಜಾಗ್ರತವಾಗುತ್ತದೆ. (ತೋಂಟದ ಸಿದ್ಧಲಿಂಗ ವ. ೨೧೨) ಮಹೇಶ್ವರ ಸ್ಥಲವನ್ನೇರಲು ಅನೃತ ಅನಾಚಾರ ಅನ್ಯಹಿಂಸೆ ಪರಧನ ಪರಸ್ತ್ರೀ ಪರನಿಂದೆಯ

ಬಿಟ್ಟು ಲಿಂಗನಿಷ್ಠೆಯಿಂದ ಶುದ್ಧಾತ್ಮನಾಗಿ ಬದುಕುತ್ತಾನೆ. ( Ibid ವ. ೨೬೪ ) ಜಲತತ್ವವು ಜಾಗ್ರತವಾಗುತ್ತದೆ ಮೆಲ್ಲನೆ ಪ್ರಸಾದಿಸ್ಥಲವನ್ನೇರಲು ಸಾಧಕನು ಸರ್ವಾಂಗವನ್ನು ಲಿಂಗನಿಷ್ಠೆಯಿಂದ ಘಟ್ಟಿಗೊಳಿಸುತ್ತಾನೆ. ಮನವನ್ನು ಉನ್ಮನಿ ಯಾವಸ್ಥೆಗೆ ನಿಲ್ಲಿಸಿ ಲಿಂಗಕ್ಕೆ ಅರ್ಪಿಸಿದ ನೈವೇದ್ಯವನ್ನು ಲಿಂಗದ ನೆನಹಿನಲ್ಲಿ ಸ್ವೀಕರಿಸುತ್ತಾನೆ, ಪ್ರಸನ್ನಚಿತ್ತನಾಗುತ್ತಾನೆ.

ಇಲ್ಲಿ ಶರಣನ ಅಗ್ನಿತತ್ವ ವಿಕಾಸಗೊಳ್ಳುವದು. ಮುಂದೆ ಪ್ರಾಣಲಿಂಗ ಸ್ಥಲಕ್ಕೇರಲು ಸುಗುಣ-ದುರ್ಗುಣವೆಂಬ ಉಭಯವನ್ನು ಅತಿಗಳೆಯುತ್ತಾನೆ. ಸುಖ-ದುಃಖ, ಶತ್ರು-ಮಿತ್ರ, ಸ್ತುತಿ-ನಿಂದೆ, ಹಾಸ್ಯ-ವಿಸ್ಮಯ ಮೊದಲಾದ ದ್ವಂದ್ವಭಾವವನ್ನು ಮೀರುತ್ತಾನೆ. ಪ್ರಾಣದ ವಿಷಯಭ್ರಾಂತಿಯನ್ನು ಕತ್ತರಿಸಿ ಲಿಂಗದ ನೆನಹಿನಿಂದ ಲಿಂಗವೇ ಪ್ರಾಣ, ಪ್ರಾಣವೆಲಿಂಗವಾಗುವನು. (Ibid ವ. ೩೩೩) ಆಗ ಮುಮುಕ್ಷುವಿನಲ್ಲಿ ವಾಯುತತ್ವ ಜಾಗ್ರತವಾಗಿ ಪ್ರಾಣ ನಿರೋಧ ಶಕ್ತಿ ಬಲಿಷ್ಠವಾಗುತ್ತದೆ ಈ ಸ್ಥಲದ ಆಚರಣೆಯಲ್ಲಿ ಸಾಧಕನು ಶಿವಯೋಗಾನು ಸಂಧಾನದಲ್ಲಿ ತನ್ಮಯತೆಯನ್ನು ಪಡೆಯುವನು. ಮಾನವೀಯ ಗುಣಗಳೆಲ್ಲ ದೈವೀಗುಣಗಳಾಗಿ ಮಾರ್ಪಡುವವು.

ಇಲ್ಲಿಯವರೆಗಿನ ಷಟ್‌ಸ್ಥಲಾಚರಣೆ ಶಿವಯೋಗ ಸಾಧನೆಗೆ ಭದ್ರ ಹಿನ್ನೆಲೆ ಯಾಗುತ್ತದೆ. ಯೋಗಶಾಸ್ತ್ರದ ಪರಿವಿಡಿಗೆ ಹೋಲಿಸಿ ನೋಡಿದರೆ ಷಟ್‌ಸ್ಥಲ ಮಾರ್ಗವಿಡಿದ ಶಿವಯೋಗ ಸಾಧಕನಿಗೆ ಚನ್ನಬಸವಣ್ಣನ ಸಮವಿಕಾಸವು ಅನ್ವಯಿಸುತ್ತದೆ ಎನ್ನಬಹುದು. ಏಕೆಂದರೆ ಯೋಗಾನುಸಂಧಾನದ ಮಾನಸಿಕ ಹಿನ್ನೆಲೆಯುಳ್ಳವನು ಷಟ್‌ಸ್ಥಲಗಳಲ್ಲಿ ಪ್ರಾಣಲಿಂಗಿಸ್ಥಲ ಇಲ್ಲವೆ ಶರಣಸ್ಥಲದ ಪ್ರಾರಂಭಾವಸ್ಥೆಯಲ್ಲಿ ನಿಂತು ತನ್ನ ಯೋಗಾನುಭವಗಳನ್ನು ನಿರೂಪಿಸುವದು ವಚನಗಳ ಅಭ್ಯಾಸಿಗಳಿಗೆ ವೇದ್ಯವಾಗುತ್ತದೆ. ಈ ಸ್ಥಲಗಳಲ್ಲಿ ಪ್ರಾಣ ಸುಸಂಬದ್ಧ ವಾಗಿ ನಿಯಂತ್ರಣಗೊಳ್ಳುತ್ತದೆ. ಶರಣಸ್ಥಲದ ಕೊನೆಯ ಭಾಗದಲ್ಲಿ ನಿಂತಿರಲು ಇನ್ನೂ ಹೆಚ್ಚಿನ ಪ್ರಗತಿ ಕಂಡುಬರುತ್ತದೆ. ಪರತತ್ವದ ಬಗೆಗೆ ನಿಶ್ಚಯವಾದ ಅನುಭವಜ್ಞಾನ ವೇದ್ಯವಾಗುತ್ತದೆ. ಆಕಾಶತತ್ವ ಜಾಗ್ರತವಾಗಿ ಸ್ವಾನುಭಾವ ಸಿದ್ಧಿಯು ಇಲ್ಲಿ ನೆಲೆಗೊಳ್ಳುವದು. ತೋಂಟದಾರ್ಯರ ಸ್ಥಲಕಟ್ಟಿನ ವಚನಗಳನ್ನು ನಿರೀಕ್ಷಿಸಿದಾಗ ಅವರು ಶಿವಯೋಗಸಿದ್ಧರೆಂದೂ, ದಿವ್ಯಜ್ಞಾನಿಗಳೆಂದೂ ಅರಿ ವಾಗುತ್ತದೆ. ಅಲ್ಲದೆ ಅವರು ಪ್ರಾಣಲಿಂಗಿ ಶರಣಸ್ಥಳಗಳ ಮಧ್ಯದಲ್ಲಿ ನಿಂತು ವಚನಗಳನ್ನು ಹಾಡಿರಬೇಕೆ ?, ಎಂಬ ವಿಚಾರ ಮೂಡುತ್ತದೆ. ಶರಣಸ್ಥಲದ ಕೊನೆಯಲ್ಲಿ ಶರಣನು ಲಿಂಗವೆ ಪತಿಯಾಗಿ ತಾನೆ ಸತಿಯಾಗುತ್ತಾನೆ. ಅನ್ಯ

ವನರಿಯದೆ ಪಂಚೇಂದ್ರಿಯಗಳ ವ್ಯವಹಾರವೆಲ್ಲ ತನ್ನ ವಶವಾಗುತ್ತವೆ. ಅರುವಿನೊಳು ನಿಬ್ಬೆರಗಾಗಿ ಪರಶಿವನೊಡನೆ ಸಾಮರಸ ಸುಖದೊಳಗೆ ಅಗಲ ದಂತಿರುವನು. (ತೋಂಟದ ಸಿದ್ಧಲಿಂಗ ವಚನ ೪೪೩) ಕೊನೆಯಲ್ಲಿ ಐಕ್ಯಸ್ಥಲ ವನ್ನೇರಿ ಕ್ಷುತ್-ಪಿಪಾಸೆ-ಶೋಕ-ಮೋಹ-ಜರಾ-ಮರಣವೆಂಬ ಷಡೂರ್ಮಿಗಳ ಸುಳಿವಿಲ್ಲದೆ, ಕಾಮ-ಕ್ರೋಧ-ಲೋಭ-ಮೋಹ-ಮದ-ಮತ್ಸರವೆಂಬ ಷಡುವರ್ಗಗಳ ದಂದುಗವಿಲ್ಲದೆ, ನಾಹಂ-ಕೋಹಂ-ಸೋಹಂ ಎಂಬ ಭಾವರಹಿತ ಸ್ಥಿತಿಯಲ್ಲಿ ನಿಲ್ಲುತ್ತಾನೆ. ಷೋಡಶೋಪಚಾರರಹಿತನಾಗಿ, ಅಗ್ನಿಕರ್ಪುರ ಸಂಯೋಗದಿಂದ ಕರ್ಪುರ ಗುಣವಳಿದು ಅಗ್ನಿಯಾದಂತೆ ಲಿಂಗವ ನೆನೆನೆನೆದು ಲಿಂಗವೇ ತಾನಾ ಗಿರುವನು. (Ibid ವ. ೫೭೭)

ಸಿದ್ಧಲಿಂಗ ಶಿವಯೋಗಿಗಳು ವೀರಶೈವ ಶಿವಯೋಗವನ್ನು ವಿವರಿಸುತ್ತ ಮಂತ್ರ–ಲಯ-ಹಠ-ರಾಜಯೋಗ ಮುಂತಾದ ಯೋಗಪರಂಪರೆ ಸಾಧನಾ ದೃಷ್ಟಿ ಯಿಂದ ತೊಡಕನ್ನೊಡ್ಡುವಂಥದೆಂದು ಕಂಡು ಹಿಡಿದಿದ್ದಾರೆ. ಇನ್ನುಳಿದ ಯೋಗಾನುಸಂಧಾನದಲ್ಲಿ ಯಮ–ನಿಯಮ–ಆಸನ–ಪ್ರಾಣಾಯಾಮ-ಪ್ರತ್ಯಾಹಾರ ಧಾರಣ–ಧ್ಯಾನ–ಸಮಾಧಿಗಳೆಂಬ ಅಷ್ಟಾಂಗಗಳ ಉಗ್ರ ಸಾಧನೆಯ ಕ್ರಮ ಹುದು ಗಿದೆ. ಅಲ್ಲಿ ಕಟ್ಟು-ನಿಟ್ಟಾದ ನಿಯಮ ಪರಿಪಾಲನೆಗೆ ಅಗ್ರಸ್ಥಾನವಿದೆ. ಪ್ರಾಣಾ ಯಾಮದಿಂದ ಪ್ರಾಣ ನಿಯಂತ್ರಣಗೊಳಿಸುವಾಗ ಒಮ್ಮೊಮ್ಮೆ ಪ್ರಾಣಕ್ಕೆ ಅಪಾಯ ಸಂಭವಿಸಬಹುದು. ಕುಂಡಲಿನಿ ಶಕ್ತಿಯನ್ನು ಜಾಗ್ರತಗೊಳಿಸಿ ಷಟ್‌ಚಕ್ರಗಳ ಮುಖಾಂತರ ಅದನ್ನು ಸಹಸ್ರಾರು ಚಕ್ರಕ್ಕೆ ತಿರುಗಿಸುವ ಪ್ರಯತ್ನದಲ್ಲಿ ಸಾಧಕನು ಒಮ್ಮೊಮ್ಮೆ ವ್ರತಚ್ಯುತನೂ ಆಗುವ ಸಂಭವ ಉಂಟು. ಈ ಯೋಗಗಳು ಸುಲಭ ಸಾಧ್ಯವಲ್ಲ, ಆಬಾಲ ವೃದ್ಧರಿಗೆ ನಿಲುಕುವವಲ್ಲ. ಅಂತೆಯೇ ಬಸವಾದಿ ಪ್ರಮಥರು ಪರಂಪರೆಯ ಅಷ್ಟಾಂಗಯೋಗದಲ್ಲಿಯ ಪೂರ್ವದ ಐದಂಗಗಳನ್ನು ಬಿಟ್ಟು ಉತ್ತರಯೋಗವೆನಿಸಿದ ಧಾರಣ–ಧ್ಯಾನ–ಸಮಾಧಿಗಳನ್ನು ವಿಶೇಷವಾಗಿ ಬಳಸಿಕೊಂಡು ಶಿವಯೋಗಾನುಸಂಧಾನದ ಕ್ರಮವನ್ನಾಗಿ ವಿನಿಯೋಗಿಸಿಕೊಂಡರು. ಶಿವಭಕ್ತನು ಪ್ರತಿನಿತ್ಯ ಆಚರಿಸಬೇಕಾದ ಭಕ್ತಿಯುತವಾದ ಲಿಂಗಪೂಜೆಯೇ ಮಂತ್ರಯೋಗ–ಲಯಯೋಗ–ಹಠಯೋಗ–ರಾಜಯೋಗಗಳನ್ನೊಳಗೊಂಡು ಶಿವ ಯೋಗವಾಗುವಂತೆ ಮಾರ್ಪಡಿಸಿಕೊಂಡರು. ಶಿವಯೋಗ ಲೌಕಿಕ, ಪಾರಮಾರ್ಥಿಕ ಜೀವನಗಳ ನಡುವಿನ ಸೇತುವೆಯಾಯಿತು. ಶರಣರ ನಿತ್ಯ ಲಿಂಗಾರ್ಚನೆಯು ಕರ್ಮ – ಭಕ್ತಿ – ಜ್ಞಾನಗಳ ಸಂಗಮವಾಯಿತು. ಅದನ್ನು ಕುರಿತು ಚನ್ನ ಬಸವಣ್ಣನವರು,

'ಮಂತ್ರಯೋಗ ಹಠಯೋಗ ಲಯಯೋಗ ಜ್ಞಾನಯೋಗ
ಇಂತೀ ಎಲ್ಲ ಯೋಗವನಱಿದು ಮಱೆದು

ಭಕ್ತಿಯೋಗದ ಮೇಲೆ ನಿಂದು,
ರಾಜಯೋಗದ ಮೇಲೆ ನಡೆವ ನುಡಿವ ಕಾಣಿರೋ.... !'

(ಚೆನ್ನಬಸವಣ್ಣ ವ ೧೪೫೬ ಕ. ಎ. ವಿ. ಪ್ರಕಟನೆ)

ಎಂದು ನಿರೂಪಿಸಿದ್ದಾರೆ. ಶಿವಯೋಗ ಸಾಧಕನು ಭಕ್ತಿಯೋಗವಿಡಿದು ರಾಜಯೋಗವೆನ್ನಿಸಿದ ಶಿವಯೋಗವನ್ನು ಕಾಣಬೇಕೆಂದಿದ್ದಾರೆ. ಈ ವಚನದಲ್ಲಿ 'ರಾಜ' ಯೋಗವೆಂದರೆ ಶಿವಯೋಗ. ಪ್ರತಿಯೊಬ್ಬನಲ್ಲಿ ಸುಪ್ತವಾಗಿರುವ ಭಾವನಾಶಕ್ತಿ, ಕ್ರಿಯಾಶಕ್ತಿ, ಜ್ಞಾನಶಕ್ತಿಗಳನ್ನು ಜಾಗ್ರತಗೊಳಿಸಿ ಅವುಗಳ ಸರಿಸಮಾನ ವಿಕಾಸಕ್ಕೆ ಶಿವಯೋಗ ಸಾಧನೆಯಲ್ಲಿ ತುಂಬ ಅವಕಾಶವಿದೆ. ಷಟ್‌ಸ್ಥಲಾನುಸಂಧಾನದಿಂದ ಕ್ರಿಯಾಶುದ್ಧಿ, ಜ್ಞಾನಶುದ್ಧಿ, ಭಾವಶುದ್ಧಿಯುಂಟಾಗಿ ಸಮ್ಯಕ್ ಜ್ಞಾನವಳವಟ್ಟು ಸಹಜ ನಿರ್ಮಲ ಸಮರಸ ಸಮಾಧಿಯನ್ನು ಸಾಧಿಸುವುದೇ ಶಿವಯೋಗದ ಅಂತಿಮ ಗುರಿ.

ಸಿದ್ಧಲಿಂಗ ಶಿವಯೋಗಿಗಳು ಹಿಂದಿನ ಯೋಗ ಪ್ರಕಾರಗಳ ರಹಸ್ಯವನ್ನೆಲ್ಲ ಗ್ರಹಿಸಿ ಸಾರವತ್ತಾದ ಶಿವಯೋಗದ ನಿಲುಕಡೆಗೆ ನಿಂತಿದ್ದಾರೆ. ರಾಜಯೋಗದ ಕಠಿಣತರವಾದ ಅಷ್ಟಾಂಗ ಕ್ರಮವನ್ನು ಮಾರ್ಮಿಕ ರೀತಿಯಿಂದ ಶಿವಯೋಗಕ್ಕೆ ತಿರುಗಿಸಿಕೊಂಡಿದ್ದಾರೆ. ಹೊಸ ಮೆರುಗನ್ನಿತ್ತಿದ್ದಾರೆ. ಆಬಾಲ ವೃದ್ಧರಿಗೂ ಸುಲಭ ಸಾಧ್ಯವಾಗುವ ಕ್ರಮವನ್ನು ಕಂಡರಿಸಿದ್ದಾರೆ. ಅಷ್ಟಾಂಗಯೋಗದ ಪೂರ್ವಭಾಗವನ್ನು ಲಿಂಗಾರ್ಚನೆಯಲ್ಲಿ ಸೆರೆ ಹಿಡಿದಿದ್ದಾರೆ. ಉತ್ತರ ಭಾಗದ ಧಾರಣ–ಧ್ಯಾನ–ಸಮಾಧಿಗಳನ್ನು ಇಷ್ಟಲಿಂಗ ಧಾರಣ, ಪ್ರಾಣಲಿಂಗ ಧ್ಯಾನ, ಭಾವಲಿಂಗ ಸಮಾಧಿಯನ್ನಾಗಿ ಪರಿವರ್ತಿಸಿ ಶಿವಯೋಗ ರಹಸ್ಯವನ್ನೇ ತೆರೆದಿಟ್ಟಿದ್ದಾರೆ.

ಅಷ್ಟಾಂಗದಲ್ಲಿಯ ಮೊದಲಿನ ಯಮಾದಿ ಪಂಚಕವೈದನ್ನು ಪೂರ್ವಯೋಗವಾಗಿ ವಿವರಿಸಿದ್ದಾರೆ. ತೋಂಟದಾರ್ಯರ ಅಭಿಮತದಂತೆ 'ಅನೃತ, ಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ ಇಂತಿವೈದನು ಬಿಟ್ಟು ಲಿಂಗಪೂಜೆ ಮಾಡುವುದು' ಯಮಯೋಗ. 'ಬ್ರಹ್ಮಚಾರಿಯಾಗಿ, ನಿರಪೇಕ್ಷನಾಗಿ ಆಗಮಧರ್ಮಂಗಳಲ್ಲಿ ನಡೆವವನು ಶಿವನ ನಿಂದೆಯ ಕೇಳದಿರಬೇಕು'; ಇಂದ್ರಿಯಗಳನ್ನು ನಿಗ್ರಹಿಸಿ ಮಾನಸ, ವಾಚಕ, ಉಪಾಂಶಿಕವಾಗಿ 'ತ್ರಿಕರಣದಲ್ಲಿ ಪ್ರಣವ ಪಂಚಾಕ್ಷರಿಯನ್ನು ಸ್ಮರಿಸುತ್ತಿರಬೇಕು'; ಶುಚಿಯಾಗಿರಬೇಕು; ಅಸುಚಿತ್ತವ ಬಿಟ್ಟು ವಿಭೂತಿ ರುದ್ರಾಕ್ಷಿಯ ಧರಿಸಿ ಶಿವಲಿಂಗಾರ್ಚನಾ ತತ್ಪರನಾಗಬೇಕು; ಪಾಪಕ್ಕೆ ಭೀತನಾಗಿರಬೇಕು; ಇದುವೆ ನಿಯಮಯೋಗ. 'ಸಿದ್ಧಾಸನ, ಪದ್ಮಾಸನ, ಸ್ವಸ್ತಿಕಾಸನ, ಅರ್ಧಚಂದ್ರಾಸನ, ಪರ್ಯಂಕಾಸನಗಳಲ್ಲಿ ಒಂದನ್ನು

ಆಯ್ಕೆ ಮಾಡಿ, ಸ್ಥಿರಚಿತ್ತನಾಗಿ ಕುಳಿತು ಶಿವಲಿಂಗಾರ್ಚನೆಯನ್ನು ಮಾಡು ವದು' ಆಸನಯೋಗ. ಇಲ್ಲಿ ಸಾಧಕನು ಆಸನಾರೂಢನಾಗಿ ಲಿಂಗಾರ್ಚನೆಗೆ ಕುಳಿತನೆಂದರೆ ಅವನ ಎದೆ, ಕುತ್ತಿಗೆ, ತಲೆಗಳು ನೇರವಾಗಿ, ಸ್ಥಿರವಾಗಿ ಉಳಿ ಯುತ್ತವೆ. ಒಂದೇ ವಾಯುವು ದಶವಾಯುಗಳಾಗಿ ದೇಹದಲ್ಲಿ ಸಂಚರಿಸುತ್ತವೆ. ಕಾರಣ ಈಡ ಪಿಂಗಳಗಳಲ್ಲಿ ಚರಿಸುವ ರೇಚಕ ಪೂರಕಗಳ ರಹಸ್ಯವನ್ನರಿತು ಮನ ಪವನಗಳ ಮೇಲೆ ಲಿಂಗವ ಸಂಬಂಧಿಸಿ ಮನ-ಪವನ-ಪ್ರಾಣಗಳನ್ನು ಲಿಂಗದೊಳಗೆ ಬೆರಸಿ ಲಿಂಗಸ್ವರೂಪಗೊಳಿಸಬೇಕು. ವಾಯು ಪ್ರಾಣಿಯಾಗಿರುವ ಸ್ಥಿತಿಯನ್ನು ಕೆಡಿಸಿ, ಲಿಂಗಪ್ರಾಣಿಯಾಗಿ 'ಹೃದಯ ಕಮಲ ಮಧ್ಯದಲ್ಲಿ ಪ್ರಣವ ವನ್ನುಚ್ಚರಿಸುತ್ತ ಪರಶಿವ ಧ್ಯಾನದಲ್ಲಿ ತರಹರವಾಗಿಪ್ಪುದು ಪ್ರಾಣಾಯಾಮ ಯೋಗ. ಇದು ಸಿದ್ಧಲಿಂಗ ಶಿವಯೋಗಿಗಳು ನಿರೂಪಿಸುವ ಪೂರ್ವಯೋಗ. (ತೋಂಟದ ಸಿದ್ಧಲಿಂಗ ವ. ೩೬೪) ಇನ್ನು ಉತ್ತರಯೋಗದಲ್ಲಿ ಗುರು ಕರಸ್ಥಲಕ್ಕೆ ಕರುಣಿಸಿದ ಶಿವಲಿಂಗ ಪರಮಾತ್ಮಲಿಂಗ ಚಿಹ್ನವೆಂದರಿಯಬೇಕು. ಆಯಾ ಚಕ್ರ ಸ್ಥಾನಂಗಳಲ್ಲೆಲ್ಲ ಆ ಶಿವಲಿಂಗ ಮೂರ್ತಿಯನ್ನು ಆಹ್ವಾನ ವಿಸರ್ಜನೆಯಿಲ್ಲದೆ ಧ್ಯಾನಿಸಬೇಕು. ಅದುವೆ ಧ್ಯಾನಯೋಗ. ಆ ಲಿಂಗವ ಭಾವ, ಮನ, ಕರಣ ಮುಖ್ಯವಾಗಿ ಸರ್ವಾಂಗದಲ್ಲಿ ಧರಿಸುವದು ಧಾರಣಯೋಗ. ಪ್ರಾಣಕ್ಕೆ ಶಿವ ಲಿಂಗ ಕಳೆಯ ಸಂಬಂಧಿಸಿ ಇಷ್ಟ-ಪ್ರಾಣ-ಭಾವವೆಂಬ ಲಿಂಗತ್ರಯವನ್ನು ಏಕೀಕರಿಸಿ ಪರಂಜ್ಯೋತಿ ಸ್ವರೂಪವಾದ ಮಹಾಲಿಂಗದೊಳಗೆ ಆ ಪರಶಿವತತ್ವ ದೊಡನೆ ಸಮರಸಗೊಂಡು ಭಿನ್ನವಿಲ್ಲದಿರುವುದೇ ಸಮಾಧಿಯೋಗ. ಇದುವೇ ಲಿಂಗಾಂಗಯೋಗ. (Ibid)

ಸಿದ್ಧಲಿಂಗ ಶಿವಯೋಗಿಗಳು ಲಿಂಗವಿರಹಿತವಾಗಿ ಮಾಡುವ ಅಷ್ಟಾಂಗ ಯೋಗವನ್ನು ಕರ್ಮಯೋಗವೆಂದು ಕರೆದಿರುವರು. ವೀರಮಾಹೇಶ್ವರರ ಲಿಂಗಾನುಸಂಧಾನದ ಕ್ರಮವನ್ನು ಸೂಚ್ಯವಾಗಿ ನಿರೂಪಿಸಿರುವರು. ಬ್ರಹ್ಮ ರಂಧ್ರದಲ್ಲಿ ನಾದಚೈತನ್ಯರೂಪವಾಗಿ ರಾರಾಜಿಸುವ ಪರಮ ಚಿತ್ಕಳೆಯನು ಭಾವ-ಮನ-ಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿರುತ್ತಾನೆ. ಅದು 'ಭಾವದಲ್ಲಿ ಸತ್‌ಸ್ವರೂಪಾಗಿ' ಭಾವಲಿಂಗವೆನಿಸುವದು; 'ಪ್ರಾಣದಲ್ಲಿ ಚಿತ್‌ಸ್ವರೂಪಾಗಿ' ಪ್ರಾಣಲಿಂಗವೆನಿಸುವದು; 'ಕರದಲ್ಲಿ ಆನಂದರೂಪಾಗಿ' ಇಷ್ಟಲಿಂಗವೆನಿಸುವದು. ದೃಷ್ಟಿಯಿಂದ ಇಷ್ಟಲಿಂಗವನ್ನು, ಮನಜ್ಞಾನದಿಂದ ಪ್ರಾಣಲಿಂಗವನ್ನು, ಭಾವಜ್ಞಾನ ದಿಂದ ಭಾವಲಿಂಗವನ್ನು ಗ್ರಹಿಸಿ ಲಿಂಗದೊಡನೆ ಕೂಡಿ, ಲಿಂಗವೆ ತಾನು, ತಾನೆ ಲಿಂಗವಾಗಿ ವಿರಾಜಿಸುತ್ತಿರುವುದೇ ಶಿವಯೋಗ. (Ibid ವ. ೩೬೪) ಇದರಿಂದ ಜನನ ಮರಣಗಳು ಕಳಚಿ ಹೋಗಿ ಮಾಯಾಮೋಹಗಳು ಹೇಳಹೆಸರಿಲ್ಲದಂತಾ ಗುತ್ತವೆ. ಈ ಶಿವಯೋಗದ ನೆಲೆಕಲೆಯನ್ನು ಚಾಮರಸಕವಿ ಬಹು ಸುಂದರವಾಗಿ

ತಿಳಿಯಾದ ಭಾಷೆಯಲ್ಲಿ ಬಿತ್ತರಿಸುತ್ತಾನೆ :

ಆಲಿ ನಿಂದಡೆ ಸುಳಿದು ಸೂಸುವ
ಗಾಳಿ ನಿಲುವದು ಗಾಳಿ ನಿಲೆ ಮನ
ಮೇಲೆ ನಿಲುವುದು ಮನವು ನಿಂದಡೆ ಬಿಂದು ನಿಂದಿಹುದು
ಲೀಲೆಯಿಂದಾ ಬಿಂದು ನಿಂದಡೆ
ಕಾಲಕರ್ಮವಗೆದ್ದು ಮಾಯೆಯ
ಹೇಳಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ

['ಪ್ರಭುಲಿಂಗಲೀಲೆ' (ಚಾಮರಸ ಕೃತ) XVIII ೨೨]

ಮುಗ್ಗಿಯ ಮಾಯಿದೇವರ ಮಹದೈಪುರೀಶ್ವರ ಶತಕವು (ಪದ್ಯ ೫೩) ಇದೇ ಭಾವವನ್ನು ಪಡಿಮೂಡಿಸುತ್ತದೆ. ಲಿಂಗದೊಳಿಟ್ಟ ದೃಷ್ಟಿ, ನಿಜದೃಷ್ಟಿಯೊಳಿಟ್ಟ ಮನ, ಮನಸ್ಸಿನೊಳು ಹಿಂಗದೆನಿಂದ ಭಾವ, ಆದರಲ್ಲಿ ನೆಲೆಗೊಂಡ ಶಿವಾತ್ಮಲಿಂಗ, ಆ ಲಿಂಗದೊಳಿದ್ದು ನಿತ್ಯ ಸುಖಿಯಾಗಿ ವಿರಾಜಿಸುವವಗೆ ಬಾಹ್ಯ ಕರ್ಮಗಳ ಗೊಡವೆ ಬೇಕಿಲ್ಲವೆಂದು ಅದು ಉಪದೇಶಿಸುತ್ತದೆ.

ತೋಂಟದಾರ್ಯರಿಗೆ ಪ್ರಣವ ಪಂಚಾಕ್ಷರಿ ಮಂತ್ರ ಪ್ರಾಣಪದಕವಾಗಿ ಪರಿಣಮಿಸಿದೆ. ಅದು ಅವರ ತನು-ಮನ-ಭಾವಗಳಲೆಲ್ಲ ತುಂಬಿಕೊಂಡು ಮಂತ್ರ ಪಿಂಡವಾಗಿ ರೂಪುಗೊಂಡಿದೆ. ಶಿವಯೋಗ ಸಾಧನೆಯಲ್ಲಿ ನಾದ-ಬಿಂದು-ಕಳೆಯ ಮಹತಿಯನ್ನು ತಿಳಿಯಬೇಕು; ಆರಕ್ಷರ ಮಂತ್ರದ ರಹಸ್ಯವನ್ನರಿಯಲಾಗದು. ಆರಕ್ಷರಕ್ಕೆ ಮೂಲವಾದ ಪ್ರಣವವ ತಿಳಿದಲ್ಲದೆ ನಾದ ತಲೆದೋರದು; ನಾದದ ಬೆಳಗಿನ ಕಳೆಯನ್ನು ಕಂಡಲ್ಲದೆ ರಾಜಶಿವಯೋಗಿಯಾಗುವದು ಅಸಾಧ್ಯ— ಎಂದು ಮಾರ್ಮಿಕವಾಗಿ ತಿಳಿಸಿ ಶಿವಬೀಜವಾಗಿ ಅವತರಿಸಿದ ಮಹಾಮಹಿಮನಿಗೆ ಮಾತ್ರ ಈ ಶ್ರೇಷ್ಠವಾದ ಶಿವಯೋಗವು ಸಾಧ್ಯವಾಗುವದೆಂದಿದ್ದಾರೆ. (ತೋಂಟದ ಸಿದ್ಧಲಿಂಗ ವ. ೩೭೨).

ಸದಮಲ ದಿವ್ಯದೃಷ್ಟಿಯನ್ನು ಪಡೆದಿರುವ ಸಿದ್ಧಲಿಂಗ ಶಿವಯೋಗಿಗಳು ತಮ್ಮ ಸಹಜ ಮಹಾನುಭಾವದಿಂದ ಪೂಜಾ ಸಮಯದ ಸಂಪತ್ತನ್ನು ಸೂರೆ ಗೊಂಡಿದ್ದಾರೆ. ಉದಯದ ಪೂಜೆ ಉತ್ಪತ್ತಿಗೆ ಬೀಜವೆಂದೂ, ಮಧ್ಯಾಹ್ನದ ಪೂಜೆ ಸ್ಥಿತಿಗತಿಯ ಸಂಸಾರಕ್ಕೆ ಬೀಜವೆಂದೂ, ಅಸ್ತಮಾನದ ಪೂಜೆ ಪ್ರಳಯಕ್ಕೆ ಬೀಜವೆಂದೂ, ಅರುಹಿದ್ದಾರೆ. ಈ ಉದಯ-ಮಧ್ಯಾಹ್ನ-ಅಸ್ತಮಾನವ ಕಳೆದು ನಿರಂತರ ಮಾಡುವ ಪೂಜೆ ನಿತ್ಯ ನಿರ್ಮಳ ಪೂಜೆಯೆನಿಸಿ ಪರಮಾತ್ಮನಲ್ಲಿ ಲೀನವಾಗಲು ಕಾರಣೀಭೂತವಾಗುವದು. ಖಂಡಿತಕ್ಕಿಂತ ಅಖಂಡ ಲಿಂಗಪೂಜೆ

ಧ್ಯಾನಗಳು ಶ್ರೇಯಸ್ಕರವೆಂಬುದು ಶಿವಯೋಗಿಗಳ ಉಪದೇಶ. (ತೋಂಟದ ಸಿದ್ಧಲಿಂಗ ವ. ೫೬೨) ಅಲ್ಲದೆ ತ್ರಿಕಾಲದ ಲಿಂಗಪೂಜಾ ಸಂಪತ್ತು ತನುತ್ರಯ, ಮಲತ್ರಯ, ಅಹಂಕಾರ ತ್ರಯಗಳನ್ನು ನುಂಗಿ ಶಿವಯೋಗಿಯನ್ನಾಗಿ ಮಾರ್ಪಡಿಸುವ ಪ್ರಮಾಣವನ್ನಿತ್ತಿದ್ದಾರೆ.

ಉದಯಮುಖದ ಜ್ಯೋತಿ ಶರೀರತ್ರಯವ ನುಂಗಿತ್ತು
ಮಧ್ಯಾಹ್ನಮುಖದ ಜ್ಯೋತಿ ಮಲತ್ರಯಂಗಳ ನುಂಗಿತ್ತು
ಅಸ್ತಮಮುಖದ ಜ್ಯೋತಿ ಅಹಂಕಾರತ್ರಯಂಗಳ ನುಂಗಿತ್ತು
ಈ ಮೂಱು ಪ್ರಕಾರದ ಜ್ಯೋತಿಯ ಅಖಂಡ ಜ್ಞಾನಜ್ಯೋತಿ ನುಂಗಿತ್ತು
ಅಖಂಡ ಜ್ಞಾನಜ್ಯೋತಿ ಅವಿರಳ ಬ್ರಹ್ಮವನೆಯ್ದಿ ನುಂಗಿ ಅಲ್ಲಿಯೆ ಅಡಗಿತ್ತು
ಅದು ಅಡಗಿದಲ್ಲಿ ತಾನಡಗಿದಾತನೆ ಶಿವಯೋಗಿ ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ !

(Ibid ವ. ೫೬೩)

ಈ ವಚನದಲ್ಲಿ 'ಮುಖ' ಎಂಬ ಪದವು ಸಮಯ, ಕಾಲವೆಂಬ ಅರ್ಥದಲ್ಲಿ ಬಳಸಲಾಗಿದೆ.

ಇಷ್ಟ-ಪ್ರಾಣ-ಭಾವಲಿಂಗಗಳನ್ನು ಪೂಜಿಸಿ ಪಡೆಯಬಹುದಾದ ಅವಿರಳ ಅರಿವಿನ ಸಂಕೇತವನ್ನು ಸಿದ್ಧಲಿಂಗೇಶ್ವರರು ರಮ್ಯವಾಗಿ ತಿಳಿಸಿದ್ದಾರೆ.

"....ಇಷ್ಟಲಿಂಗವನಱಿದಡೆ ಅನಿಷ್ಟ ಪರಿಹಾರವಾಗಬೇಕು ನೋಡಾ
ಪ್ರಾಣಲಿಂಗವನಱಿದಡೆ ಪ್ರಪಂಚುನಾಸ್ತಿಯಾಗಬೇಕು ನೋಡಾ
ಇಷ್ಟಪ್ರಾಣವು ಒಂದೆಯೆಂದಱಿದು ಒಡವೆರಸಿದ ಬಳಿಕ ಉಪಾಧಿಯಿಲ್ಲ
ಜಾಗೃತ ಸ್ವಪ್ನ ಸುಸ್ಪುಪ್ತಿಯೆಂಬ ತ್ರಿವಿಧಾವಸ್ಥೆಯಲ್ಲಿ ಲಿಂಗವಲ್ಲದೆ
ಮತ್ತೇನನೂ ತೋರಲಾಗದು........"(Ibid ೩೬೨)

ಸದಾಕಾಲವೂ ಲಿಂಗವನ್ನು ಪೂಜಿಸುವ ಶಿವಯೋಗಿಗೆ ಅಂಗಕಿರಣಗಳೆಲ್ಲ ಲಿಂಗ ಕಿರಣಗಳಾಗಿ ಪರಿಣಮಿಸುವವು. ತನುಲಿಂಗವಾದ ಬಳಿಕ ವಿಕಾರದಿಂದ ಮುಕ್ತನಾಗುವನು. ಮನ ಲಿಂಗವಾದ ಬಳಿಕ ಮಾಯೆಯಿಂದ ದೂರಾಗುವನು. ಭಾವ ಲಿಂಗವಾದ ಬಳಿಕ ಭ್ರಮೆಯಿಲ್ಲದಂತಾಗುವನು. ಕಾಯಲಿಂಗವಾದ ಬಳಿಕ ಕಳ

ವಳವಿಲ್ಲ. ಜೀವಭಾವ ಲಿಂಗವಾದ ಬಳಿಕ ಉಪಾಧಿಯಿಲ್ಲ. ಪ್ರಾಣಲಿಂಗವಾದ ಬಳಿಕ ಪ್ರಳಯವಿಲ್ಲ (Ibid ವ ೫೪೬) ಕೇವಲ ಸದಮಲಜ್ಞಾನವು ಸುತ್ತೆಲ್ಲ ಪಸರಿಸುವದು.

ಇಂದ್ರಿಯ ಸನ್ನಿಕರ್ಷಜನ್ಯ ಜ್ಞಾನದಿಂದ ಮಾನವನಿಗೆ ಅನೇಕ ಅನುಭವಗಳಾಗುವವಷ್ಟೇ ! ಹಾಗೆಯೇ ಪರಿಶುದ್ಧವಾದ ಅತೀಂದ್ರಿಯ ಜಾಗ್ರತೆಯಿಂದ ಅನುಭಾವಿಗಳಿಗೆ ಯೋಗಿಗಳಿಗೆ ವಿವಿಧ ಪ್ರಕಾರದ ದಿವ್ಯಾನುಭವಗಳಾಗುತ್ತವೆ. ಈ ಅನುಭವಗಳು ಅಂತರಂಗದ ಚಿತ್‌ಪ್ರಭಾಚೈತನ್ಯದ ಸ್ಫುರಣಾತ್ಮಕ ರಶ್ಮಿಗಳು. ಸಿದ್ಧಲಿಂಗ ಶಿವಯೋಗಿಗಳು ಹೃದಯ ಚಕ್ರದಲ್ಲಿ, ಅಧೋಮುಖವಾಗಿರುವ ಅಷ್ಟದಳ ಕಮಲಗಳನ್ನು ಮೆಟ್ಟಿ ಚರಿಸುವ ಹಂಸನ ರಹಸ್ಯವನ್ನು ಸುಂದರವಾಗಿ ವಿವರಿಸಿದ್ದಾರೆ. ಜೀವಹಂಸನು ಪೂರ್ವದಳಕ್ಕೇರಲು ಮಾನವನು ಗುಣಿಯಾಗಿ ಅಗ್ನಿದಳಕ್ಕೇರಲು ಕ್ಷುಧಾರ್ತನಾಗಿ, ದಕ್ಷಿಣದಳಕ್ಕೇರಲು ಕ್ರೋಧಿಯಾಗಿ, ನೈಋತ್ಯ ದಳಕ್ಕೇರಲು, ಅಸತ್ಯನಾಗಿ, ವರುಣ ದಳಕ್ಕೇರಲು ನಿದ್ರಾಮುದ್ರಿತನಾಗಿ, ವಾಯವ್ಯ ದಳಕ್ಕೇರಲು ಸಂಚಲನಾಗಿ, ಉತ್ತರ ದಳಕ್ಕೇರಲು ಧರ್ಮಿಯಾಗಿ, ಈಶಾನ್ಯ ದಳಕ್ಕೇರಲು ಕಾಮಾತುರನಾಗಿ ಇರುವನು. ಈ ಹಾರುವ ಹಂಸನನ್ನು ಸ್ಥಿರಗೊಳಿಸಲು ಹೃದಯ ಚಕ್ರದ ಅಷ್ಟದಳ ಮಂಟಪದ ಅಷ್ಟ ಕೋಣೆಯೊಳಗೆ ಅಷ್ಟಲಿಂಗ ಕಳೆಯನ್ನು ಪ್ರತಿಷ್ಠಾಪಿಸಬೇಕು. ಹಂಸನನ್ನು ನಟ್ಟನಡು ಮಧ್ಯದಲ್ಲಿ ತಂದು ನಿಲ್ಲಿಸಿದರೆ ಮೋಕ್ಷಮಾರ್ಗದಲ್ಲಿ ಅಭೀಪ್ಸೆಯುಳ್ಳವನಾಗುವನು. (Ibid ವ. ೩೫೨) ಸಿದ್ಧಲಿಂಗೇಶ್ವರರ ಅನುಭಾವ ಅಪಾರವಾದುದು. ಅವರು '........ ಅಮೃತಬಿಂದುವ ಸೇವಿಸಿ ನಿತ್ಯಾನಿತ್ಯವ ಗೆದ್ದು ನಿರ್ಮಲ ನಿರಾವರಣ'ರಾಗಿದ್ದಾರೆ. (Ibid ವ ೩೮೦) 'ಜ್ಞಾನಜ್ಯೋತಿಯ ಉದಯ ಭಾನುಕೋಟಿ ಸೂರ್ಯರ ಬೆಳಕನ್ನು' ಕಂಡಿದ್ದಾರೆ. (Ibid ವ ೪೯೩) ಆಜ್ಞಾಚಕ್ರದಲ್ಲಿ ಅವಿರಳ ಸುಜ್ಞಾನದೊಳಗೆ ಅಮೃತಮಯ ಲಿಂಗದ ದರ್ಶನ ಪಡೆದಿದ್ದಾರೆ. (Ibid ವ ೫೪೧) 'ಸಹಸ್ರದಳದಲ್ಲಿ ಸಚ್ಚಿದಾನಂದ ನಿತ್ಯ ಪರಿಪೂರ್ಣನಾದ ಅನಂತಕೋಟಿ ಸೋಮ ಸೂರ್ಯರ ಬೆಳಗನ್ನು' ಅನುಭವಿಸಿದ್ದಾರೆ.

ಇಂತು ಶಿವಯೋಗಾನಂದದಲ್ಲಿ ವಿಹರಿಸುತ್ತಿದ್ದ ತೋಂಟದಾರ್ಯರು ಮಹಾಮಹಿಮರಾದ ಬಸವಾದಿ ಪ್ರಮಥರನ್ನು ಎದೆದುಂಬಿ ಹಾಡಿದ್ದಾರೆ. ಶರಣರ ಆಚರಣೆ ಅನುಭಾವಗಳಿಂದ ವಿಶೇಷವಾಗಿ ಪ್ರಭಾವಿತರಾಗಿದ್ದಾರೆ. ಅವರ ಪರಮ ಪ್ರಸಾದದಿಂದ ಸರ್ವಾಂಗಲಿಂಗಿಗಳಾಗಿ ಪರಮಾನಂದ ಪ್ರಭಾಮಯನಾದೆನೆನ್ನುತ್ತಾರೆ

'ಬಸವಣ್ಣನ ಪ್ರಸಾದದಿಂದ ಭಕ್ತಿ ಜ್ಞಾನ ವೈರಾಗ್ಯ
ಸಂಪನ್ನನಾದೆನಯ್ಯ

ಚೆನ್ನಬಸವಣ್ಣನ ಪ್ರಸಾದದಿಂದ ಷಟ್‌ಸ್ಥಲಜ್ಞಾನ
ಸಂಪನ್ನನಾದೆನಯ್ಯ
ಪ್ರಭುದೇವರ ಪ್ರಸಾದದಿಂದ ಪರಶಿವ ತತ್ವಸ್ವರೂಪವೇ
ಎನ್ನ ಸ್ವರೂಪವೆಂದರಿದು ಸಮಸ್ತ ಸಂಸಾರ ಪ್ರಪಂಚವ
ಕೊಡಹಿದೆನು ನೋಡ।
ನೀಲಲೋಚನೆಯಮ್ಮನ ಪ್ರಸಾದದಿಂದ ನಿಜಲಿಂಗೈಕ್ಯನಾದೆನಯ್ಯ
ಮಹಾದೇವಿಯಕ್ಕಗಳ ಪ್ರಸಾದದಿಂದ
ಸುತ್ತಿದ ಮಾಯಾಪಾಶವ ಹರಿದು ನಿರ್ಮಾಯನಾಗಿ
ನಿರ್ವಾಣಪದದಲ್ಲಿ ನಿಂದೆನಯ್ಯ
ಸಿದ್ಧರಾಮಯ್ಯನ ಪ್ರಸಾದದಿಂದ ಶುದ್ಧ ಶಿವತತ್ವವ ಹಡೆದೆನಯ್ಯ
ಮೋಳಿಗೆಯ ಮಾರಿತಂದೆಗಳ ಪ್ರಸಾದದಿಂದ
ಕಾಯದ ಕಳವಳವಳಿದು ಕರ್ಮನಿರ್ಮಲನಾಗಿ
ವೀರಮಾಹೇಶ್ವರನಾದೆನು ನೋಡ
ಇವರು ಮುಖ್ಯವಾದ ಏಳುನೂರೆಪ್ಪತ್ತು ಅಮರಗಣಂಗಳ
ಪರಮ ಪ್ರಸಾದದಿಂದ
ಎನ್ನ ಕರಣಂಗಳೆಲ್ಲವೂ ಲಿಂಗಕಿರಣಂಗಳಾಗಿ........
........ಪರಮಾನಂದ ಪ್ರಭಾಮಯನಾಗಿರ್ದೆನು........'

ಶಿವಶರಣರ ಪರಮಪ್ರಸಾದ ಹಾಗು ಶಿವಯೋಗ ಸಿದ್ಧಿಸಾಮರಸ್ಯಗಳಿಂದಾಗಿ ಸಿದ್ಧಲಿಂಗ ಶಿವಯೋಗಿಗಳು ಪರಮ ನಿರಂಜನರಾದರು, ಶಿವಯೋಗ ಸಿದ್ಧರಾದರು. ಷಟ್‌ಸ್ಥಲ ಸಾರೋದ್ಧಾರಕರಾದರು. ಬೆಳಗಿನೊಳಗಿನ ಮಹಾಬೆಳಗನುಂಡು ನಿಬ್ಬೆರಗಿನಲ್ಲಿ ಬೆರೆತರು. ಮಹಿಮಾ ಪುರುಷರಾದರು. ಅವರ ನುಡಿ ಪರತತ್ವವಾಯಿತು; ನಡೆ ಪಾವನವಾಯಿತು. ಸುಳುಹು ಚಿರಂತನ ವಸಂತಕಾಲವಾಯಿತು. ಇಂದಿಗೂ ಸಜೀವ ಸಮಾಧಿಸ್ಥರಾದ ತೋಂಟದಾರ್ಯರ ಅರುವಿನ ಸುಳುವು ಭಾವುಕರಿಗೆ ಮನೋವೇದ್ಯವಾಗಿರುವುದರಲ್ಲಿ ಸತ್ಯಾಂಶವಿದೆ.

ತೋಂಟದ ಸಿದ್ಧಲಿಂಗ:

# ಜೀವನದ ಒಂದು ದರ್ಶನ

— ಪ್ರೊ. ಎಸ್. ಎಸ್. ಭೂಸನೂರಮಠ

'.......ಹರ ಹರಾ, ಶಿವ ಶಿವಾ ಜಯ ಜಯ ಜಯತು
ಶರಣ ಕರುಣಾಕರ ತ್ರಾಹಿ ಮಾಂ ಭಕ್ತವತ್ಸಲ
ಮತ್‌ಪ್ರಾಣನಾಥ ಮಹಾಲಿಂಗ ಗುರು
ಶಿವ ಸಿದ್ಧೇಶ್ವರ ಪ್ರಭುವೇ !'

ಎಷ್ಟೋ ವರ್ಷಗಳ, ೪೦ ವರ್ಷಗಳಿಗೂ ಮಿಕ್ಕಿದ ಹಿಂದಿನ ಮಾತು. ಒಂದು ದಿನ, ಪ್ರಾತಃಕಾಲದ ಸಮಯ. ಸ್ನಾನಮಾಡಿ, ದೇವರ ಮನೆಯಲ್ಲಿ ಪೂಜೆ ಮಾಡಿಕೊಂಡು, ದೇವರ ಜಗುಲಿಯ ಮೇಲಿರುವ ಒಂದು ಗ್ರಂಥದ ಕಡೆ ನನ್ನ ಲಕ್ಷ್ಯ ಹೋಯಿತು. ಮೇಲಿನ ಅರಿವೆಯನ್ನು ಬಿಚ್ಚಿ ಓದಲಿಕ್ಕೆ ಹತ್ತಿದೆ. ಅದು ವಚನಗ್ರಂಥ. ವಚನ ಸಾಹಿತ್ಯದ ತಿಳುವಳಿಕೆ ಇನ್ನೂ ಮಬ್ಬು ಮಬ್ಬು ನಸುಕಾಗಿರುವ ಆ ಕಾಲದಲ್ಲಿ ಓದುವ ಲವಲವಿಕೆ ಇನ್ನೂ ಹೆಚ್ಚಿತು. ಒಂದು ಎರಡು ಮೂರು ನಾಲ್ಕು ವಚನಗಳನ್ನು ನೋಡಿದೆ. ಅರ್ಥವೇನೂ ಹೊಳೆಯದಿದ್ದರೂ ಆ ಮಾತಿನ ರೀತಿ ಏನೋ ಅಂತರಂಗವನ್ನು ಮುಟ್ಟಿ ದಂತಿತ್ತು. ಆ ಹೊತ್ತಿಗೆ ತೋಂಟದ ಸಿದ್ಧಲಿಂಗ ಸ್ವಾಮಿಗಳ 'ಷಟ್‌ಸ್ಥಲ ಜ್ಞಾನ ಸಾರಾಮೃತ'ವೆಂಬ ಸಂಗತಿ ಮಾತಿನ ರೀತಿಗೆ ಇನ್ನೂ ವಿಶೇಷ ಕಾಂತಿಯನ್ನು ಕೊಡುವಂತಾಯಿತು. ಏಕೆಂದರೆ ಆ ಮಹಿಮಾನ್ವಿತರ ಹೆಸರು ಸಾಕಷ್ಟು ಪ್ರಚಾರದಲ್ಲಿತ್ತು. ತಾಡೋಲೆಯ ಗರಿ ಜೋಡಿಸಿ ಗ್ರಂಥ ಕಟ್ಟಿಟ್ಟಿ-

ಪೂಜೆ ಮಾಡಿಡೆ. ಆದರೆ ಹೃದಯಾಂತರಂಗ ಗುನುಗುನಿಸಿ ಶಬ್ದವಿಲ್ಲದೆ ನಿನಾದ ನಡೆಸಿತ್ತು : ' ಹರ ಹರಾ, ಶಿವ ಶಿವಾ........ '

ಮರೆವುದು ಮನದ ಸ್ವಭಾವ. ಆದರೆ ಆಗೀಗ ಅಂತರಂಗದ ಜವನಿಕೆಯನ್ನು ಓಸರಿಸಿದರೆ 'ಸಿದ್ಧಲಿಂಗ' ದ ನೆನಪು ಮಾಡಿಕೊಂಡರೆ ಮತ್ತೆ ಮತ್ತೆ ನಿಶ್ಯಬ್ದವಾಗಿ ಗಾನಿಸುತ್ತದೆ, 'ಹರಹರಾ ಶಿವಶಿವಾ............ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !' ಕಿತ್ತರೂ ಕೀಳಬಾರದಂತೆ ನೆಲೆಯೂರಿನಿಂದ ಈ ಹರಗಾನ, ಶಿವಗಾನ, ಸಿದ್ಧಲಿಂಗ ಸಂಗೀತ ಇಂದಿಗೂ ತನ್ನ ' ಕಛೇರಿ ' ಯನ್ನು ನಡೆಸುತ್ತದೆ, ತನಗೆ ತಿಳಿ ತಿಳಿದಾಗ.

೪೦–೪೫ ವರ್ಷಗಳ ಇಂದಿನ ನಮ್ಮ ಮನೆಯಲ್ಲಿ ಲೋಕದ ' ಸುದ್ದಿಯ ಸಂತೆ ', ಸ್ವರಾಪಸ್ವರಗಳ 'ಹೋಳಿಯ ಹಬ್ಬ', ರೇಡಿಯೋ ಇದೆ. ಸದಾ ಗದ್ದರಿಸುತ್ತಿರುವ ಈ ಇಂದ್ರಜಾಲದ ಪೆಟ್ಟಿಗೆಯಲ್ಲಿ ಎಲ್ಲ ದಿಕ್ಕಿನ ಧ್ವನಿ ಕೇಂದ್ರೀಕೃತವಾಗಿ ಕುಳಿತುಕೊಂಡಂತಿದೆ. ಧಾರವಾಡ, ಬೆಂಗಳೂರು, ಮುಂಬೈ, ದಿಲ್ಲಿಯನ್ನಷ್ಟೆ ಅಲ್ಲ, ಲಂಡನ್, ಪೇಕಿಂಗ್, ಸಿರಾನ್, ಆಸ್ಟ್ರೇಲಿಯಾ, ಜಪಾನ, ಅಮೇರಿಕಾ ಮುಂತಾದ ದೂರ ಸಮೀಪಗಳಿಂದ ಧ್ವನಿಯನ್ನು ಹೊತ್ತು ತರುವ ಈ ಪೆಟ್ಟಿಗೆ ಆದ್ಯತನದ ಒಂದು ಸಣ್ಣ ಅದ್ಭುತ. ಆಯಾ ಸ್ಟೇಶನ್ನಿಗೆ 'Tune' ಮಾಡುವದೊಂದೇ ತಡ ಅಳತೆಗೆಟ್ಟು ಹಾಡುತ್ತದೆ, ಮಾತಾಡುತ್ತದೆ, ಭಾಷಣ ಮಾಡುತ್ತದೆ ಈ ಪೆಟ್ಟಿಗೆ. ಈ ಅದ್ಭುತ ಕಿವಿಗೆ ಕೇಳುತ್ತದೆ, ಕಿವಿಗೆ ಕೇಳಬಾರದ ಅದ್ಭುತ ನನ್ನ ಹೃದಯುದ ಪೆಟ್ಟಿಗೆ. ಇದೊಂದು ಮಹಾದ್ಭುತ. ಆದರೆ ನನ್ನೊಡನೆ ಬಂದು ನನ್ನೊಳಗಿರುವ ಈ ' ಹಿತ್ತಲ ಗಿಡ ' ಏನು ಮಹಾ ! ಇದು ನನ್ನ ವಿಚಾರ. ದೇಶವನ್ನಲ್ಲದೆ ಕಾಲವನ್ನೂ ಮೀರಿ ನನ್ನ ಹೃದಯವನ್ನು ಶೃತಿಗೊಳಿಸಿದರೆ– ಯೇಸು ಕ್ರಿಸ್ತನಿಗೆ, ಶ್ರೀಕೃಷ್ಣ ಪರಮಾತ್ಮನಿಗೆ, ಸಾಕ್ರೆಟಿಸ್, ಬುದ್ಧ, ವೇದವ್ಯಾಸ ಶಂಕರಾಚಾರ್ಯ, ಎಕ್‌ಹಾರ್ಟ್, ಕ್ಯಾಥರಿನ್, ಬಿಸ್ತನ್‌ದ ಬಯಝಿದ್, ಶ್ರೀ ಅರವಿಂದ, ರಾಮಕೃಷ್ಣ ಪರಮಹಂಸ, ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರೇ ಮುಂತಾದ ಕಾಲಕಾಲದ, ಪುರಾತನ ಕಾಲದ 'ಮಾನವ ದೇವ'ರಿಗೆ ಅಂತರಂಗವನ್ನು ಕೂಡಿಸಿದರೆ, ತನಗೆ ಬೇಕೆಂದು ಗೌಪ್ಯವಾಗಿ ಇಟ್ಟುಕೊಂಡ ದಿವ್ಯ ಗೀತಗಳನ್ನು, ಅಮೃತ ವಚನಗಳನ್ನು ತಲೆದೂಗಿ ಗಾನ ಮಾಡುತ್ತದೆ, ಹೃದಯ ತನ್ನ ಗಂಭೀರದಿಂದ :

My Me is God, nor do I recognize any other Me except my God Himself.

**- St. Catherine of Genoa**

I went from God to God, until they cried from me in me, 'O thou I. !'

**- Bayazid of Bistun**

They are on the way truth who apprehend
God by means of the divine, Light by the Light.

**- Philo**

How boundless the Sky of Contemplation
How transparent the moonlight of the
four- fold Wisdom !
As the truth reveals itself in its eternal tranquillity,
This very earth is Lotus Land of purity,
And this body is the body of the Buddha.

**- Hamuin**

He is the Wisdom that comes not by thought,
His Wordless Silence brings the immortal word.
He sleeps in the atom and the burning star,
He sleeps in man and God beast and stone...

**- Sri Aurobindo**

ಈಶ್ವರಃ ಸರ್ವಭೂತಾನಾಂ ಹೃದ್ದೇಶೇऽರ್ಜುನ ತಿಷ್ಠತಿ

– ಭಗವದ್‌ಗೀತಾ

ದೇವನೊಬ್ಬ ನಾಮ ಹಲವು
ದೇವಲೋಕ, ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣ ಭೋ !

– ಬಸವಣ್ಣನವರು

ಲಿಂಗೋದಯ ಪ್ರಜ್ವಲಿಸುತ್ತದೆ ಗೊಹೇಶ್ವರಲಿಂಗ ತಾನಾಗಿ

– ಅಲ್ಲಮ ಪ್ರಭುದೇವರು

ದೇವ ಮದ್ದೇವ ದೇವದೇವಾ ಹರಹರಾ ಶಿವಶಿವಾ........
ಮತ್ ಪ್ರಾಣನಾಥ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ !

– ತೋಂಟದ ಸಿದ್ಧಲಿಂಗ

'ಅವರವರಿಗವರವರ ಮನ ಒಲಿದುದೇ ಬ್ರಹ್ಮ' ನಮ್ಮ ನಮ್ಮ ಹೃದಯ ಮನ ಒಲಿದಂತೆ, ಒಲಿದಂತೆ ಅದನ್ನು ನಾವು ಶೃತಿಗೊಡಿಸಿ 'ಭೂಲೋಕ' ಕ್ಕೆ ಮಹನೀಯ ಮಹಾತ್ಮರು ಅಂದಿರುವ ದಿವ್ಯ ಸಂದೇಶವನ್ನು ಕೇಳುತ್ತ ಅದೇ ದಿವ್ಯಗಾನದಲ್ಲಿ ಮೈಮರೆದೊರಗಬಹುದು— ನಮಗೆ ಬೇಕಾದರೆ.

'ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ' ತಾನಾದ, ಆ 'ತಾನಿನ ನಿಜಸ್ವರೂಪವಾದ ನಿರವಯ ನಿರಾಮಯ ನಿರಾಕುಳ ನಿರ್ದ್ವಂದ್ವ, ನಿಜಸ್ವರೂಪ ನಿರ್ಭಾವ ನಿರಂಜನ ನಿರಾಕಾರ, ನಿರಾಧಾರ ಸರ್ವಾಧಾರ, ನಿರಾಲಂಬ ಅತ್ಯತಿಷ್ಠತ್ ದಶಾಂಗುಲದೊಡನೆ ಮಾತಾಡುತ್ತಿರುವ ಸಿದ್ಧಲಿಂಗ, ಸಿದ್ಧ ಈಶ್ವರ ಸಾಮಾನ್ಯನಲ್ಲ; ಸಾಮಾನ್ಯ ಶರಣನೂ ಅಲ್ಲ. ಅಂದರೆ ಹತ್ತರ ಕೂಡ ಹನ್ನೊಂದಲ್ಲ. ಈತ 'ನಿರಂಜನ' ದ ಅವತಾರವಾದ ಜಂಗಮ ಮೂರ್ತಿ. ಅಸಾಮಾನ್ಯ, ಅಲೌಕಿಕ ಈತ. ಹದಿನೈದನೆಯ ಶತಮಾನದ ಕರ್ನಾಟ ಮತ್ತೆ ಬೇರೆ ಬೇರೆ ಪ್ರಾಂತಗಳ ಮೇಲೆ ಮೂಡಿದ ಈ ಪ್ರಭಾವ ಮುದ್ರೆ ಸಿದ್ಧಲಿಂಗನದು. ಈ ಮಹಾವ್ಯಕ್ತಿ (?) ಇಪ್ಪತ್ತನೆಯ ಶತಮಾನದ ಬುದ್ಧಿಯ ಮೇಲೆ ಎಂಥ ಪ್ರಭಾವ ಬೀರಬಲ್ಲುದು, ನನಗೆ ಗೊತ್ತಿಲ್ಲ.

ತೋಂಟದ ಸಿದ್ಧಲಿಂಗನ ಜೀವನ ಚರಿತೆಯ ವಿಲಾಸವನ್ನು ತಿಳಿಯಲು ಸಾಧನ ಸಂಪತ್ತಿ ನಮಗೆ ಸಾಕಷ್ಟಿದೆ :

೧. ಸಿದ್ಧೇಶ್ವರ ಪುರಾಣ — ವಿರಕ್ತ ತೋಂಟದಾರ್ಯ ಸು. ೧೫೬೦
೨. ತೋಂಟದ ಸಿದ್ಧೇಶ್ವರ ಪುರಾಣ — ಶಾಂತೇಶ ೧೫೬೧
೩. ಸಿದ್ಧಲಿಂಗೇಶ್ವರ ಸಾಂಗತ್ಯ — ಹೇರಂಬ ಸು. ೧೬೦೦
೪. ತೋಂಟದಾರ್ಯರ ರಗಳೆ — ?
೫. ಭಾವರತ್ನಾಭರಣ (ದೊರೆತಿಲ್ಲ) — ಸಿದ್ಧನಂಜೇಶ ಸು. ೧೬೦೦

ಇವಲ್ಲದೆ ಆನುಷಂಗಿಕವಾಗಿ ಚರಿತೆಯನ್ನು ಕೊಡುವ

೬. ಚೆನ್ನಬಸವ ಪುರಾಣ — ವಿರೂಪಾಕ್ಷ ಪಂಡಿತ ೧೫೮೪
೭. ಗುರುರಾಜ ಚಾರಿತ್ರ — ಸಿದ್ಧನಂಜೇಶ ಯಡೆಯೂರು ಸು. ೧೬೦೦
೮. ಶಾಸನಗಳು ಸು. ೧೫೦೦

ಇನ್ನು ಸಿದ್ಧಲಿಂಗೇಶ ವಿಜಯ ಸಿದ್ಧಲಿಂಗೇಶ್ವರ ಶತಕ ಮುಂತಾದ ಸ್ತೋತ್ರ ಪರರಾದ ಗ್ರಂಥಗಳೂ ಇವೆ. ಇನ್ನೂ ಕುಡಿ ಇಡುತ್ತಲೇ ಇವೆ. ಪಂಡಿತರಿಗೆ

ಇನ್ನೂ ಕೆಲ ಗ್ರಂಥಗಳ ಪರಿಚಯವಿರಬಹುದು. ಇಲ್ಲಿ ಕರ್ನಾಟಕ ಕವಿಚರಿತೆ ಕಾರರ 'ಪ್ರಾಯಿಕವಾಗಿ ಈತನ ಕಾಲಕ್ಕೆ ಈಚೆಯ ವೀರಶೈವ ಕವಿಗಳೆಲ್ಲಾ ಈತನನ್ನು ತಮ್ಮ ಗ್ರಂಥಗಳಲ್ಲಿ ಸ್ತುತಿಸಿದ್ದಾರೆ.' ಎಂಬ ಉಕ್ತಿ ಮನನೀಯವಾಗಿದೆ.

ಇಲ್ಲಿ ಒಂದು ಮಾತು ಎಂದಿಗೂ ನೆನಪಿಡತಕ್ಕ ಮಾತು. ಸಿದ್ಧಲಿಂಗ ಯತಿಯ ಗಂಭೀರ ಗತಿಯ ನಿಜ ಜೀವನವನ್ನು ತಿಳಿಯಲು ಅವರ 'ಷಟ್‌ಸ್ಥಲ ಜ್ಞಾನ ಸಾರಾಮೃತ'ವೆಂಬ ವಚನಗ್ರಂಥ ಪರಮ ಸಾಧನ ಸಂಪತ್ತು. 'ಏಕೋತ್ತರ ಶತಸಲ' ವೆಂಬ ಗ್ರಂಥವನ್ನು ಇವರು ಬರೆದಿರಬಹುದಾದರೂ ಅದು ಇಂದಿಗೂ ದೊರೆತಂತೆ ಕಾಣುವದಿಲ್ಲ.

ಸಿದ್ಧೇಶ್ವರ ಪುರಾಣ ಮುಂತಾದುವನ್ನು ಮುಂದಿಟ್ಟುಕೊಂಡು 'ಯತಿರಾಜನ ಚರಿತೆ' ಯನ್ನು ಹೀಗೆ ರೇಖಿಸಬಹುದು.

೧. ಭೂಮಿಯಲ್ಲಿ ವೀರಶೈವ ಭಕ್ತಿ, ಜ್ಞಾನ, ನೀತಿ, ತತ್ವ, ಆಚರಣೆ ಮಸುಕಾಗಿ, ಮಸುಳಿಸಿದುದನ್ನು ನಾರದನು ಶಿವನಿಗೆ ಅರಿಕೆ ಮಾಡಿಕೊಳ್ಳಲು ತನ್ನ ಹೃನ್ನಿಲಯದ ಅನಾದಿ ಭಕ್ತನ ಹೃದಯನಿವಾಸಿಯಾದ ಅನಾದಿ ಜಂಗಮ ಮೂರ್ತಿ 'ನಿರಂಜನ ಗಣೇಶ್ವರ' ನನ್ನು ಶಿವಭಕ್ತಿಯ ಉದ್ಧಾರಕ್ಕಾಗಿ ಭೂಲೋಕಕ್ಕೆ ಕಳಿಸುತ್ತಾನೆ ಶಿವನು. ಪ್ರಕೃತಿಯ ಅನಂತ ಸೌಂದರ್ಯದಿಂದ, ಗುಡಿ-ಗೋಪುರಗಳಿಂದ ಶೋಭಿಸುವ ಹರದನಹಳ್ಳಿ ಅಥವಾ ವಾಣಿಜ್ಯಪುರಿಯ ಬೀದಿಯಲ್ಲಿ ಆ ಗಣೇಶ್ವರನೇ ೮ ವರ್ಷದ ಶಿಶುವಾಗಿ ನಡೆದು ಬರುತ್ತಿದ್ದಾನೆ-ತೇಜಃಪುಂಜದ ರಾಶಿಯೇ ನಡೆದು ಬರುವಂತೆ! 'ಎಂಟು ಬರಿಸದ ಶಿಶು' ಅಲ್ಲಮಪ್ರಭು ದಿವ್ಯ ಶಿಶುರೂಪ ತಳೆದಿಲ್ಲಿಗೆಯ್ತಂದನೊ ?—ಎಂದು ಜನರೆಲ್ಲ ಆಶ್ಚರ್ಯಚಕಿತರಾಗಿರಲು

> ........ಚೆನ್ನಬಸವೇಶನೊಸೆದಿರುತಿಹ ನಿ-
> ಶಾಂತಕ್ಕೆ ಕೋಟಿ ಸೂರ್ಯಪ್ರಕಾಶವ ಕೀಳ್ಪಡಿಸುವ ದೇಹದ
> ಕಾಂತಿಯಿಂ ।
> ತಾಂ ತಳುಪಿದೆಯ್ತರಲ್ ಕಂಡು ಶಿವ ಶಿವ ಎನು-
> ತ್ತಂತರಂಗದೊಳೆ ಸಾತ್ವಿಕ ರಸಂ ಪೊಣ್ಮೆ ನಲ-
> ವಂ ತಾಳ್ದು ಶಿಶುವಿಗಿಂತಪ್ಪ ರೂಪೆಲ್ಲಿಯದೆಂದು ಕೌತುಕಂ
> ಬಡುತಿರೆ೧ ॥

ಹರದನಹಳ್ಳಿಯ ಈ ಗೋಸಲ ಚೆನ್ನಬಸವೇಶ್ವರ ಸ್ವಾಮಿಗಳೇ ಬಾಲಕನಿಗೆ

೧. ಸಿ. ಪು ಸಂ. ೨, ಪ. ೩೬

ಶಿವದೀಕ್ಷೆಯನ್ನು ಕೊಟ್ಟು ಪಂಚಮುದ್ರೆಗಳನ್ನು ಕೊಟ್ಟರು. ಸಿದ್ಧಲಿಂಗೇಶನೆಂಬ ನಾಮಕರಣವೂ ಆ ಶಿಶುವಿಗಾಯ್ತು.[೧]

ತ್ರಿಕರಣ ಪೂರ್ವಕವಾದ ಗುರು ಶುಶ್ರೂಷೆಯಲ್ಲಿ ನಿರತನಾಗಿದ್ದ ಈ ಶಿಷ್ಯ ಒಂದು ದಿನ ತನ್ನ ಗುರುಭಕ್ತಿ ನಿಷ್ಠೆಯ ಸತ್ಯ ಕಾಂತಿಯನ್ನೇ ಬೆಳಗಿ ತೋರಿದ :

ಗುರುಸಿದ್ಧಲಿಂಗ ಯತಿರಾಜನನು ದಿನದೊಳೀ
ಪರಿಯಿಂದೆ ಗುರುಸೇವೆಯಂ ಮಾಡುತೊಲವಿನಿಂ
ದಿರುತಮೊಂದಾನೊಂದು ದಿನವೆಣ್ಣೆ ದೀಪಕಿಲ್ಲದಿರೆ ಧೈರ್ಯಗುಂದದೆ।
ಪಿರಿದಾಗಿ ಪಣತಿಯೊಳುದಕವೆರೆದು ಬತ್ತಿಯಂ
ಹರಿಸದಿಂದಿಕ್ಕಿ ಸೊಡರೆತ್ತಲಾತ್ತಲಾಕ್ಷಣದೊಳದು
ಪರಮಪ್ರಕಾಶದಿಂದುರಿಯುತಿರಲಾ ಗುರುವರಂ
ಕಾಣುತಿಂತೆಂದನು[೨] ॥

ಈ ಮಹಿಮಾತಿಶಯವನ್ನು ಕಂಡ ಚೆನ್ನಬಸವಸ್ವಾಮಿಗಳು 'ಇನ್ನು ಮೇಲೆ ನಿನ್ನಿಂದ ಗುರುಸೇವೆ ಕೈಕೊಳ್ಳುವದು ಸಲ್ಲದು. ದೇಶಸಂಚಾರ ಮಾಡಿ ಜಗತ್ತಿಗೆ ಕಲ್ಯಾಣವನ್ನುಂಟು ಮಾಡು. ನಿನ್ನೊಡನೆ ಈ ಚರಮೂರ್ತಿಗಳ ಗಡಣವೂ ಬರಲಿ.'– ಎಂದು ಅಪ್ಪಣೆ ಮಾಡಲು ಶ್ರೀ ಗುರುವಿನಾಜ್ಞೆಯಂತೆ ದೇಶಾಂತರ ಹೊರಟು ಲೋಕೋಪಕಾರ ಮಾಡುವ 'ಜಂಗಮಲಿಂಗ'ದ ಮಹಾ ಕಾರ್ಯಕ್ಕೆ ಉಜ್ಜುಗಿಸುತ್ತಾನೆ, ಈ ಅಸಾಮಾನ್ಯ ಗುರುಪುತ್ರನಾದ ಸಿದ್ಧಲಿಂಗ.

೨. ಸಾಮಾನ್ಯವಾಗಿ ಎಲ್ಲ ಪುರಾಣ ಚರಿತೆಗಳು ಸಿದ್ಧಲಿಂಗಯತಿಯ 'ಆಸೇತು ಹಿಮಾಚಲ'ದ ದೇಶಪರ್ಯಟನವನ್ನು ಹೇಳುವಂತಿವೆ. ವಿರಕ್ತ ತೋಂಟದಾರ್ಯ ಹೇಳುವಂತೆ ಈ 'ಸಗುಣ ನಿರ್ಗುಣ' ಜಂಗಮ

ಪೆಂಪಿನಿಂದಖಿಲ ದೇಶಂಗಳಂ ನೋಡುತ್ತ
ಲಂಪಿನಿಂದವಿಮುಕ್ತ ಸೌರಾಷ್ಟ್ರ ನೀಲಕಂ
ಠಂ ಪರ್ವತಂ ಕೊಲ್ಲಿಪಾಕಿ ಕೇತಾರ ದ್ರಾಕ್ಷಾರಾಮ ಗೋಕರ್ಣವು।
ಪಂಪೆ ಶಿವಗಂಗೆ ರಾಮೇಶ್ವರಂ ಪೊನ್ನಾಂಬ
ಲಂ ಪಿರಿದೆನಿಪ ಕಾಳಹಸ್ತಿಯೆಂದೆಂಬಿವುಗ

೧. ಹರಪನ ಹಳ್ಳಿಯ ಮಲ್ಲಿಕಾರ್ಜುನ ಮತ್ತು ಜ್ಞಾನಾಂಬೆಯರ ಗರ್ಭದಲ್ಲಿ ಅದೇ ಊರ ಗೋಸಲ ಚೆನ್ನಬಸವೇಶ್ವರ ಸ್ವಾಮಿಗಳ ಕೃಪಾಶೀರ್ವಾದದಿಂದ ಈ ಶಿಶುವಿನ ಜನನ ವಾಯ್ತೆಂದು ಹೇರಂಬ ಕವಿ ಹೇಳುತ್ತಾನೆ.

೨. ಸಿ. ಪು. ಸಂ. ೩, ಪ. ೨

೪೦ ಪದುಳದಿಂ ಚರಿಸುತರುಣಾಚಲಕ್ಕೆ ಬಂದಂ
ಚಿದಾನಂದಮಯನು[1] ॥

ಮತ್ತೆ ಉಳುವಿ, ಮಹಾಬಳೇಶ್ವರ, ಕಾರ್ಕಳ, ಹೊಳಲಗುಂದ, ಕಗ್ಗೆರೆ ಮುಂತಾದ ಕಡೆ ಸಂಚಾರಮಾಡಿ ತನ್ನ ಕೊನೆಯ ಕೆಲ ದಿನಗಳನ್ನು ಎಡೆಯೂರಲ್ಲಿ ವೀರಶೈವ ಷಟ್‌ಸ್ಥಲೋಪದೇಶ ಮಾಡುತ್ತ ಅದೇ ಸ್ಥಾನದಲ್ಲಿ ಶಿವಯೋಗ ಸಮಾಧಿಯನ್ನು ಹೊಂದಿದನು.

೩. ಸಿದ್ಧಲಿಂಗನ ದೇಶಸಂಚಾರದ ವಿಸ್ತಾರದಲ್ಲಿ ಮೂಡಿ ಬರುವ ಪವಾಡಗಳ ಸಂಖ್ಯೆ ಒಂದು ರೀತಿಯಿಂದ 'ಅಸಂಖ್ಯಾತ' ವೆಂದು ಹೇಳಬಹುದು. ಸಂಚಾರದ ಆಯಾಸ್ಥಲ. ಆಯಾ ಸಮಯ ಆಯಾ ಪ್ರಸಂಗಕ್ಕೆ ಅನುಗುಣವಾಗಿ ಸನ್ನಿವೇಶ ಸ್ಫೂರ್ತವಾಗಿ, 'ಸ್ವಯಂಭು'ವಾಗಿ ಒಡಮೂಡಿ ತೋರುವ ನೂರಾರು ಪವಾಡಗಳಲ್ಲಿ ಚರಿತೆ-ಪುರಾಣಗಳು ಮುಳುಗಿ ಎದ್ದು, ಎದ್ದು ಮುಳುಗುವಂತಿವೆ.

೧. ತ್ರ್ಯಂಬಕೇಶ್ವರ ಮುಂತಾದ ಶಿವಲಿಂಗ ದೇವರನ್ನು ನುಡಿಸುವದು, ನಾಗಸಮುದ್ರದಲ್ಲಿ ಲಿಂಗದಿಂದ ಕದ ತೆರೆಸುವದು ಕುಂಬಳೇಶ್ವರ, ಬೆಟ್ಟದ ಮಲ್ಲಿನಾಥೇಶ್ವರ ಮುಂತಾದ ದೇವರಿಂದ ಸತ್ಕಾರ ಹೊಂದುವದು. ಹೊಳಲುಗುಂದದ ಮಾಯಿದೇವಿಯಿಂದ ಭಕ್ತಿಯ ಸ್ವಿಕಾರ. ಸಿಡಿಲಿನ ಪೂಜೆ.

೨. ಜೈನ ವೈಷ್ಣವ ಮುಂತಾದ ಪರಮತವನ್ನು ವಾದದಲ್ಲಿ ಶಾಸ್ತ್ರಾರ್ಥದಿಂದ, ಅನೇಕ ಪವಾಡದ 'ದೃಷ್ಟ'ಗಳಿಂದ ಗೆದ್ದು ವೀರಶೈವ ಷಟ್‌ಸ್ಥಲಮಾರ್ಗದ ಮಹತ್ವವನ್ನು ಪ್ರತಿಷ್ಠಾಪಿಸುವದು.

೩. ಸತ್ತ ತುರುಷ್ಕರಾಜನನ್ನು, ತನ್ನ ಪಾದಕಚ್ಚಿ ಸತ್ತ ಸರ್ಪ ಸಹಗಮನಕ್ಕೆ ಉದ್ಯುಕ್ತಳಾದ ಸತಿಯ ಗಂಡನನ್ನು, ಇದರಂತೆ ಅನೇಕ ಸತ್ತ ಪ್ರಾಣಿಗಳಿಗೆ ಪ್ರಾಣದಾನ ಮಾಡುವದು.

೪. ಅಕಾಲದಲ್ಲಿ ಜಲಸಮೃದ್ಧಿ ನೇರಿಲ ಹಣ್ಣನ್ನುಂಟು ಮಾಡುವ ಮಹಿಮೆ.

೫. ಭಸ್ಮದ ಗಟ್ಟಿಯನ್ನು ಸ್ಫಟಿಕ ಲಿಂಗವನ್ನಾಗಿ ಮಾಡುವದು.

---

೧. ಸಿ. ಪು. ಸಂ. ೩, ಪ. ೬

ಇವೇ ಮುಂತಾದ ಇನ್ನೂ ಹಲವಾರು ಮಹಿಮೆಗಳನ್ನು ಮಾಡಿ ತೋರಿದ ಸಿದ್ಧಲಿಂಗ ಯತಿರಾಜ.

೪. ನಿತ್ಯ ನಿರಂತರ ಲಿಂಗಪೂಜೆ ಲಿಂಗಭಕ್ತಿ, ಶಿವಯೋಗ ಶಿವಾನುಭಾವ, ಅನಂತ ಸಮಾಧಿ ಅವ್ಯಾಹತ ನಿಜಾಚರಣೆ, ಅನಂತ ಶಿಷ್ಯಕೋಟಿಗೆ ವೀರಶೈವೋಪದೇಶ. ೭೦೦ ವಿರಕ್ತರು ಮೂರುಸಾವಿರ ಚರಮೂರ್ತಿಗಳಿಂದ ಶಿವಾದ್ವೈತ ಭಕ್ತಿಯ ಪ್ರಚಾರ.

ಈ ಸಿದ್ಧಲಿಂಗನಿಗೆ 'ತೋಂಟದ' ಎಂಬ ವಿಶೇಷಣ ಎಂಬುದಕ್ಕೆ ಈ ಮಹಾ ಶಿವಯೋಗಿಯ ಜೀವನದಲ್ಲಿ ನಡೆದ ಒಂದು ಅಘಟಿತ ಘಟನೆ. ಒಂದು ಅಸಾಮಾನ್ಯ ಶಿವಯೋಗ ಸಮಾಧಿ ಕಾರಣವಾಗಿದೆ. ಆ ದಿವ್ಯ ರಮಣೀಯ ಸಮಾಧಿಯ ಸಂಪತ್ತಿನ ಸಂಗತಿ ಹೀಗೆ:

ಗಾಳಿ ಪೂಜೆಯ ಬೆಟ್ಟ, 'ವಾಯುಪೂಜಾನಗ'ವನ್ನು ಇಳಿದು ಸಿದ್ಧಲಿಂಗೇಶ್ವರನು ಇಂದಿನ ತುಮಕೂರು ಜಿಲ್ಲೆಯ ಕಗ್ಗೆರೆಯ ಕಡೆ ಬರುತ್ತಾನೆ. ನಾಗಿಣಿ ನದಿಯ ತೀರದ ಪ್ರದೇಶದಲ್ಲಿ ಅತ್ಯಂತ ಮನೋಹರವಾಗಿರುವ ಉದ್ಯಾನವನ. ಆ ತೋಟದಲ್ಲಿ ಮಹಾಮರವಾಗಿ ಬೆಳೆದು ನಿಂತ ಮಾವಿನ ಮರದ ಕೆಳಗೆ ಕುಳಿತ ಶಿವಯೋಗಿ. ಬಿನ್ನಹ ಮಾಡಿ, ಈಗ ಮನೆಗೆ ಅರ್ಪಿತಕ್ಕೆ ಕರೆದುಕೊಂಡು ಹೋಗುವೆನೆಂದು ಹೇಳಿದ ಭಕ್ತ ನಂಬಣ್ಣ. ಬೇಡರ ಕೋಲಾಹಲಕ್ಕೆ ಊರು ಒಡೆದು ಬೇರೆಕಡೆ ಓಡಿ ಹೋಗಬೇಕಾಯ್ತು. ಭಕ್ತನ ಬರವ ಕಾಣದ ಸಿದ್ಧಲಿಂಗ ಶಿವಯೋಗ ಸಮಾಧಿಯಲ್ಲಿ ಮುಳುಗಿ ಹೋದ. ೬ ತಿಂಗಳು ಗತಿಸಿ ಹೋದವು. ನಂಬಣ್ಣ ಮುಂತಾದ ಭಕ್ತರು ತಿರುಗಿ ಕಗ್ಗೆರಗೆ ಬಂದು ಸಿದ್ಧಲಿಂಗನನ್ನು ನೋಡಿದಾಗ ಬೆಳೆದ ಹುತ್ತಿನಲ್ಲಿ ಹೂಳಿ ಹೋಗಿದ್ದ ಶಿವಯೋಗಿ. ಭಕ್ತರು ಭಕ್ತಿಯಿಂದ ಎಚ್ಚರಿಸಿದರು; ನಂಬಿಯಣ್ಣ ಲಿಂಗಾರ್ಪಿತಕ್ಕೆಂದು ತನ್ನ ಮನೆಗೆ ಬಿಜಯಂಗೈಸಿಕೊಂಡು ನಡೆದ. ಅಂದಿನಿಂದ ಸಿದ್ಧಲಿಂಗನಿಗೆ ತೋಂಟದ ಸಿದ್ಧಲಿಂಗನೆಂಬ ಹೆಸರು ರೂಢಿಯಲ್ಲಿ ಬಂದಿತು.[೧]

ಶಿವಯೋಗದ ಲಕ್ಷಣವನ್ನು ತೋಂಟದ ಸಿದ್ಧಲಿಂಗ ದೇವರು ಹೀಗೆ ವಿವರಿಸುತ್ತಾರೆ, ತಮ್ಮ 'ಷಟ್‌ಸ್ಥಲ ಜ್ಞಾನ ಸಾರಾಮೃತ'ದಲ್ಲಿ:

> ಬ್ರಹ್ಮರಂಧ್ರದಲ್ಲಿ ಇಪ್ಪ ನಾದಚೈತನ್ಯವಪ್ಪ ಪರಮ ಚಿತ್ಕಳೆಯನೆ
> ಭಾವ ಮನ ಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ

---

೧. ನಿರಂಜನ ವಂಶರತ್ನಾಕರ ಮತ್ತು ಹೇರಂಬ ಕವಿಯ ಸಾಂಗತ್ಯ ಸಿದ್ಧಲಿಂಗ ೧೨ವರ್ಷಗಳ ಕಾಲ ಸಮಾಧಿಯಲ್ಲಿದ್ದನೆಂದು ತಿಳಿಸುತ್ತವೆ.

ಭಾವದಲ್ಲಿ ಸತ್‌ಸ್ವರೂಪವಪ್ಪ ಭಾವಲಿಂಗವೆನಿಸಿ,
ಪ್ರಾಣದಲ್ಲಿ ಚಿತ್‌ಸ್ವರೂಪವಪ್ಪ ಪ್ರಾಣಲಿಂಗವೆನಿಸಿ,
ಕರಸ್ಥಲದಲ್ಲಿ ಆನಂದ ಸ್ವರೂಪವಪ್ಪ ಇಷ್ಟಲಿಂಗವೆನಿಸಿ,
ಒಂದೇ ವಸ್ತು ತನು ಮನ ಭಾವಂಗಳಲ್ಲಿ ಇಷ್ಟಪ್ರಾಣ ಭಾವವಾದ
ಭೇದವನರಿದು, ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ,
ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ, ತೃಪ್ತಿಲಿಂಗವ
ಭಾವಜ್ಞಾನದಿಂದ ಗ್ರಹಿಸಿ, ಈ ಲಿಂಗತ್ರಯವಿಡಿದು
ಆಚರಿಸಿ, ಲಿಂಗದೊಡನೆ ಕೂಡಿ, ಆ ಲಿಂಗವೇ ತಾನು
ತಾನಾಗಿ ವಿರಾಜಿಸುತಿಪ್ಪುದೀಗ ಶಿವಯೋಗ ನೋಡಾ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ

[ ವಚನ ೩೬೪ ]

೫. ಇನ್ನು ತೋಂಟದ ಸಿದ್ಧಲಿಂಗಯತಿಯ ಗುರು ಮತ್ತು ಶಿಷ್ಯ ಪರಂಪರೆಯನ್ನು ಪುರಾಣ ಚರಿತೆಗಳಲ್ಲಿ ನಾವು ಕಾಣುತ್ತೇವೆ. ಈತನ ಗುರುಪರಂಪರೆ ಹೀಗಿದೆ:

೧. ಅನಾದಿ ಗಣೇಶ್ವರ ೨. ಆದಿ ಗಣೇಶ್ವರ ೩. ನಿರ್ಮಾಯ ಗಣೇಶ್ವರ ೪. ನಿರಂಜನ ಗಣೇಶ್ವರ ೫. ಜ್ಞಾನಾನಂದ ಗಣೇಶ್ವರ ೬. ಆತ್ಮ ಗಣೇಶ್ವರ ೭. ಅಧ್ಯಾತ್ಮ ಗಣೇಶ್ವರ ೮. ರುದ್ರಗಣೇಶ್ವರ ೯. ಬಸವ ಪ್ರಭುದೇವರು ೧೦. ಆದಿಲಿಂಗೆ ದೇವರು ೧೧. ಚೆನ್ನವೀರೇಶ್ವರ ದೇವರು ೧೨. ಹರದನ ಹಳ್ಳಿಯ ಗೋಸಲ ದೇವರು ೧೩. ಶಂಕರದೇವರು ೧೪. ದಿವ್ಯಲಿಂಗ ದೇವರು ೧೫. ಚೆನ್ನಬಸವೇಶ್ವರ ದೇವರು[1]

ತಮ್ಮ ಗುರುಪರಂಪರೆಯನ್ನು ಹೀಗೆ ಹೇಳಿದ ಸಿದ್ಧಲಿಂಗರು–

....ಈ ಚೆನ್ನಬಸವೇಶ್ವರ ದೇವರ ಕರಕಮಲದಲ್ಲಿ ಉತ್ಪತ್ತಿಯಾದ
ಶಿಶು ಸಿದ್ಧಲಿಂಗ ನಾನಯ್ಯಾ. ಹಿಂಗೆ ಅನಾದಿವಿಡಿದು ಬಂದಗುರು,
ಅನಾದಿವಿಡಿದು ಬಂದ ಲಿಂಗ; ಅನಾದಿವಿಡಿದು ಬಂದ ಜಂಗಮ,
ಅನಾದಿವಿಡಿದು ಬಂದ ಗುರುಶಿಷ್ಯ ಸಂಬಂಧ, ಅನಾದಿವಿಡಿದು ಬಂದ
ಪಾದೋದಕ ಪ್ರಸಾದ, ಅನಾದಿವಿಡಿದು ಬಂಧ ಭಕ್ತಿ ಜ್ಞಾನ ವೈರಾಗ್ಯ,

---

೧. ಶಿ. ಪು ಸಂ. ೨ ಕ. ೩೨-೩೩ ಇದೇ ಪರಂಪರೆ ಬಂದಿದೆ. ನಿರಂಜನ ವಂಶರತ್ನಾಕರದಲ್ಲಿ ಈ ಪರಂಪರೆಯನ್ನು ಅಲ್ಲಮಪ್ರಭು ಸ್ವಾಮಿಗಳು, ಚೆನ್ನಬಸವೇಶ್ವರ, ಸಿದ್ಧರಾಮದೇವರಿಂದ ಮೊದಲು ಮಾಡುತ್ತದೆ.

ಅನಾದಿವಿಡಿದು ಬಂದ ಪ್ರಸಿದ್ಧವಾದ ವೀರಶೈವಾಚಾರ ಸಂಪತ್ತು-
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

(ವಚನ ೮)

ಎಡೆಯೂರು ಸಿದ್ಧಲಿಂಗೇಶ್ವರ ದೇವಸ್ಥಾನದ ಪ್ರಾಕಾರದಲ್ಲಿ ಸು. ೧೫೦೦ ರಲ್ಲಿ ಬರೆದ ಶಿಲಾಶಾಸನದಲ್ಲಿ 'ಸಮ್ಯಗ್ ಜ್ಞಾನೋದಯವಾಗಿ ಸಂಸಾರ ಹೇಯಮಂ ಮಾಡೆ' ದಿವ್ಯಶಿವಯೋಗಿ ಸಿದ್ಧಲಿಂಗೇಶ್ವರರಿಗೆ, ಶರಣು ಹೊಕ್ಕ ಶಿಷ್ಯಜನಗಳ ನಾಮ ಪರಿಕ್ರಮ ಇಂತಿದೆ :

> ಸಪ್ಪೆದೇವರು, ಉಪ್ಪಿನ ಹಳ್ಳಿಯ ಸ್ವಾಮಿ ಸಿದ್ಧದೇವರು, ನಂಜೆದೇವರು, ಬೋಳ ಬಸವರಾಜದೇವರು, ಗುಮ್ಮಳಾಪುರದ ಸಿದ್ಧಲಿಂಗದೇವರು, ಪಟ್ಟಣ ದೇವರು, ರೇವಣ ಸಿದ್ಧದೇವರು, ಶೀಲವಂತದೇವರು, ಚಿಟ್ಟಿಗದೇವರು, ಇಂತೆ ಇವರು ಮುಖ್ಯವಾದ ಭಕ್ತ ಮಾಹೇಶ್ವರರ್ಗೆ ಷಟ್‌ಸ್ಥಲ ಲಿಂಗಾಂಗ ಸಂಬಂಧ ಸಮರಸ್ಯೈಕಾರ್ಥಮಂ ಬೋಧಿಸಿ ಮುಕ್ತರಂ ಮಾಡಿ, ಷಟ್‌ಸ್ಥಲೈಕಾರ್ಥವಾಗಿ ಮಾಡುವ ಕ್ರಿಯೆಗಳೆಲ್ಲ ನಿಷ್ಪತ್ತಿಯಾಗಿ ಎಡೆಯೂರಲ್ಲಿ ತಮಗೆ ಕಟ್ಟಿಸಿದ ಮಠದಲ್ಲಿ ಶಿವಯೋಗ ಸಮಾಧಿ ಸನ್ನದ್ಧರಾದರು.[೧]

ಶಾಸನೋಕ್ತರಾದ ಈ ಶಿಷ್ಯರಲ್ಲದೆ ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣ, ಚೆನ್ನಬಸವ ಪುರಾಣ ಮುಂತಾದ ಗ್ರಂಥಗಳಲ್ಲಿ ಸಿದ್ಧಲಿಂಗೇಶ್ವರ,ಕಂಬಳಿಯ ದೇವ, ಸಿದ್ಧನಂಜೇಶ್ವರ, ಚೆನ್ನದೇವ, ಕಂಕಣದೇವ, ಲಂಬಕರ್ಣದೇವ, ಸಿದ್ಧಮಲ್ಲೇಶ್ವರ, ಎಡೆತೊರೆಯ ಗುರುಸಿದ್ಧವಿರಣ್ಣೊಡೆಯ, ಘನಲಿಂಗದೇವ, ಬೆಡಗಿನ ಪರ್ವತೇಶ್ವರ, ಮಳೆಯ ದೇವ, ಬತ್ತಲೆಯ ದೇವ..ಮುಂತಾದ ಶಿಷ್ಯಕೋಟಿಯ ನಾಮ ಪರಿಕ್ರಮ ಬೆಳೆಯುತ್ತ ಹೋಗುತ್ತದೆ. ಜಗದ್ಧಿತಾರ್ಥವಾಗಿ ಬಂದ ಸಿದ್ಧಲಿಂಗೇಶ್ವರ– 'ಜ್ಞಾನ ಕ್ರಿಯಾಸ್ವರೂಪನು, ಸರ್ವಾಂಗಲಿಂಗಿ ಷಟ್‌ಸ್ಥಲಜ್ಞಾನಿ ಸರ್ವಾಚಾರ ಸಂಪನ್ನ ಪಾದೋದಕ ಪ್ರಸಾದ ಪ್ರತಿಷ್ಠಾಚಾರ್ಯನುಂ ಅಷ್ಟಾವರಣಾಲಂಕರಣ ದ್ವೈತಾದ್ವೈತತಿಮಿರಮಾರ್ತಂಡನುಂ– ಇಂತಪ್ಪ ಜಗದ್ಗುರು ಸಿದ್ಧಲಿಂಗೇಶ್ವರ ತನ್ನ ಪರಮ ಶಿಷ್ಯನಾದ ಬೋಳ ಬಸವೇಶ್ವರನಿಗೆ 'ಷಟ್‌ಸ್ಥಲಾಚಾರ್ಯ ಪಟ್ಟ'ವನ್ನು ಕಟ್ಟಿದ. ಆಗ ನೆರೆದಿದ್ದ ಶಿಷ್ಯಕೋಟಿಗೆಲ್ಲ ಪರಮಾನಂದದ ಸಂಭ್ರಮ! 'ಎರಡನೆಯ ಸಿದ್ಧ ದೇಶಿಕನಿವಂ ತಪ್ಪದು' ಎಂದು ಕೊಂಡಾಡಿ ಕೊಸರಿದರು. ದಿವ್ಯ ಶಿವಯೋಗಿ ಸಿದ್ಧಲಿಂಗ ಎಡೆಯೂರಲ್ಲಿಯೇ ಜೀವಂತ ಶಿವಯೋಗ ಸಮಾಧಿಯನ್ನು

---

೧. ಈ ಕಲ್ಲು ಮಠವನ್ನು ಚೆನ್ನವೀರಪ್ಪ ಒಡೆಯರು ಮತ್ತು ಆಸತಿ ಪರ್ವತಮ್ಮನವರ ಭಕ್ತಿಯ ಬಿನ್ನಹದಂತೆ ಚಿಟ್ಟಿಗದೇವರು ಕಟ್ಟಿಸಿದರೆಂದು ಇದೇ ಶಿಲಾಶಾಸನ ಹೇಳುತ್ತದೆ.

ಹೊಂದಿದರು. ಈ ಸಿದ್ಧಲಿಂಗೇಶ್ವರ ದೇವಸ್ಥಾನ ಇಂದಿಗೂ 'ಜಾಗ್ರತ' ಕ್ಷೇತ್ರ ಸ್ಥಾನವಾಗಿನಿಂತಿದೆ.

ನಿರಂಜನ ಜಂಗಮವಂಶದರ್ಪಣವು ತಿಳಿಸುವಂತೆ ಬೋಳ ಬಸವಸ್ವಾಮಿಗಳ ತರುವಾಯ ಈ ತೋಂಟದಾರ್ಯರ ಪೀಠಾಧಿಕಾರವನ್ನು ವಹಿಸಿದವರ ಪರಂಪರೆ ಇದು:

೧. ಗೂಳೂರ ಸಿದ್ಧವೀರಸ್ವಾಮಿಗಳು
೨. ಉದ್ದಾನಾರ್ಯ ಸ್ವಾಮಿಗಳು
೩. ಹರಿಹರ ಸ್ವಾಮಿಗಳು
೪. ಭಿಕ್ಷುಕದ ಬಸವಲಿಂಗ ಸ್ವಾಮಿಗಳು
೫. ಕಟಗಿಹಳ್ಳಿ ರಾಜೋಟಿ ಸ್ವಾಮಿಗಳು
೬. ಕೌದಿ ಮಹಾಂತ ಸ್ವಾಮಿಗಳು
೭. ಅರ್ಧನಾರೀಶ್ವರ ಸ್ವಾಮಿಗಳು
೮. ಈಸೂರ ನಂದೀಶ್ವರ ಸ್ವಾಮಿಗಳು
೯. ಉಗ್ಗದ ತೋಂಟದಾರ್ಯ ಸ್ವಾಮಿಗಳು
೧೦. ಸದಾಶಿವ ಸ್ವಾಮಿಗಳು
೧೧. ಮಹಾಂತ ಸ್ವಾಮಿಗಳು
೧೨. ವೃದ್ಧ ತೋಂಟದಾರ್ಯ ಸ್ವಾಮಿಗಳು
೧೩. ಮೃತ್ಯುಂಜಯ ಸ್ವಾಮಿಗಳು
೧೪. ಸಿದ್ಧೇಶ್ವರ ಸ್ವಾಮಿಗಳು

ಈ ನಿರಂಜನ ಜಂಗಮ ವಂಶದ ಪರಂಪರೆ ಗದುಗಿನ ಗುರುಬಸವಸ್ವಾಮಿಗಳಿಂದ, ಶಿವಕುಮಾರಸ್ವಾಮಿಗಳಿಂದ ಮತ್ತೆ ಮುಂದುವರಿದಿದೆ. ತೋಂಟದ ಸಿದ್ಧಲಿಂಗೇಶ್ವರನ ಪರಂಪರಾನುಗತವಾಗಿ ಬಂದ ಈ ಪೀಠಾಧಿಕಾರಿಗಳಿಗೆ 'ಶ್ರೀ ಜಗದ್ಗುರು ತೋಂಟದಾರ್ಯ ಸ್ವಾಮಿಗಳು ಎಂಬ ಅಭಿಧಾನವಿರುವದು'

'ಅನಾದಿ ನಿರಂಜನ ಜಂಗಮ' ದ ಕಥೆ ಇಲ್ಲಿಯವರೆಗೆ ಬಂದಿದೆ.

ಈ ಎಲ್ಲ ಪುರಾಣ ಇತಿಹಾಸದ ತೋಂಟದ ಸಿದ್ಧಲಿಂಗನ ಜೀವನ ಚರಿತೆಯನ್ನು ಪರಿಶೀಲಿಸಿ ನೋಡುವಾಗ ಒಂದೆರಡು, ನಾಲ್ಕೈದು ಪ್ರಶ್ನೆ ಇಂದಿನ ಬುದ್ಧಿಯ ಮುಂದೆ ಧಿಗಿಲು ಭುಗಿಲೆಂದು ಎದ್ದು ನಿಲ್ಲುತ್ತದೆ.

ಪುರಾತನ ಶೈವ ಭಕ್ತಿ ೧೨ ನೆಯ ಶತಮಾನದ ದ್ವಿತೀಯ ಶಂಭುವೆನಿಸಿದ ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮುಂತಾದ 'ಅಸಂಖ್ಯಾತ' ಶರಣರಿಂದ ಆ ಭಕ್ತಿ ಶಿವಜ್ಞಾನ ಶಿವಯೋಗ ಶಿವಕ್ರಿಯೆಯ ಸಮರಸ ಸಂಗಮದಿಂದ ಶಿವಾದ್ವೈತಭಕ್ತಿ ಅಥವಾ ನಿಜಭಕ್ತಿಯಾಯ್ತು. ಜಾತಿ ಕುಲವರ್ಣ ಆಶ್ರಮದ ಭೇದವನ್ನು ಕಿತ್ತೊಗೆದು ನಿಜಭಕ್ತಿಯಿಂದ ಲಿಂಗ ದೇವನ ನಿತ್ಯ ಸಾಮ್ರಾಜ್ಯ

ವನ್ನು ಮರ್ತ್ಯಲೋಕದ ಮಾನವಜನಾಂಗದಲ್ಲಿ ಪ್ರತಿಷ್ಠಾಪಿಸಲು ಹವಣಿಸಿದರು ಶರಣರು. ಅವರಾದ ಮೇಲೆ ೧೫ ನೆಯ ಶತಮಾನದ ಪ್ರೌಢರಾಯ (೧೪೧೯-೧೪೪೬) ನ ಕಾಲದಲ್ಲಿದ್ದ ಚಾಮರಸ ಕಲ್ಲುಮಠದ ಪ್ರಭುದೇವರು ಮಗ್ಗೆಯ ಮಾಯಿದೇವ ಮುಂತಾದ ನೂರೊಂದು ವಿರಕ್ತರು ಶರಣಮಾರ್ಗವಾದ ಷಟ್‌ಸ್ಥಲ ಸಿದ್ಧಾಂತವನ್ನು ಪುನರುಜ್ಜೀವನಗೊಳಿಸಿ, ನಿಜಭಕ್ತಿಯೇ ಪಂಚಮ ಪುರುಷಾರ್ಥ ವೆಂಬುದನ್ನು ನಿಜಾನುಭಾವದಲ್ಲಿ ಕಂಡು ಅರಿವಿನಾಚರಣೆಯನ್ನು ಮಾನವ ಕುಲದ ಹೃದಯದಲ್ಲಿ ಬಿತ್ತಿದರು. ಮಾನವ ಕುಲಕೋಟಿಗೆ ತೆರೆದಿಟ್ಟ ಈ ಶರಣ ಮಾರ್ಗ ಮಸುಳಿಸಿದರೆ ಅದೇ ಶತಮಾನದ ಕೊನೆಯ ಭಾಗದಲ್ಲಿದ್ದ ವಿಜಯ ನಗರದ ವಿರೂಪಾಕ್ಷರಾಯನ (೧೪೬೭-೧೪೭೮) ಕಾಲದಲ್ಲಿ ತೋಂಟದ ಸಿದ್ಧಲಿಂಗ ಮತ್ತೆ ವೀರಶೈವ ಷಟ್‌ಸ್ಥಲ ಮಾರ್ಗದ ಪರಮೋತ್ಕೃಷ್ಟತೆಯನ್ನು ಅರಿದು, ಅನುಭವಿಸಿ, ನಡೆದು, ನುಡಿದು ತೋರಿ ಜಗತ್ತನ್ನು ಪಾವನಮಾಡಿ, ಮಾನವಕೋಟಿಯ ಕಲ್ಯಾಣಮಾಡಿದ. ದ್ವಿತೀಯ ಪ್ರಭುವೆನಿಸಿದ; ಅವತಾರ ವೆನಿಸಿದ; ವೀರಶೈವ ಸಾಹಿತ್ಯದ ಪುನರುತ್ಥಾನಕ್ಕೆ ಕಾರಣಪುರುಷನೆನಿಸಿದ. ಶೂನ್ಯಸಂಪಾದನೆಯ ಸಂಪಾದಕರಾದ ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧವೀರಣ್ಣೊಡೆಯ ಮತ್ತೆ ಘನಲಿಂಗದೇವ, ಸ್ವತಂತ್ರ ಸಿದ್ಧಲಿಂಗೇಶ್ವರ ಮುಂತಾದ ವಚನಕಾರರು ಮತ್ತು ಪುರಾಣ ಚರಿತೆಕಾರರು ಸಿದ್ಧಲಿಂಗನ ಸಂಪ್ರದಾಯದ 'ಕಂದ'ರೆ. ಈ ತೋಂಟದಾರ್ಯ ಬದುಕಿದ್ದ ಕಾಲದಲ್ಲಷ್ಟೆ ಅಲ್ಲ, ಇಂದಿಗೂ ಆತನ ಎಡೆಯೂರ ಸಮಾಧಿಸ್ಥಾನ ಜಾಗ್ರತಸ್ಥಾನ, ಅದೊಂದು ಪರಮ ಪುಣ್ಯ ಕ್ಷೇತ್ರ. ಇಂದಿಗೂ ಅಲ್ಲಿ ನಡೆಯುತ್ತಿರುವ ಅನೇಕ ಜೀವಂತ ಪವಾಡಗಳನ್ನು ನೀವು ಕೇಳಬಹುದು. ನಮ್ಮ ಜನಜೀವನದಲ್ಲಿ ತೋಂಟದ ಸಿದ್ಧಲಿಂಗ ಎಚ್ಚರ ವಾಗಿಯೇ ಇದ್ದಂತಿದೆ. ತೋಟಪ್ಪ, ತೋಟವ್ವ, ತೋಟಯ್ಯ, ಸಿದ್ಧಲಿಂಗ-ಅಪ್ಪ-ಅವ್ವ-ಅಯ್ಯ ಎಂಬ ಹೆಸರುಗಳು ಶಿವಯೋಗಿಯ ಪ್ರಭಾವದ ಮಿಂಚುಗಳೇ. ಎಡವಯ್ಯ, ಎಡವಣ್ಣವರ ಎಂಬ ಹೆಸರು ಎಡೆಯೂರ ಹೆಸರೇ ಆಗಿರಬಹುದಲ್ಲವೆ?

ತೋಂಟದ ಸಿದ್ಧಲಿಂಗೇಶ್ವರನ ದಿವ್ಯ ಜೀವನದ ಅಂಶಗಳಲ್ಲಿ 'ಇತಿಹಾಸ' ವೆಂಬ ಅಂಶಗಳನ್ನು ನಾವು ನಂಬಬಹುದು. ಆದರೆ........

೧. ನಾರದ, ಅವತಾರ, ಪವಾಡ, ೬ ತಿಂಗಳ ಶಿವಯೋಗ ಸಮಾಧಿ – ಇಂಥ ಮಾತುಗಳನ್ನು ಕೇಳಿ ಮಾನವನ ಬುದ್ಧಿ ಸಿಡಿದೆದ್ದು ನಿಲ್ಲುತ್ತದೆ. ದಿಗಿಲು-ಭುಗಿಲೆಂದು ಉರಿಯುತ್ತಿರುವ ಈ ಪ್ರಶ್ನೆಗಳ ಮುಂದೆ ನಿಲ್ಲಬಲ್ಲ ಗರುವರಾರು? ಆದರೆ ಇಲ್ಲಿ ಒಂದು ಮಾತು : ಈ 'ಜ್ವಲಂತ' ಪ್ರಶ್ನೆಗಳಿಗೆ ನಾವು ಉತ್ತರ ವನ್ನು ಹುಡುಕುತಿದ್ದೇವೆಯೇ ? ಬಾಹ್ಯ ಪ್ರಪಂಚದ ಬಹಿರಂಗವನ್ನು ಪರೀಕ್ಷಿಸಿ,

ನಿರೀಕ್ಷಿಸಿ, ಪ್ರಯೋಗ ಮಾಡಿ 'ಫಲಿತ' ಗಳಿಂದ ಬಲಗೊಳ್ಳುತ್ತಿದೆ ' ಬಹಿರಂಗ ವಿಜ್ಞಾನ '. ಇದರ ಆರ್ಘಟದಲ್ಲಿ ಅಂತರಂಗದ ಕಡೆ ಹೊರಳುವದು ಮಾನವ ಬುದ್ಧಿಗೆ 'ಅಗೌರವ', 'ಅಪಮಾನ' ವೆನಿಸುವಂತಿದೆ. ಈ ಗೌರವ ಈ ಮಾನ ವಂತಿಕೆ ಕಡೆಗಣಿಸುವ 'ನಾರದ', 'ಅವತಾರ', 'ಪವಾಡ', 'ಸಮಾಧಿ' ಗಳ ಸತ್ಯಾರ್ಥವನ್ನು ತೋರಬಲ್ಲ ಒಂದು 'ಅಂತರಂಗ ವಿಜ್ಞಾನ' ಇರಬಹುದೇ ? ಒರಲುವ ಭೂಮಿಯ ಕೂಗು, ಸ್ವರ್ಗ, ಕೈಲಾಸ, ವೈಕುಂಠಗಳನ್ನು ಮುಟ್ಟ ಬಲ್ಲುದು ಮುಟ್ಟಿಸಬಲ್ಲ ಶಕ್ತಿಯ ಪ್ರತೀಕವೇ ನಾರದ ಮುನೀಶ್ವರನೆಂದು ಹೇಳಿ, ಆತನ ಕೈ ಬಿಟ್ಟರೂ ಉಳಿದ 'ಪವಾಡ', 'ಅವತಾರ', 'ಶಿವ ಯೋಗ' ದ ಪ್ರಶ್ನೆಗಳ ಗತಿ ಏನು ? ಮಾನವನ ಅಂತರಂಗದ ಗಂಭೀರವನ್ನು, ವಿಶ್ವಾಂತರಂಗದ ರಹಸ್ಯವನ್ನು ಭೇದಿಸಬಲ್ಲ ಅಂತರಂಗದ ಅನುಭಾವ, 'ಅಂತ ರಂಗದ ವಿಜ್ಞಾನ' ಪ್ರಶ್ನೆಗಳಿಗೆ ಉತ್ತರ ತರಬಹುದಲ್ಲವೇ ? ಉತ್ತರ ನಕಾರ ವಾದರೆ ನಾವು ಅವನ್ನು ನಂಬಬೇಕೆ ? ತನ್ನ ಅಂತರಂಗವನ್ನು ತಾನನುಭವಿಸಿ ಪ್ರತ್ಯಕ್ಷ ನೋಡಬಲ್ಲ ಅಂತರಂಗದಲ್ಲಿಯ ಪ್ರಮಾಣಕ್ಕೆ ಒಂದು ದೊಡ್ಡ ತೊಡಕು ತೊಂದರೆ ಇದೆ. 'ಬಹಿರಂಗದ ವಿಜ್ಞಾನ' ದಲ್ಲಿ ಪ್ರಯಾಣ ಮಾಡುವಾಗ ನಾನು, ನನ್ನ ಬುದ್ಧಿ, ನನ್ನ ಕಣ್ಣು ಕೈಕಾಲು ಮುಂತಾದುವೆಲ್ಲ ಬೇಕು. ಆದರೆ ' ನಾನು ' ' ನನ್ನ ಬುದ್ಧಿ ' ಮುಂತಾದುವೆಲ್ಲ ಅಂತರಂಗದ ಅರಿವಿನ ನಾಡಿನಲ್ಲಿ ನಡೆಯಲಾರವು. ಮನ, ಬುದ್ಧಿ, ಅಹಂಕಾರಕ್ಕೆಲ್ಲ ಆಶ್ರಯಸ್ಥಾನ ವಾದ ಅರಿವು ತನ್ನೊಳಗೆ ತಾನೆ ನಡೆಯಬೇಕು; ತನ್ನನ್ನು ತಾನೇ ನೋಡ ಬೇಕು; ತನ್ನ ಅಂತರಂಗದಲ್ಲಿ ಮಲಗಿರುವ ಅದ್ಭುತಗಳನ್ನು ಎಚ್ಚರಿಸುತ್ತ, ಹುದುಗಿಕೊಂಡಿರುವ ದಿವ್ಯವನ್ನು, 'ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭು' ವನ್ನು ಬಯಲಿಗೆ ತರಬೇಕು. ಆಗ ತಿಳಿಯಬಹುದು ಶಿವಯೋಗ ಸಮಾಧಿಯ ಆರು ತಿಂಗಳು. ಆಗ ತಿಳಿಯಬಹುದು ಇಹ-ಪರ, ಭೂಮಿ-ಸ್ವರ್ಗ, ಮಾನವ-ದೇವ, ವಿಶ್ವಬ್ರಹ್ಮಾಂಡ-ತಾನು ಈ ಎಲ್ಲಾ ನಡುವೆ ಬಿರುಕು ಇಲ್ಲದ ಒಂದು ದೇಹ, ಒಂದು ಪ್ರಾಣ, ಒಂದೇ ಭಾವ ಎಂಬ ಸಂಗತಿ. ಈ ವಿಶ್ವೈಕ್ಯ ಭಾವದ ಅನುಭಾವದಲ್ಲಿ ಒಂದಕ್ಕಾದ ನೋವು ಎಲ್ಲಕ್ಕೆ; ಭೂಮಿಗೆ ನೋವಾ ದರೆ ಕೈಲಾಸ ಅಳಲೇಬೇಕು; ಕೈಲಾಸ ಅವತರಿಸಲೇಬೇಕು. ನಿಸರ್ಗದ ನಿಯಮಗಳನ್ನು ಕೆಲಪುಟ್ಟಿಗೆ ಬದಿಗೊತ್ತಿ ತನ್ನ ದೇಹ, ಪ್ರಾಣ, ಭಾವವಾದ ಭೂಮಿಯ ಕುಲಕ್ಕೆ ಸ್ವಸ್ಥಾನವನ್ನು ನೀಡಲೇಬೇಕು; 'ಪವಾಡ' ನಡೆಯಲೇ ಬೇಕು. ಆದರೆ ' ಅಂತರಂಗ ವಿಜ್ಞಾನ ' ಸಂಭವನೀಯವೆ ? ಪಾತಾಳದಲ್ಲಿ ಮಲಗಿ ಆಕಾಶದ ನಕ್ಷತ್ರಕೋಟಿಯ ಸಂಭವವನ್ನು ಪ್ರಶ್ನಿಸುವಂತಿದೆ ಈ ಪ್ರಶ್ನೆ.

ಅಂತು ನಮ್ಮ ಪ್ರಶ್ನೆಗಳಿಗೆ ಉತ್ತರ ನಮ್ಮಲ್ಲಿಯೆ ಇದ್ದು ಒಳಗೊಳಗೇ ನಗುತ್ತಿರಬಹುದೇನೋ ? ಬಹಿರಂಗದ ಸಾಹಸ ಅಂತರಂಗದ ಕಡೆಗೂ ತಿರುಗಿದರೇ ? ಅಂತರಂಗವನ್ನು ಸಂಶೋಧನೆ ಮಾಡಿದ ಅನುಭಾವಿಗಳ ಕಡೆ ತಿರುಗಿದರೆ ? ಅಂತರಂಗದ ಅರಿವಿನ ಆಳದಲ್ಲಿ, 'ನಾನು ನನ್ನ ಬುದ್ಧಿ' ಮುಂತಾದ ಕರಣಗಳ ಸದ್ದಡಗಿಸಿ, ಅನುಭಾವ ಮಾರ್ಗನಿಡಿದು ನಡೆಯುತ್ತ ನಡೆಯುತ್ತ ಶೋಧನೆ ಮಾಡುತ್ತ ಮಾಡುತ್ತ ತನ್ನನ್ನು ತಾನು ಸಾಧನೆ ಮಾಡಿಕೊಳ್ಳುವವೇ ಗುರು-ಶಿಷ್ಯ ಸಂಪ್ರದಾಯದ ನಿಜವಾದ ವಿಶೇಷಾರ್ಥ. ಈ ಅಂತರಂಗದ ಮಾರ್ಗ ವನ್ನು ಸುಗಮ ಮಾಡಿ ಕೊಡುತ್ತಾನೆ ಸದ್ ಗುರು. ತೋಂಟದಾರ್ಯರೆ ಹೇಳಿದ 'ಬ್ರಹ್ಮರಂಧ್ರದಲ್ಲಿ ಇಪ್ಪ ನಾದ ಚೈತನ್ಯವಪ್ಪ ಚಿತ್‌ಕಳೆಯನೆ ಭಾವ ಮನ ಕರದಲ್ಲಿ ಶ್ರೀ ಗುರು ತಂದು ಸಾಹಿತ್ಯವ ಮಾಡಿದನಾಗಿ....' ಎಂಬ ಮಾತಿನಲ್ಲಿ ಶ್ರೀಗುರು ತನ್ನ ಹಸ್ತ ಶಿಷ್ಯನ ಮಸ್ತಕ ಸಂಯೋಗದಿಂದ ಚಿತ್ ಕಳೆ,ಚಿಜ್ಜ್ಯೋತಿಯ ಪ್ರಕಾಶ ಕಿರಣವನ್ನು ಹೊರತೆಗೆದು ಕೊಟ್ಟರೆ, ಈ ಜ್ಯೋತಿಯ ಬೆಂಒಳಿಯಲ್ಲಿ ಮುಂದೆ ಮುಂದೆ ನಡೆದು ಒಳಹೊರಗೆನ್ನದೆ ಬೆಳಗುವ ಲಿಂಗದ ನಾಡಿಗೆ ನಡೆಯ ಬೇಕು. 'ಗುರುಪುತ್ರ' ತನ್ನ ಅಂಗದಲ್ಲಿ ಲಿಂಗ ಮುಳುಗಿ, ಆ ವಿಶ್ವಮಯ ವಿಶ್ವಾತೀತ ವಿಶ್ವಾಂತರ್ಯಾಮಿಯಾದ ಲಿಂಗದಲ್ಲಿ ತನ್ನ ಅಂಗ ಮುಳುಗಿ, ಸರ್ವಾಂಗ ಲಿಂಗ ಮಯವಾಗಿ ಎಚ್ಚತ್ತು ಬದುಕಬೇಕು. ಹೀಗೆ ಎಚ್ಚತ್ತಿರುವ ಸದ್‌ಗುರುವೇ ಬ್ರಹ್ಮರಂಧ್ರದ ಚಿತ್‌ಕಳೆಯನ್ನು ದೀಪಿಸಬಲ್ಲ. ಲಿಂಗಮಯವಾಗಿ ಒಳಗೆ ಹೊರಗೆ ಎಚ್ಚರವಾದ ಶಿಷ್ಯನೇ ತಾನು ಸದ್ಗುರುವಾಗಿ ತನ್ನ ಶಿಷ್ಯನನ್ನು ದೀಪಿಸಬಲ್ಲ. ಒಂದು ದೀಪದಿಂದ ಮತ್ತೊಂದು, ಅದರಿಂದ ಇನ್ನೊಂದು ಹೀಗೆ ಪ್ರಜ್ವಲವಾಗುತ್ತ ಹೋಗುವ ಮಹಾ ಬೆಳಗಿನ, ಮಹಾಲಿಂಗದ ಸಂಪ್ರದಾಯವೆ ಗುರು-ಶಿಷ್ಯ ಸಂಪ್ರದಾಯ. ಅಂತರಂಗದ ಮಹಾ ಬೆಳಗನ್ನು ಹೊತ್ತಿಸಿ, ಬಹಿರಂಗಕ್ಕೆ ತಂದು ಆಚರಿಸಲೆಂದು ಮಠ ಮಾನ್ಯಗಳಿವೆ; ಮಠ ಪೀಠಾಧಿಪತಿಗಳ ಗುರು ಪರಂಪರೆ, ಶಿಷ್ಯ ಪರಂಪರೆ ಇದೆ. ಈ ಸಂಪ್ರದಾಯದಲ್ಲಿ ಬೆಳಗೇ ಕಳೆದು ಹೋದರೆ ಮತ್ತೇನು ಗತಿ ? ಎಲ್ಲರಿಗೂ ಮತ್ತೆ 'ಮಾನವಗತ್ತಲೆ'ಯೆ ಶರಣು ! ಜ್ಯೋತಿ ಮುಟ್ಟದ ತೃಣ, ತೃಣವಾಗಿಯೆ ಉಳಿಯಬೇಕಲ್ಲವೇ ?

ಈ ಮಹಾ ಬೆಳಗಿನ ಸೀಮೆಗೆ ಬಂದಾಗ ಗೊತ್ತಾಗುತ್ತದೆ 'ಮಾನವಲಿಂಗ'ಕ್ಕೆ ತಾನು ಎಷ್ಟು ಕತ್ತಲೆಯಲ್ಲಿದ್ದೆನೆಂದು, ತಾನು ಎಷ್ಟು ಸತ್ತು ಇದ್ದೆನೆಂದು. ಲಿಂಗದ ಬೆಳಗಿನ ಮಹಾಪ್ರಭೆಯಲ್ಲಿ ತನ್ನ ನಿಜಸ್ವರೂಪವೆಲ್ಲ ವಿಶ್ವವಿಸ್ತಾರವಾಗಿ, ವಿಶ್ವಾತೀತ ವಿಸ್ತಾರವಾಗಿ, ವಿಶ್ವ ಬ್ರಹ್ಮಾಂಡಾಂತರ್ಗತವಾಗಿ ತೋರುತ್ತದೆ, ಅಂದರೆ ಇವೆಲ್ಲ ತಾನು, ತಾನು ಇವೆಲ್ಲ ಆಗಿ ಬೆಳಗುತ್ತಾನೆ, ಬೆಳಗುತ್ತಾನೆ; ಬದುಕುತ್ತಾನೆ, ಎಲ್ಲ ಎಲ್ಲ ವಾಗಿ ಬದುಕುತ್ತಾನೆ, ನಿತ್ಯ ತಾನಾಗಿ, ಆನಂದ ತಾನಾಗಿ ಬದುಕುತ್ತಾನೆ. ಇದೇ

ಸತ್ತನಂತರುವೂ ಬದುಕಿಸುವ ಶಿವಯೋಗ ಸಮಾಧಿಯ ಪರಮ ರಹಸ್ಯ. ಮರಣವುಂಟೆ ಶರಣನಿಗೆ ? ಎಂಬ ಮಾತಿನ ಅರ್ಥ ಇದೇ ಜೀವಂತ ಸಮಾಧಿ. ಅನುಭಾವದ ಗುಣ ಧರ್ಮವೇ ಇದು; ತನ್ನ ತಾನಂದುದೆಲ್ಲಾ ತನ್ನ ತನ್ನಿರವೇ ಆಗುತ್ತ ಹೋಗುವದು. 'ಬ್ರಹ್ಮವೇದ ಬ್ರಹ್ಮೈವ ಭವತಿ' ಎಂಬ ಉಪನಿಷತ್ ದ್ರಷ್ಟಾರರ ಅರ್ಥ ಇದೇ ಅಲ್ಲವೆ ?

ಇದ್ದಕ್ಕಿದ್ದಂತೆ ಮಾನವಪ್ರಾಣಿಯಾದ ನಾನು ಸತ್ತು+ಇದ್ದೇನೆ; ಆಕಾಶ ತಾನು ಸತ್ತಿದೆ. ನಕ್ಷತ್ರ ಕೋಟಿ ತಾನು ನಾನಲ್ಲ. ವಾಯು-ಜಲ-ಭೂಮಂಡಲ ತಾನು ನನಗೆ ಸತ್ತಿದೆ, ನಾನು ಅವಕ್ಕೆ ಸತ್ತಿದ್ದೇನೆ. ನನ್ನ ಎಲ್ಲ ತಾನು ಸತ್ತು ಈ ಅತ್ಯಲ್ಪ ಪರಮಾಣು ಕಣ ನಾನು ನನಗೆ ಇದ್ದೇನೆ. ಹಿಂದೆ ನಾವು ನೋಡಿದ ಎಲ್ಲ ಎಲ್ಲ, ಎಲ್ಲಿಯೂ ಅನ್ಯ ಭಿನ್ನವಿಲ್ಲದ ಒಂದು. ಎಲ್ಲದರ ಅಂತಃಪ್ರಾಣ ಒಂದು. ಎಲ್ಲ ಎಲ್ಲದರ ನಿಜಾಂತರ್ಭಾವ ಒಂದು. ಈ ಒಂದು ಅನಂತ ಒಂದಾಗಿ ಬದುಕಿ ಇರುವ ನಿರಂಜನ ಜಂಗಮದ ನಿಲವನ್ನೆ ಪಾರ್ವತಿಗೆ ತೋರಿಸಿಕೊಡುತ್ತಾನೆ ಶಿವಮೂರ್ತಿ :

ಸಕಲ ಭುವನಂಗಳೇ ದೇಹವಾಗಲ್ ಭುಜಂ
ಕಕುಭಂಗಳುರುತರ ಬ್ರಹ್ಮಾಂಡಗಳೆನಿಪ್ಪ
ಮಕುಟವದರೊಳ್ ಶೂನ್ಯಲಿಂಗ ವಾಕಾಶಪಾನನಮುಬ್ದ ವಿತತಿ
ಜಡೆಯು ।

ಸುಕರತೆಯಿನೊಪ್ಪುತಿಹ ಚಂದ್ರ–ಸೂರ್ಯಂಗಳಂ
ಬಕಗಳ್ ರಸಾತಳವೆ ಪದತಳಗಳಾಗಿ ಚಂ-
ದ್ರಿಕೆಯ ಭಸ್ಮೋದ್ಧೂಳನಂ ಕುಲಗಿರಿಗಳಕ್ಷಮಾಲೆ ಸುರಗಿರಿ ನಂಡವು ॥

ಸುಗುಣವೇ ಕಪ್ಪರಂಪರ ಕಮಂಡಲು ಸಾಗ-
ರಗಳು ಜನನ ಸ್ಥಿತಿಮಯದ ಕಂಥೆ ಸೀಠವದು
ಜಗತಿಗುಹೆಯೋ ಅಹೋರಾತ್ರಿ ಋತುಗಳೆ ಷಟ್‌ಸ್ಥಲಂ
ಸತ್ಕ್ರಿಯಾಚಾರವು ।

ನಿಗಮನಿಕರಂ ಜ್ಞಾನಮುದ್ರೆ ವಾಙ್ಮಯ ತಾರ-
ಕೆಗಳೆ ಕುಸುಮಾಳಿ ದೃಢಮೇಖಲೆಯೆನಿಪ್ಪುದು ಭು-
ಜಗಪತಿ ಲಸತ್ ತ್ರಿಕಾಲಜ್ಞಾನ ವೈಸಿರಿಯು ರೋಮರಾಜಿಯು
ತರುಗಳು[೧] ॥

---

೧. ಸಿ. ಪು. ಸಂ. ೧ ಪ. ೮೩-೮೪

ಕೈಲಾಸದ ಶಿವನ ಹೃದಯವಾದ ಅನಾಥಿ ಭಕ್ತನ ಹೃದಯದಲ್ಲಿ ಎಲ್ಲಿ ತಾನಾಗಿ ಬೆಳಗುತ್ತಿರುವ ಈ 'ನಿರಂಜನ' ಭೂಮಿಯ ಮೇಲೆಯೂ ಹಾಗೆಯೆ ಬೆಳಗಿ, ಈಗಳು ಬೆಳಗುತ್ತಿದ್ದಾನೆಂಬ ಮಾತಿಗೆ ಸಾಕ್ಷಿ ಎಡೆಯೂರ ಶಿಲಾಶಾಸನ :

> ....ಆ ಸಿದ್ಧಲಿಂಗೇಶ್ವರನ ಮೂರ್ತಿ ಕ್ರಮವೆಂತೆಂದಡೆ:
> ಪ್ರಣವವು ಶಿರಸು, ನಮಃ ಕಾರವೆ ಭುಜ, ಶಿಕಾರವೆ ದೇಹ,
> ಯಕಾರವೆ ಪಾದ; ಅನಂತಕೋಟಿ ಬ್ರಹ್ಮಾಂಡಗಳೇ ಮಕುಟ,
> ಸಮಸ್ತ ಲೋಕಾದಿ ಲೋಕಂಗಳೇ ದೇಹದ ಜಳವಳೆಯ
> ಆಕಾಶವೇ ಮುಖ, ದಶದಿಕ್ಕುಗಳೇ ತೋಳು, ಚಂದ್ರ ಸೂ-
> ರ್ಯಾಥಿಗಳೇ ನಯನ, ಪಾತಾಳವೇ ಹೆ (ಎ?) ದೆ, ಮೇಘಂಗಳೇ
> ಜಟಾಬಂಧ, ಆ ಜಟಾಬಂಧದಲ್ಲಿ ಶೂನ್ಯಲಿಂಗ, ವೇದಪುರಾಣಂಗಳೇ
> ತ್ರಿ(?)ನಕ್ಷತ್ರಗಳೇ ಪುಷ್ಪ, ಚಂದ್ರಪ್ರಕಾಶವೇ ವಿಭೂತಿ,
> ಅಷ್ಟಕುಲ ಪರ್ವತಂಗಳೇ ರುದ್ರಾಕ್ಷಿ, ಸಮಸ್ತ ಸಮುದ್ರಂಗಳೇ
> ಕಮಂಡಲ, ಭುವನ ಸೃಷ್ಟಿಯೆ ಕಂಥೆ, ದಿವಾರಾತ್ರಿಗಳೇ ಮಠ,
> ಷಡು ಋತುಗಳೇ ಷಡುಸ್ಥಲ, ಮಹಾಶೇಷನೇ ಕಟಿಸೂತ್ರ,
> ಪರಿಪೂರ್ಣ ಜ್ಞಾನವೇ ಪಂಚಮುದ್ರೆ, ತ್ರಿಕಾಲ ಜ್ಞಾನವೇ
> ಮಹದೈಶ್ವರ್ಯ, ಮಹಾಮೇರುವೇ ದಂಡ, ಸದ್ಗುಣವೇ ಕರ್ಪರ,
> ಕುಲವೇ ಶಿವಕುಲ........ಇಂತಪ್ಪ ಅನಾದಿ ಜಂಗಮ....

ತೋಂಟದ ಸಿದ್ಧಲಿಂಗನ ಮಹಿಮೆ ಪಾತಾಳದಾಚೆ ಆಕಾಶದತ್ತತ್ತ ಹರವಿದೆ. ಇದು ಮಾನವ ಕುಲದ ಮಹಾಮಹಿಮೆ : ಮಾನವ ಕುಲದ 'ಶಿವ',-ಕುಲ ಜಾತಿ ದೇಶ ಕಾಲ ವರ್ಣ ಕಪ್ಪು ಕೆಂಪು ಬಿಳಿ ಹಳದಿ ಏನನ್ನೂ ಕೇಳದೆ— 'ಶಿವಕ್ಕೆ ಎಚ್ಚರವಾಗಿ ನಡೆದರೆ ಅದೇ ಮಾನವ ಭಕ್ತ, ಅದೇ ಮಾನವ ಮಾಹೇಶ್ವರ, ಅದೇ ಮಾನವ ಪ್ರಸಾದಿ, ಅದೇ ಮಾನವ ಪ್ರಾಣಲಿಂಗಿ, ಅದೇ ಮಾನವ ಶರಣ, ಅದೇ ಮಾನವ ಐಕ್ಯ.

ಇದೇ ತೋಂಟದ ಸಿದ್ಧಲಿಂಗ.



ಎಡೆಯೂರು

# ತೋಂಟದ ಸಿದ್ಧಲಿಂಗೇಶ್ವರರ ವಚನಗಳು

— ಎಸ್. ಎಸ್. ಭೂಸನೂರಮಠ

ದುರಿತತಮಃ ಪತಂಗ ನಮಳಾರ್ಥ ವಿವೇಚನ ಸತ್ರಸಂಗನೀ
ಶ್ವರಲಸದಂತರಂಗನಭವಾಗಮವಾರಿಜದಿವ್ಯಭೃಂಗನ
ಕ್ಷರವರಲಿಂಗಸಂಗನತಿಶಾಂತನಿರಸ್ತ ಜಡಾನುಷಂಗನೊ
ಲ್ದುರುತರ ಸಿದ್ಧಲಿಂಗಯತಿತುಂಗನೊಡರ್ಚುಗೆ ಸಜ್ಜನೇಷ್ಟಮಂ ॥

— ಮಹಾಕವಿ ಷಡಕ್ಷರಿ

ಮೇಲಣ ಸ್ತುತಿ ಮಹಾಕವಿ ಷಡಕ್ಷರದೇವನು ಮಹಾನುಭಾವಿ ಎಡೆಯೂರ ಸಿದ್ಧಲಿಂಗೇಶನ ಮಹಾವ್ಯಕ್ತಿತ್ವಕ್ಕೆ ಎತ್ತಿದ ಆರತಿಯಾಗಿದೆ. ಈ ಮಹಾಯೋಗಿ ಕುಲತಿಲಕನ ಚರಣಶ್ರೀಗೆ ಭಕ್ತಿಯ ಕುಸುಮಗಳನ್ನು ಸಲ್ಲಿಸದೆ ಕಾವ್ಯ ಪ್ರಾರಂಭ ಮಾಡದ ವೀರಶೈವ ಕವಿಗಳೇ ವಿರಳವೆಂದು ಹೇಳಿದರೆ ಅತಿಶಯೋಕ್ತಿಯಾಗ ಲಾರದು. ಭುವನದ ಭಾಗ್ಯವಿಶೇಷದಿಂದ ಹನ್ನೆರಡನೆಯ ಶತಮಾನದಲ್ಲಿ ಅಣ್ಣ ಬಸವಣ್ಣನವರು ವೀರಶೈವ ನಿರ್ಣಯ ಪರಮಾವತಾರರಾಗಿ ಕಲ್ಯಾಣಕ್ರಾಂತಿಯ ಕಾರಣಪುರುಷರಾದರೆ, ನಾಡಿನ ಪುಣ್ಯವರೇಣ್ಯರಂತೆ ಹದಿನೈದನೆಯ ಶತಮಾನದಲ್ಲಿ ವೀರಶೈವ ಧರ್ಮದ ಪುನರುಜ್ಜೀವನ ಕಾರ್ಯಕ್ಕಾಗಿಯೇ ಜೀವನವನ್ನೇ ಮುಡುಪಿಟ್ಟು ಷಟ್‌ಸ್ಥಳ ಪ್ರಭಾಪುಂಜರೆಂದು ವಿಖ್ಯಾತಿಪಡೆದವರು ಮಹಾಯೋಗಿ ಎಡೆಯೂರು ಸಿದ್ಧಲಿಂಗೇಶರು. ಅವರು ಕಲ್ಯಾಣದ ಅನುಭವಮಂಟಪದ ಅಧ್ಯಕ್ಷರಾಗಿ ವಿರಾಜಿಸಿದ ಅಲ್ಲಮಪ್ರಭುಗಳ ಅಪರಾವತಾರರೆಂದೆಣಿಸಿದ್ದಾರೆ. ವೀರಶೈವ ಧರ್ಮದ

ಯುಗಪುರುಷರ ಮಾಲಿಕೆಯಲ್ಲಿ ಧೃವನಕ್ಷತ್ರದಂತೆ ಬೆಳಗುತ್ತಿದ್ದಾರೆ. ಷಟ್‌ಸ್ಥಳ ಸಿದ್ಧಾಂತ ನಿರೂಪಣೆ ಅವರ ಭವ್ಯ ಬಾಳಿನ ದಿವ್ಯ ಫಲ. ಅವರು ರಚಿಸಿದ 'ಷಟ್‌ಸ್ಥಲಜ್ಞಾನ ಸಾರಾಮೃತ' ವೀರಶೈವ ದರ್ಶನಾಭ್ಯಾಸಿಗಳಿಗೆ ಶಿವಸುಖದ ಸವಿಯನ್ನು ಮನವಾರೆ ಉಣಿಸುವ ಅಮೂಲ್ಯ ಗ್ರಂಥ ರತ್ನ. ಅವು ಚೆಲುವಿನಾಗರ, ಶಿವ ಸಾಕ್ಷಾತ್ಕಾರದ ಸೋಪಾನಗಳು; ಭವಸಾಗರವನ್ನು ದಾಟಿಸುವ ಹರಿಗೋಲು. ಈ ಗ್ರಂಥದಲ್ಲಿ ೭೦೧ ವಚನಗಳಿವೆ; ೭ ವೃತ್ತಗಳಿವೆ. 'ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ' ಎಂಬುದು ಅವರ ಅಂಕಿತ. ಈ ವಚನಗಳಲ್ಲಿ ಷಟ್‌ಸ್ಥಳ ತತ್ವಗಳು ಅತ್ಯಂತ ಸೂಕ್ಷ್ಮ ರೀತಿಯಿಂದ ವಿವರಿಸಲ್ಪಟ್ಟಿವೆ. ಅವು ಕಾವ್ಯದ ಮೆರುಗನ್ನು ಪಡೆದಿವೆ; ಸಾಹಿತ್ಯದ ಸೌರಭವನ್ನು ಸೂಸಿವೆ. ಅವು ಅಪಾರ ಅನುಭವದ ಅಮೃತಸಮ ಅಣಿಮುತ್ತುಗಳು. ತತ್ವಜ್ಞಾನದಂತಹ ಶಾಸ್ತ್ರೀಯ ವಿಷಯಗಳೂ ಕೂಡ ವಚನವಾಙ್ಮಯದಲ್ಲಿ ಕಾವ್ಯವಾಗಿ ಮೈವೆತ್ತಿರುವದೊಂದು ವೈಶಿಷ್ಟ್ಯವೇ ಸರಿ. ವೀರಶೈವ ದರ್ಶನದ ಮಹತ್ವದ ಅಂಶಗಳು ಇವುಗಳಲ್ಲಿ ವಿವರ ವಿವರವಾಗಿ ಬರುತ್ತವೆ. ತುಂಬಿ ಹರಿಯುವ ತುಂಗಭದ್ರೆಯಂತಿರುವ ಅವರ ವಚನಗಳ ಅವಲೋಕನ ಮಾಡಿದರೆ, ಶಿವಯೋಗಿಗಳ ಅಸಾಧಾರಣ ಪ್ರತಿಭೆಯನ್ನು ಮನಗಾಣಬಹುದು. ಅವುಗಳಲ್ಲಿ ಬರುವ ವೇದಶಾಸ್ತ್ರ, ಪುರಾಣ ಆಗಮಗಳ ಉಲ್ಲೇಖಗಳು ಅವರ ಅಗಾಧ ಪಾಂಡಿತ್ಯಕ್ಕೆ ನಿದರ್ಶನಗಳಾಗಿವೆ. ಇವು ಜನಮನದಲ್ಲಿ ಶಾಶ್ವತ ಸ್ಥಾನವನ್ನು ಪಡೆದುಕೊಂಡಿವೆ. ಅವರ ಸಮಗ್ರ ವಚನಗಳ ವಿವೇಚನೆ, ವಿಶ್ಲೇಷಣೆ ಮಾಡುವುದು ಈ ಚಿಕ್ಕ ಲೇಖನದಲ್ಲಿ ಕಷ್ಟಸಾಧ್ಯ. ಕರಿಯು ಕನ್ನಡಿಯಲ್ಲಡುಗುವಂತೆ ಇಲ್ಲಿ ಕೆಲವೇ ಗಮನಾರ್ಹ ವಚನಗಳನ್ನು ಎತ್ತಿಕೊಂಡು ವಿವೇಚಿಸಲಾಗಿದೆ.

ಮಹಾನುಭಾವಿ ಅಣ್ಣ ಬಸವಣ್ಣ ಮೊದಲಾದ ಪ್ರಮಥಾದಿಗಳ ಬಗೆಗೆ ಸಿದ್ಧಲಿಂಗೇಶರಿಗೆ ಅನನ್ಯಸದೃಶವಾದ ಭಕ್ತಿ, ಶ್ರದ್ಧೆ, ಅವರಿಗೆ, ತಮ್ಮ ಕೃತಜ್ಞತೆಯ ಕುಸುಮಾಂಜಲಿಯನ್ನು ಅರ್ಪಿಸಿದ ಆ ವಚನ ಹೀಗಿದೆ:

ಬಸವಣ್ಣನ ಪ್ರಸಾದದಿಂದ ಭಕ್ತಿ ವೈರಾಗ್ಯ ಸಂಪನ್ನನಾದೆನಯ್ಯ
ಚೆನ್ನಬಸವಣ್ಣನ ಪ್ರಸಾದದಿಂದ ಷಟ್‌ಸ್ಥಲ ಜ್ಞಾನಸಂಪನ್ನ
ನಾದೆನಯ್ಯ
ಪ್ರಭುದೇವರ ಪ್ರಸಾದದಿಂದ ಪರಶಿವತತ್ವಸ್ವರೂಪವೇ ಎನ್ನ
ಸ್ವರೂಪವೆಂದಱಿದು
ಸಮಸ್ತ ಸಂಸಾರ ಪ್ರಪಂಚ ಕೊಡಹಿದೆನು ನೋಡಾ
ನೀಲಲೋಚನೆಯಮ್ಮನ ಪ್ರಸಾದದಿಂದ ನಿಜಲಿಂಗೈಕ್ಯನಾದೆನಯ್ಯ

ಮಹಾದೇವಿಯಕ್ಕಗಳ ಪ್ರಸಾದದಿಂದ
ಸುತ್ತಿದ ಮಾಯಾ ಪಾಶವ ಹರಿದು ನಿರ್ಮಾಯನಾಗಿ ನಿರ್ವಾಣ
ಪದದಲ್ಲಿ ನಿಂದೆನಯ್ಯ
ಸಿದ್ಧರಾಮಯ್ಯನ ಪ್ರಸಾದದಿಂದ ಶುದ್ಧ ಶಿವತತ್ತ್ವವ ಹಡೆದೆನಯ್ಯ
ಮೋಳಿಗೆಯ ಮಾರಿತಂದೆಗಳ ಪ್ರಸಾದದಿಂದ
ಕಾಯದ ಕಳವಳವನಳಿದು ಕರ್ಮನಿರ್ಮಲನಾಗಿ
ವೀರ ಮಹೇಶ್ವರನಾದೆನು ನೋಡಾ
ಇವರು ಮುಖ್ಯವಾದ ಏಳುನೂಱೆಪ್ಪತ್ತಮರಗಣಂಗಳ ಪರಮ
ಪ್ರಸಾದದಿಂದ
ಎನ್ನ ಕರಣಗಳೆಲ್ಲವೂ ಲಿಂಗಕರಣಂಗಳಾಗಿ
ಕರಣೇಂದ್ರಿಯಗಳ ಕಳೆಕಳೆದು
ಇಂದ್ರಿಯಗಳಿಗೆ ನಿಲುಕದ ಸ್ಥಾನದಲ್ಲಿರ್ದು
ಪರಮಾನಂದ ಪ್ರಭಾಮಯನಾಗಿರ್ದೆನು ನೋಡಾ
ನಿಮ್ಮ ಶರಣರ ಪ್ರಸಾದದಿಂದ ನಾನು ಪ್ರಸಾದಿಯಾಗಿರ್ದೆನು ನೋಡಾ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !

ಶ್ರೀ ಎಡೆಯೂರ ಸಿದ್ಧಲಿಂಗೇಶರ ವ್ಯಕ್ತಿತ್ವ ವಿಕಾಸದ ಪ್ರಥಮ ಹಂತವಿದು. ಈ ಮೊದಲು ಬೆಳಗಿ ಬೆಳಕು ತೋರಿಸಿದ ದಿವ್ಯಾತ್ಮರ ಮಹಾನ್ ತತ್ವಗಳನ್ನು ಕ್ರೋಡೀಕರಿಸುವಲ್ಲಿ ಈ ವಚನದ ಮಹತಿಯನ್ನು ಗುರುತಿಸಬಹುದು. ಶ್ರೀಗಳ ವಚನ ವಾಙ್ಮಯದ ಆಳವಾದ, ಸೂಕ್ಷ್ಮವಾದ ಅಭ್ಯಾಸ ಅನುಭವಗಳ ಸಮನ್ವಯ ರೂಪವಿದು. ಸಂದಿಲ್ಲದ ಲಿಂಗ-ಶರಣ ಭಾವವನ್ನು ಸಾಧಿಸಿಕೊಂಡ ಶಿವಯೋಗಿಗಳಿಗೆ ಚನ್ನಬಸವಣ್ಣನೇ ಅವರಂತರಂಗದ ಸುಜ್ಞಾನ ಪ್ರಾಣಲಿಂಗ, ಬಸವಣ್ಣನೇ ಅಂಗಲಿಂಗ ಪ್ರಾಣಲಿಂಗ, ಭಾವಲಿಂಗ. ಕೊನೆಗೆ ಸರ್ವಾಂಗ ಲಿಂಗವಾಗಿ ಪರಿಣಮಿಸಿ ಬಸವಲಿಂಗಾ ಬಸವಲಿಂಗಾ ಎಂದು ಜಪಿಸಿ ಭವಾರ್ಣವವನ್ನು ದಾಟಿ ಬಸವನೇ ಪತಿಯಾಗಿ, ತಾವೇ ಸತಿಯಾಗಿ 'ಶರಣ ಸತಿ–ಲಿಂಗ ಪತಿ' ಭಾವವನ್ನು ನಿಜದಲ್ಲಿ ನಿಂದ ಶಿವಯೋಗಿಗಳು ಅವರು.

ಸಿದ್ಧಲಿಂಗೇಶರು ಬೆಳಗಾಗುತ್ತಲೇ ಪ್ರಸಿದ್ಧಿಗೆ ಬಂದವರಲ್ಲ, ಪವಾಡಗಳ ಮಹಿಮೆಯಿಂದ ಮಹಿಮಾನ್ವಿತರಾಗಲಿಲ್ಲ. ಅವು ಸಹಜ ಆಚರಣೆಗಳಿಂದ ನಡೆದ ಘಟನೆಗಳು. ತಮ್ಮ ಅವಿರತ ಸಾಧನೆ, ಅಪ್ರತಿಮ ಸಿದ್ಧಿ, ಉಗ್ರ ತಪಸ್ಸುಗಳಿಂದಾಗಿ ಮೇಲು ಮೇಲಕ್ಕೆ ಬಂದವರು. ಗೋಸಲ ಚನ್ನಬಸವೇಶ್ವರರು ಇವರ ಪರಮ ಗುರುಗಳು. ಅವರ ಪಾದತಲದಲ್ಲಿ ಆತ್ಮವಿಕಾಸ–ಆತ್ಮೋನ್ನತಿ

ಮಾಡಿಕೊಂಡ ಪುಣ್ಯಜೀವಿ; ಅನಾಚಾರ, ಅತ್ಯಾಚಾರ, ಹಿಂಸೆ, ನಿರಾಶೆ, ಅಶಾಂತಿ ಅಡಗಿಸಿ ಶಿವಭಕ್ತಿಯನ್ನು ನೆಲೆಗೊಳಿಸಿದ ಮಹಾತ್ಮರು. ಸಕಲ ಜೀವಿಗಳಿಗೆ ಲೇಸನೇ ಬಯಸಿದ ಮಹಾಪುರುಷರು.

ಕೆಳಗಿನ ವಚನಗಳು ಅವರ ಹೃದಯ ತುಮುಲವನ್ನು ಪ್ರತಿಬಿಂಬಿಸಿ ನಿಂತಿವೆ. ಏನಾದರೂ ಆಗಬಹುದು, ಭಕ್ತನಾಗುವುದು ಬಹು ಕಷ್ಟ. ಕಾಮ-ಕ್ರೋಧ-ಮದ ಮತ್ಸರಗಳನ್ನು ಕಳೆದುಕೊಳ್ಳಬೇಕು.

ಕಾತರದಿಂದ ಕರಗಿದೆನಯ್ಯ, ಕ್ರೋಧದಿಂದ ಕೊಱಗಿದೆನಯ್ಯ;
ಲೋಭ ಮೋಹಗಳಿಂದ ಅತಿ ನೊಂದೆನಯ್ಯ
ಮದ ಮತ್ಸರಗಳಿಂದ ಬೆದ ಬೆದನೆ ಬೆಂದೆನಯ್ಯ;
ಅಹಂಕಾರ ಮಮಕಾರದಿಂದ ಮತಿ ಮಂದನಾಗಿರ್ದೆನಯ್ಯ

ಇದು ಕಾರಣ—

ಎನ್ನ ಕಾಮಾದಿ ಷಡು ವರ್ಗಂಗಳ ಕಳೆದು
ಅಹಂಕಾರ ಮಮಕಾರಂಗಳ ಮಾಣಿಸಿ,
ನಿರಹಂಕಾರಿ ಎಂದೆನಿಸಯ್ಯ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ

ಎಂದು ತಮ್ಮ ನೆಚ್ಚಿನ ಮೆಚ್ಚಿನ ದೈವವನ್ನು ಅಂಗಲಾಚಿ ಬೇಡಿಕೊಳ್ಳುತ್ತಾರೆ. ಏಕೋಭಾವದಿಂದ ಪ್ರಾರ್ಥಿಸಿದ ಭಕ್ತನಲ್ಲಿ ಏಕದೇಹಿಯಾಗಿ ಎರಡೊಂದಾಗಿ ಬೆರೆಯುವ, ಬೆಳಗು ಅದು. ಆ ಪರಮ ಪರಂಜ್ಯೋತಿಯನ್ನು ಕಂಡ ಶಿವಯೋಗಿಗಳ ವಚನವಿದು.

'ಮುಚ್ಚಿದ ಕಣ್ಣು ತೆಱದುದ ಕಂಡೆ;
ಕಿಚ್ಚಿನ ಜ್ವಾಲೆ ಕಱವುದ ಕಂಡೆ
ಮೃತ್ಯುಗಳ ಮೊತ್ತ ಕಿತ್ತೋಡುವುದ ಕಂಡೆ
ಕತ್ತಲೆ ಬೆಳಗಾದುದು ಕಂಡೆ
ಬಿಚ್ಚಿ ಬೇಱಲ್ಲದ ಬೆಳಗನೊಳಗೊಂಡ
ನಿತ್ಯ ಪ್ರಸನ್ನನಾದೆನಯ್ಯ
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ'

ಎಂದು ಮನತುಂಬಿ ಹಾಡಿದ್ದಾರೆ. ಇವು ಉನ್ನತಮಟ್ಟದ ಭಾವಗೀತೆಗಳಂತಿವೆ.

"ಹೊನ್ನ ಬಿಟ್ಟೆ ಹೆಣ್ಣ ಬಿಟ್ಟೆ ಮಣ್ಣ ಬಿಟ್ಟೆ ಎಂದು ಜಗದ ಕಣ್ಣ ಕಟ್ಟಿ ಮರೆವ ಕಣ್ಣ ಬೇನೆಯ ಬಣ್ಣದ ಅಣ್ಣಗಳು ನೀವು ಕೇಳಿಭೋ. ಮಾತಿನಲ್ಲಿ ಬಿಟ್ಟರೂ ಮನದಲ್ಲಿ ಬಿಟ್ಟರೋ ? ಈ ನೀತಿಯ ಹೇಳಿರಿ ಎನಗೊಮ್ಮೆ. ತನುಮನದ ಮಧ್ಯದಲ್ಲಿ ಇವರ ನೆನಹು ಕೊಟ್ಟು ಲಿಂಗದ ನೆನಹಿನ ಆ ಮತವೇ ಸ್ವಾಯತವಾಗಿ ಇರಬಲ್ಲರೆ ಇವ ಬಿಟ್ಟರೆಂದೆಂಬೆನಯ್ಯಾ. ಮಾತಿನಲ್ಲಿ ಬಿಟ್ಟು ಮನದಲ್ಲಿ ಉಳ್ಳರೆ ಭವದಲ್ಲಿ ತಂದು ಇವ ಕಚ್ಚಿಸಿದ್ದಲ್ಲದೆ ಮಾಣವು ಕಾಣಿರಯ್ಯ. ಹಿಡಿದು ಸಂಸಾರಿಗಳಲ್ಲ ಬಿಟ್ಟು ನಿಸ್ಸಂಸಾರಿಗಳಲ್ಲ. ಎರಡು ಅಲ್ಲದವರನು ಏನೆಂಬೆನಯ್ಯಾ."

ಮೇಲಣ ಮುತ್ತಿನಂತಹ ಮಾತುಗಳು ಇಂದಿನ ಜನ ಜೀವನಕ್ಕೂ ಅನ್ವಯಿಸುವಂತಿವೆ. ಇಂದಿನ ಕಲುಷಿತ ಸಮಾಜ ಜೀವನದ ವಿಮರ್ಶೆ ಇದು. ಶ್ರೀ ಶಿವಯೋಗಿಗಳು ಆಡಂಬರದ ಭಕ್ತರನ್ನು ದಿಟ್ಟತನದಿಂದ ಖಂಡಿಸಿದ್ದಾರೆ. ಅವರು ಮಹಾನ್ ದಾರ್ಶನಿಕರು. ಅಂದು-ಇಂದು-ಮುಂದಿನದನ್ನು ಬಲ್ಲವರು. ಮಾನವ ಜೀವನ ಪರಿಶುದ್ಧಿಗೆ, ಪರಿಪೂರ್ಣತೆಗೆ, ಆವಶ್ಯಕ ಶ್ರೇಷ್ಠ ಗುಣಗಳನ್ನು ತಮ್ಮ ವಚನಗಳಲ್ಲಿ ರೂಪಿಸಿದ್ದಾರೆ.

ಸಾಮಾನ್ಯ ಜೀವನದಿಂದ ಉಪಮಾರೂಪಕಗಳನ್ನು ತೆಗೆದುಕೊಂಡು ತತ್ತ್ವ ನಿರೂಪಣೆ ಮಾಡಿದುದರಿಂದ ಅವರ ವಚನಗಳ ಭಾಷೆ ಸರಳವಾಗಿದೆ; ಶಾಂತಿ ಯುತವಾಗಿದೆ; ಸುಂದರವಾಗಿದೆ. ಕಿರಿದರಲ್ಲಿ ಹಿರಿದರ್ಥ; ಅಣುವಿನಲ್ಲಿ ಮಹತಿ ಕಾಣುವ ಸಾಮರ್ಥ್ಯ ಅವರಿಗೆ ಸಿದ್ಧಿಸಿದೆ. 'ಅವು ಭಾವ ಭಾರದಿಂದ ಬೀಗುತ್ತಿವೆ; ಅರ್ಥಗೌರವದಿಂದ ಹಿಗ್ಗುತ್ತಿವೆ. ಮಾದರಿಗಾಗಿ ಕೆಳಗಿನ ವಚನ ನೋಡಬಹುದು.

"ಕಾಯವೆಂಬ ಕೆರೆಗೆ ತನುವೆಂಬ ಏರಿ ಮನವೆಂಬ ಕಟ್ಟೆಯ ಕಟ್ಟಿ ದೃಢವೆಂಬ ತೂಬನು ಇಕ್ಕಬೇಕಯ್ಯ. ಆನಂದವೆಂಬ ಜಲವ ತುಂಬಿ ಸ್ವಾನುಭಾವವೆಂಬ ಸೋಪಾನವ ಹೂಡಬೇಕಯ್ಯ. ಆ ಕೆರೆಯ ಏರಿಯ ಮೇಲೆ ಆಚಾರವೆಂಬ ವೃಕ್ಷ ಬೆಳೆಯಿಸಿ ಅರುಹೆಂಬ ಹೂವನ್ನು ಅದ್ವೈತವೆಂಬ , ಹಸ್ತದಿಂದ ಕೊಯಿದು ಅನುಪಮ ಲಿಂಗಕ್ಕೆ ಪೂಜಿಸ ಬಲ್ಲರೆ ಲಿಂಗಾರ್ಚಕರೆಂಬೆ"

ತೋಂಟದ ಸಿದ್ಧಲಿಂಗ ಶಿವಯೋಗಿಗಳು ಅನೇಕ ಯೋಗಗಳನ್ನು ಖಂಡಿಸಿ ಶಿವಯೋಗವೇ ಸರ್ವ ಶ್ರೇಷ್ಠವಾದುದೆಂದು ಪ್ರತಿಷ್ಠಾಪಿಸಿದರು.

....ಅಂಗವ ತೆಗೆದಡೆ ಲಿಂಗದೊಡನೆ ಪ್ರಾಣ ಹೋಗದಾಗಿ
ಅದೆಲ್ಲಿಯ ಯೋಗವಯ್ಯ ? ಭ್ರಾಂತು ಯೋಗ.
ಅದು ಕಾರಣ ನಿಮ್ಮ ಶರಣರು ಲಿಂಗ ಪ್ರಾಣಿಗಳು
ಪ್ರಾಣಲಿಂಗ ಸಂಬಂಧಿಗಳು, ಪ್ರಸಾದ ಮುಕ್ತರು.
ಈ ಮೂಱು ಪ್ರಕಾರದಲ್ಲಿ ಕೂಡುತಿಪ್ಪರು ಶಿವಯೋಗಿಗಳು
ಇದು ಕಾರಣ ನಿಮ್ಮ ಶರಣರು
ಸ್ವಾನುಭಾವ ಜ್ಞಾನಶುದ್ಧ ಶಿವಯೋಗಿಗಳಲ್ಲ ಸ್ವರೂಪ
ಜ್ಞಾನಿಗಳು ಕಾಣಾ—

ಶಿವಯೋಗವನ್ನು ರಾಜಯೋಗವೆಂದು ಸಿದ್ಧಲಿಂಗ ಶಿವಯೋಗಿಗಳು ಕರೆದಿರುವುದು ಅರ್ಥಪೂರ್ಣವಾಗಿದೆ. ವೀರಶೈವವು ಮಾನವೀಯ ಮೌಲ್ಯಗಳ ಕಡಲು. ದಯ, ದಮ, ಸಮತೆಗಳಿಂದ ವಿಶ್ವಧರ್ಮವಾಗಬಲ್ಲ ಅರ್ಹತೆಯನ್ನು ಪಡೆದಿದೆ. ಶಿವಯೋಗವು ಈ ಧರ್ಮದ ವಿಶೇಷತೆ.

ಪ್ರಮಾಣಪೂರ್ವಕವಾಗಿ ಶಿವಯೋಗದ ಮಹತಿಯನ್ನು ತಮ್ಮ ವಚನಗಳಲ್ಲಿ ಸೊಗಸಾಗಿ ವಿವರಿಸಿದ್ದಾರೆ. ಅದು ಕ್ರಿಯಾ ಜ್ಞಾನಗಳನ್ನು ಸಮರಸಗೊಳಿಸುವ ಪರಮ ಸಾಧನ. ವೀರಶೈವನ ನಿತ್ಯ ಲಿಂಗಾರ್ಚನೆಯೇ ಶಿವಯೋಗ.

ಅನೇಕ ಅನುಭಾವದ ನಿದರ್ಶನಗಳನ್ನು ಕೊಡುವುದು ಶಿವಯೋಗಿಗಳ ಶೈಲಿಯ ಒಂದು ಸಹಜ ಗುಣವಾಗಿದೆ. ಅದಕ್ಕೊಂದು ವಚನ.

ಸುಧೆಯೊಳಗೆ ವಿಷವುಂಟೆ ? ಮಧುರದೊಳಗೆ ಕಹಿಯುಂಟೆ ?
ದಿನಮಣಿಯೊಳಗೆ ಕಪ್ಪುಂಟೆ ? ಬೆಳದಿಂಗಳೊಳಗೆ ಕೆಚ್ಚುಂಟೆ ?
ಅಮೃತಸಾಗರದೊಳಗೆ ಬೇವಿನ ಬಿಂದುವುಂಟೆ ?

ಶರಣರಿಗೆ ಸಂಕಲ್ಪ ವಿಕಲ್ಪಗಳಿಲ್ಲವೆಂಬುದನ್ನು ತಿಳಿಸಲು ಅನುಸರಿಸಿದ ಶೈಲಿಯಿದು.

'ಬಯಲ ಸಂಭ್ರಮದ ತಾರ್ಕಿಕರನ್ನು ಕಂಡರೆ
ಮಾಗಿಯ ಕೋಗಿಲೆಯಂತೆ ಮುಖದ ಮುನಿಸಾಗಿರಿಸಯ್ಯ'

ಮೇಲಣ ವಚನದಲ್ಲಿಯ 'ಮಾಗಿಯ ಕೋಗಿಲೆಯಂತೆ ಮುನಿಸಾಗಿರಿಸೆಂದು' ಹೇಳುವಲ್ಲಿ ಕಾವ್ಯ ಮಹೋನ್ನತ ಸ್ಥಲ ಮುಟ್ಟಿದೆಯೆಂದು ತಜ್ಞ ವಿಮರ್ಶಕರ ಅಭಿಪ್ರಾಯವಾಗಿದೆ.

ಕಾವ್ಯ ಸೌಂದರ್ಯದ ನಿದರ್ಶನಕ್ಕಾಗಿ—

ಕತ್ತಲೆಯನೊಳಕೊಂಡ ಬೆಳಕಿನಂತೆ
ಪಕ್ಷಿಯನೊಳಕೊಂಡ ಶಕ್ತಿಯಂತೆ
ಮುತ್ತನೊಳಕೊಂಡ ಚಿಪ್ಪಿನಂತೆ
ಸಾಗರವನೊಳಕೊಂಡ ಶಶಿಯಂತೆ

ಜಗವನೊಳಕೊಂಡ ಆಕಾಶದಂತೆ ಎನ್ನ ನೀವು ಒಳಕೊಂಡಿರಿ.

ಶಿವಯೋಗಿಗಳ ಮನಸ್ಸಿಗೆ ಬಂದರೆ ಒಂದಕ್ಕೆ ಹತ್ತು ಉಪಮೆಗಳನ್ನು, ದೃಷ್ಟಾಂತಗಳನ್ನು, ನಿದರ್ಶನಗಳನ್ನು ಮಾಲೆ–ಮಾಲೆಯಾಗಿ ಕೊಡಬಲ್ಲರು. ಅವರಲ್ಲಿ ಆಧ್ಯಾತ್ಮಿಕ ಅನುಭವದ ಜೊತೆಗೆ ಲೋಕಾನುಭವವು ತುಂಬಿ ತುಳಿಕಿತ್ತು.

ಈ ಕೆಳಗಿನ ಉಕ್ತಿಗಳಲ್ಲಿ ಲೋಕಾನುಭವದ ನಿಷ್ಠುರತೆಗಳು ಎಷ್ಟು ಸ್ಪಷ್ಟವಾಗಿ ಪ್ರಕಟವಾಗಿವೆ.

೧. "ಈಚಲ ತಿಂದ ನರಿ ತನ್ನ ವಿಕಾರಕ್ಕೆ ಒರಲುವಂತೆ
ಮಾತಿನ ಮುಮುಕಾರಕ್ಕೆ ಆಗಮವ ಬಲ್ಲೆವೆಂದು
ಕೂಗಿಡುವರು ನೋಡಾ"

೨. "ನೊರೆವಾಲ ಜಿಲ್ಲಿ ಕಾಟೆಗೆ ಬಯಸಿ ಬಾಯಾರುವಂತೆ"

೩. "ಕತ್ತೆಗೇಕಯ್ಯ ಕಡಿವಾಣ,
ತೊತ್ತಿಗೇಕಯ್ಯ ತೋಳಬಂದಿ
ಶ್ವಾನಂಗೇಕಯ್ಯ ಆನೆಯ ಚೌರ"

೪. "ನಾಯ ಸರಸ ಸೀರೆಯ ಕೇಡು
ಮಾಯಾಸಂಗ ಹರಣದ ಕೇಡು"

ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಳ ಜ್ಞಾನಸಾರಾಮೃತ ವಚನಗಳ ಸಾಹಿತ್ಯ ಸೌರಭವನ್ನು ಅನುಭವಿಸಬೇಕಾದವರು, ಆಳಿಯಬೇಕಾದವರು, ರಾಸಿ ರಾಸಿಯಾಗಿ ಬರುವ ಅವರ ಬೆಡಗಿನ ವಚನಗಳ ಬೆಡಗನ್ನು ಒಡೆದು ನೋಡ ಬೇಕಾಗುತ್ತದೆ. ಸಿದ್ಧಲಿಂಗ ಶಿವಯೋಗಿಗಳು ನೀತಿಯನ್ನು ನೀತಿಯಾಗಿಯೇ ಹೇಳಹೊರಟವರಲ್ಲ. ನೀತಿ, ಷಟ್‌ಸ್ಥಲ ಸಿದ್ಧಾಂತದ ಸಾರ ಸಾರಾಯ. ಶಿವ ಯೋಗಿಗಳ ಜೀವನದ ಉಸಿರು. ಷಟ್ಸ್ಥಲವನ್ನೇ ಜೀವಿಸಿದ ಶಿವಯೋಗಿಗಳ ನುಡಿ, ನೀತಿಯ ಹೊಂಬೆಳಗಿನಲ್ಲಿ ಹೊರಹೊಮ್ಮಿರುವುದು ಸಹಜವಾಗಿದೆ.

ಇವರ ವಚನಗಳು ಅನುಭವದ ಗುಡಿಯಲ್ಲಿ, ಅನುಭಾವದ ಮುಡಿಯಲ್ಲಿ ನಿಂತು, ನಿರಂತರವೂ ಮಿರುಗುವ ಜ್ಞಾನದ ಕಿಡಿಗಳು. ಜ್ಯೋತಿಯ ಕುಡಿಗಳಿಗಿವರ ವಚನಗಳು. ಜನಜೀವನದಲ್ಲಿ ಭಕ್ತಿಯ ಬೀಜಗಳನ್ನು ಬಿತ್ತಿ, ಮುಕ್ತಿಯ ಫಲಗಳನ್ನಿತ್ತು, ವೀರಶೈವ ಮತ ಧರ್ಮತತ್ತ್ವಗಳಲ್ಲಿ ಅದ್ಭುತವಾದ ಕ್ರಾಂತಿಯನ್ನು ಮಾಡಿದವು. ಸಮಾಜವನ್ನು ನಂದನವನ್ನಾಗಿ ಮಾಡಬೇಕೆಂಬ ಉದಾತ್ತ ಭಾವ, ಮರ್ತ್ಯಕ್ಕೆ ಮಹವ ತರಬೇಕೆಂಬ ಮಹದೇಶ ಅವರ ವಚನಗಳಲ್ಲಿ ಹಾಸುಹೊಕ್ಕಾಗಿವೆ. ಅವರು ಐತಿಹಾಸಿಕ ಮಹಾವ್ಯಕ್ತಿಗಳೆಂಬುದಕ್ಕೆ ಶಾಸನಗಳಿವೆ. ಗದಗ, ಸಿದ್ಧಗಂಗಾ, ಎಡೆಯೂರ ಮೊದಲಾದವುಗಳು ಅವರ ಪಾದಸ್ಪರ್ಶದಿಂದ ಪುನೀತವಾಗಿವೆ, ಪುಣ್ಯಕ್ಷೇತ್ರಗಳಾಗಿವೆ. ಇಂದಿಗೂ ಭಕ್ತಿಯಿಂದ ನಿಷ್ಠೆಯಿಂದ ನಡೆದುಕೊಳ್ಳುವವರಿಗೆ ಇಷ್ಟಾರ್ಥಗಳು ಫಲಿಸುತ್ತಿವೆ. ಒಟ್ಟಿನಲ್ಲಿ ಅವರ ಪವಾಡಶಕ್ತಿಗೆ ಅವರ ವಚನಗಳೇ ಸಾಕ್ಷಿ, ಅವರ ಶಿಷ್ಯ ಪರಂಪರೆಯೇ ಸಾಕ್ಷಿ. ಇಂದಿಗೂ ಕನ್ನಡ ಜನ ಅವರಿಗೆ ತೋರಿಸುತ್ತಿರುವ ಭಕ್ತಿ ಸಾಕ್ಷಿ.

## ಶೂನ್ಯ ಸಂಪಾದನೆ

ಇದು ಪರಮಗುರು ಪರಮ ವೀರಶೈವ ಸಿದ್ಧಾಂತ ತತ್ವಜ್ಞಾನ. ಇದು ವೀರಶೈವಾಚಾರ ಪ್ರತಿಷ್ಠಾಪನಾಚಾರ್ಯ, ಇದು ದಿವ್ಯವೇದಾಂತ ಶಿರೋಮಣಿ. ಇದು ಸಮಸ್ತಶಾಸ್ತ್ರ ಮುಖ್ಯ ಮುಖದರ್ಪಣ. ಇದು ಮಹಾಜ್ಞಾನ ಪ್ರವರ್ಧನ ಪರಮಾನು ಭಾವಸಂಬೋಧೆ. ಇದು ಸರ್ವಾಚಾರ ಸಂಪನ್ನ ಸಮಾರೂಢ ಸಂಗ್ರಹ. ಇದು ಪರಮ ರಾಜಯೋಗ ಸಾಧ್ಯಸಂಪಾದನೆ. ಇದು ಸಚ್ಚಿದಾನಂದ ನಿತ್ಯಪರಿಪೂರ್ಣ ರಸಾಮೃತ ಪ್ರಸನ್ನಪ್ರಸಾದ. ಇದು ಅಜ್ಞಾನತಿಮಿರಾಂಜನ ತಂತ್ರವಪ್ಪ ಪ್ರಭುದೇವರ ಶೂನ್ಯ ಸಂಪಾದನೆ.

ತೋಂಟದ ಸಿದ್ಧಲಿಂಗ ಶಿವಯೋಗಿಗಳ

# ಒಂದು ವಚನದ ವಿವೇಚನೆ

— ಡಾ. ಎಚ್. ಪಿ. ಮಲ್ಲೇದೇವರು

ಅನಾದಿಯಾಗಿ ಪಶು ಪಾಶ ಮಲ ಮಾಯಾ ಕರ್ಮಗಳುಂಟಾದರೆ,
ಈ ಜಗವನೊಬ್ಬರೂ ಸೃಷ್ಟಿಮಾಡಿದ ಕರ್ತುವಿಲ್ಲ
ಎಂದೆಂದೂ ಜಗವಿದ್ದಿತ್ತು ನಿತ್ಯವೆನ್ನು.
ಎಂದೆಂದೂ ಜಗವಿದ್ದಿತ್ತೆಂಬೆಯಾದರೆ,
ಶಿವನ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ, ಅನುಗ್ರಹವೆಂಬ
ಪಂಚಕೃತ್ಯಗಳು ಹುಸಿಯೆಂದೆನ್ನ.
ಶಿವನಿಗೆ ಸೃಷ್ಟಿ ಸ್ಥಿತಿ ಸಂಹಾರಾರ್ಥವುಂಟಾದರೆ,
ಈ ಜಗತ್ತೆಲ್ಲವೂ ಶಿವನ ನೆನಹು ಮಾತ್ರದಿಂದ ಹುಟ್ಟಿತ್ತಲ್ಲದೆ,
ಎಂದೆಂದೂ ಉಂಟೆಂಬುದು ಶೈವ ಪಶುಮತವಲ್ಲದೆ
ವೀರಶೈವ ಮತವಲ್ಲ.
ವೀರಶೈವರ ಮತವೆಂತೆಂದಡೆ:
ಘನಗಂಭೀರ ವಾರಿಧಿಯೊಳಗೆ ಫೇನ ತರಂಗ ಬುದ್ಬುದ
ಶೀಕರಾದಿಗಳು ತೋಱಿದಡೆ
ಆ ಸಾಗರ ಹೊಱಗಾಗಿ ತೋಱಬಲ್ಲವೇ ?
ಆ ಪರಶಿವಸಾಗರದಲ್ಲಿ ತೃಣಾದಿ ಬ್ರಹ್ಮಾಂತವಾದ ದೇಹಿಗಳು
ಉತ್ಪತ್ತಿಯಾಗಿ ಮತ್ತಲ್ಲಿಯೇ ಅಡಗುತ್ತಿಪ್ಪರು ನೋಡಾ.
ಇದು ಕಾರಣ, ಲಿಂಗನಿರ್ಮಿತದಿಂದ ಜಗತ್ತಾಯಿತೆಂದೆ ಕಾಣಾ
— ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.

ತೋಂಟದ ಸಿದ್ಧಲಿಂಗ ಶಿವಯೋಗಿಗಳು ಈ ಒಂದೇ ಒಂದು ವಚನದಿಂದ ಜಗತ್ತಿನ ಸೃಷ್ಟಿ ಮತ್ತು ಲಯ ಹೇಗಾಗುವುದೆಂಬುದನ್ನು ಪೂರ್ಣವಾಗಿ ವಿವರಿಸಿರುವರು.

ಜಗತ್ತು ಅನಾದಿ ಮತ್ತು ಈಗಿರುವಂತೆ ಯಾವಾಗಲೂ ಜಗವಿದ್ದಿತ್ತು, ಅದು ನಿತ್ಯ ಎಂಬ ಶೈವ ಪಶುಮತವಾದಿಗಳ ಅಭಿಪ್ರಾಯ ಸರಿಯಲ್ಲವೆಂದೂ, ಒಂದು ವೇಳೆ ಈ ಅಭಿಪ್ರಾಯ ಸತ್ಯವೆಂದೊಪ್ಪುವುದಾದರೆ ಆಗ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಭಾವ ಮತ್ತು ಅನುಗ್ರಹ ಈ ಸತ್ಯವಾದ ಐದು ಶಿವನ ಕೃತ್ಯಗಳು ಸಟೆ ಎಂದೂ ಒಪ್ಪಬೇಕಾಗುವದು. ಆದುದರಿಂದ ಈಗಿರುವಂತೆ ಜಗತ್ತು ಯಾವಾಗಲೂ ಇತ್ತು, ಅದರ ಸೃಷ್ಟಿ ಯಾರಿಂದಲೂ ಆಗಿಲ್ಲ ಎಂಬ ಅಭಿಮತವನ್ನು ತೋಂಟದ ಸಿದ್ಧಲಿಂಗ ಶಿವಯೋಗಿಗಳು ಸ್ಪಷ್ಟವಾಗಿ ನಿರಾಕರಿಸಿರುವರು.

ಯಾವುದಾದರೊಂದು ಕಾರ್ಯವಾಗಬೇಕಾದರೆ ಕಾರಣವಿದ್ದೇ ಇರಬೇಕು. ಕಾರಣವಿಲ್ಲದೆ ಕಾರ್ಯ ಘಟಿಸದು. ವೈವಿಧ್ಯ ಪೂರ್ಣವಾದ ಜಗದ್ವಿಕಾಸಕ್ಕೆ ಕರ್ತೃವು ಬೇಕೇಬೇಕೆಂಬ ಅಭಿಪ್ರಾಯವನ್ನು ಹೆಚ್ಚು ದಾರ್ಶನಿಕರು ಒಪ್ಪಿದ್ದಾರೆ. ಜಗದ್ವಿಕಾಸವನ್ನು ನ್ಯಾಯವೈಶೇಷಿಕರು ಆರಂಭವಾದದಿಂದಲೂ, ಸಾಂಖ್ಯಶಾಸ್ತ್ರಜ್ಞರು ಸತ್ಕಾರ್ಯವಾದದಿಂದಲೂ, ಅದ್ವೈತಿಗಳು ವಿವರ್ತವಾದದಿಂದಲೂ, ವಿಶಿಷ್ಟಾದ್ವೈತಿಗಳು ಪರಿಣಾಮವಾದದಿಂದಲೂ ಸಮರ್ಥಿಸಿ, ತಮ್ಮ ತಮ್ಮ ವಾದಗಳನ್ನು ಕೆಲವು ನಿದರ್ಶನಗಳ ಮೂಲಕ ಪ್ರತಿಪಾದಿಸಿರುವರು. ವೀರಶೈವ ದಾರ್ಶನಿಕರು ಅವಿಕೃತ ಪರಿಣಾಮವಾದದ ಜಗತ್ತು ಹೇಗೆ ಉಗಮ ಹೊಂದಿತೆಂಬುದನ್ನು ಆಧಾರ ಪೂರ್ವಕವಾಗಿ ಪ್ರತಿಪಾದಿಸಿರುವರು. ಶಿವಾನುಭಾವಿಗಳಾದ ಸಿದ್ಧಲಿಂಗ ಶಿವಯೋಗಿಗಳು ಜಗದುದಯದ ಬಗೆಗೆ ಈ ರೀತಿ ಹೇಳಿದ್ದಾರೆ :

"ಘನಗಂಭೀರ ವಾರಿಧಿಯೊಳಗೆ ಫೇನ ತರಂಗ ಬುದ್ಬುದ
ಶೀಕರಾದಿಗಳು ತೋಱಿದಡೆ
ಆ ಸಾಗರ ಹೊಱಗಾಗಿ ತೋಱಬಲ್ಲವೇ?"

ಸಮುದ್ರದಿಂದ ನೊರೆತೆರೆಗಳುದಿಸುವುವು. ಅವುಗಳ ಭಿನ್ನ ಆಕಾರವನ್ನು ಗಣನೆಗೆ ತೆಗೆದುಕೊಂಡು ಅವುಗಳಿಗೆ ನೊರೆ ತೆರೆ ಎಂಬ ಬೇರೆ ಬೇರೆ ಹೆಸರನ್ನು ಕೊಟ್ಟಾಗ್ಯೂ, ಅವುಗಳನ್ನು ಸರಿಯಾಗಿ ಪರಿಶೀಲಿಸಿದಾಗಿ ಅವು ಮೂಲಜಲದಿಂದ ಭಿನ್ನವೂ ಅಲ್ಲ, ಮತ್ತು ಆ ಸಾಗರದ ಆಧಾರವಿಲ್ಲದೆ ಅವು ಸ್ವತಂತ್ರವಾದ ಅಸ್ತಿತ್ವವನ್ನು ಹೊಂದಿರುವುದೂ ಇಲ್ಲ ಎಂಬುದು ಸಿದ್ಧವಾಗುವುದು. ಯಾವ ರೀತಿ

ನೊರೆತೆರೆಗಳು ಮೂಲಜಲದ ಆಧಾರವಿಲ್ಲದೆ ಉದಿಸಲಾರವೋ ಅಂತೆಯೇ ಸಕಲ ಚರಾಚರ ವಸ್ತುಗಳು ಶಿವನಾಧಾರವಿಲ್ಲದೆ ಉಗಮ ಹೊಂದಲಾರವು.

ಚಂದ್ರನಲ್ಲಿ ಬೆಳದಿಂಗಳು, ಸೂರ್ಯನಲ್ಲಿ ಪ್ರಕಾಶ, ಪುಷ್ಪದಲ್ಲಿ ಸುವಾಸನೆ ಯಾವ ರೀತಿ ಬಿಚ್ಚಿ ಬೇರಾಗದ ಸಂಬಂಧದಿಂದಿರುವುದೋ ಅಂತೆಯೇ ಶಿವನಲ್ಲಿ ಶಕ್ತಿ ಬಿಚ್ಚಿ ಬೇರಾಗದ ಸಂಬಂಧದಿಂದಿರುವುದು. ಇದಕ್ಕೆ ಅವಿನಾಭಾವ ಸಂಬಂಧ ವೆನ್ನುವರು. ಶಿವನಿಗೆ ಇಚ್ಛೆಯಾದಾಗ ಈ ಚಿಚ್ಛಕ್ತಿ (ವಿಮರ್ಶ ಶಕ್ತಿ) ಯ ನೆರವಿನಿಂದ ಆತನು ಜಗತ್ತನ್ನು ಸೃಜಿಸುವನು. "ಲೀಲೆಯಾದಡೆ ಉಮಾಪತಿ, ಲೀಲೆ ತಪ್ಪಿಡಡೆ ಸ್ವಯಂಭು" ಎಂಬುದಾಗಿ ಶಿವಯೋಗಿ ಲಲಾಮರಾದ ಅಲ್ಲಮ ಪ್ರಭು ಹೇಳಿರುವರು. ಈ ಭಾವವನ್ನು ಇನ್ನೂ ವಿಶದವಾಗಿ ಗೂಳೂರ ಸಿದ್ಧ ವೀರಣ್ಣೊಡೆಯರು 'ಶೂನ್ಯ ಸಂಪಾದನೆ'ಯಲ್ಲಿ ಈ ರೀತಿಯಾಗಿ ಹೇಳಿರುವರು–

> "ಪ್ರಥಮದಲ್ಲಿ ಅಖಂಡಾದ್ವಯ ಅನುಪಮ ನಿರವಯ ನಿರಂಜನ
> ಸರ್ವ ಶೂನ್ಯವನೊಳಕೊಂಡ ಸಚ್ಛಿದಾನಂದ ನಿತ್ಯ ಪರಿಪೂರ್ಣವಪ್ಪ
> ನಿಃಕಲ ಲಿಂಗವು ಧ್ಯಾನಪೂಜೆಗಳಿಲ್ಲದೆ ನಿರವಯದಲ್ಲಿ ಬಯಲಿಗನಾಗಿ
> ಇರಬಾರದೆಂದು ತನ್ನ ಸ್ವೇಚ್ಛಾಲೀಲಾ ವಿಲಾಸದ ನೆನಹಿನಿಂದ
> ತನ್ನ ಚಿತ್ಪ್ರಭಾ ಸಾಮರ್ಥ್ಯಶಕ್ತಿಯ ಮುಂದುಗೊಂಡು ಅನಂತಕೋಟಿ
> ಬ್ರಹ್ಮಾಂಡಂಗಳನು ಅಣುಕೋಟಿ ಆತ್ಮರುಗಳನು ತನ್ನಲ್ಲಿಯೇ
> ಪುಟ್ಟಿಸಿ................................................ ಅವರ ಸುಖದುಃಖ
> ಬಂಧಮೋಕ್ಷಂಗಳ ಹೊದ್ದಡೆ ಯಂತ್ರವಾಹಕನಾಗಿ ಆಡಿಸುತಿರ್ಪನಾ
> ಪರಶಿವಲಿಂಗವು"

ಇದರಿಂದ ಶಿವನ ಚಿಚ್ಛಕ್ತಿಯೇ ಈ ಜಗದುದಯಕ್ಕೆ ಕಾರಣವೆಂದೂ, ಶಿವನ ಸಂಕಲ್ಪದಂತೆ ಜಗತ್ತು ರೂಪುಗೊಂಡಿತೆಂದೂ ತಿಳಿದು ಬರುವುದು. ತೆರಣಿಯ (ಜೇಡರ) ಹುಳು ಇಚ್ಛೆ ಬಂದಾಗ ನೂಲನ್ನು ಹೊರಬಿಡುವುದು. ಇಚ್ಛೆ ಬಾರದಾಗ ನೂಲನ್ನು ಅದು ಮತ್ತೆ ತನ್ನಲ್ಲಿಯೇ ಹುದುಗಿಸಿಕೊಳ್ಳುವುದು. ಅಂತೆಯೇ ಶಿವನಿಗೆ ಇಚ್ಛೆ (ಲೀಲೆ) ಬಂದಾಗ ಆತನ ಚಿತ್ಪ್ರಭಾ ಸಾಮರ್ಥ್ಯ ಶಕ್ತಿಯಿಂದ ಜಗತ್ತು ಹೊರಹೊಮ್ಮುವದು. ಸಾಗರದಿಂದುದಿಸಿದ ನೊರೆತೆರೆಗಳು ಯಾವ ರೀತಿಯಾಗಿ ಸಾಗರದಿಂದ ಬೇರೆಯಾಗಿ ತೋರಲಾರವೋ ಅಂತೆಯೇ ಶಿವನಿಂದುದಿಸಿದ ಈ ಜಗತ್ತು ಶಿವನಿಂದನ್ಯವಾಗಿ ತೋರಲರಿಯದು.

ತೋಂಟದ ಸಿದ್ಧಲಿಂಗ ಶಿವಯೋಗಿಗಳು ಮತ್ತೆ ಈ ರೀತಿ ಅರುಹಿದ್ದಾರೆ.

> ಆ ಪರಶಿವ ಸಾಗರದಲ್ಲಿ ತೃಣಾದಿ ಬ್ರಹ್ಮಾಂತವಾದ ದೇಹಿಗಳು
> ಉತ್ಪತ್ತಿಯಾಗಿ ಮತ್ತಲ್ಲಿಯೇ ಅಡಗುತ್ತಿಪ್ಪರು ನೋಡಾ

ಪರವಸ್ತುವಾದ ಪರಶಿವನಿಂದ ಈ ಜಗತ್ತು ಉದಿಸಿ ಮತ್ತೆ ಪರಶಿವನಲ್ಲಿ ಅಡಗುವುದು. ಮಗ್ಗೆಯ ಮಾಯಿದೇವರು ಲಿಂಗ ಶಬ್ದದ ನಿರ್ವಚನವನ್ನು "ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ" ಎಂಬುದಾಗಿ ಹೇಳಿ, ಅಂತಿಮವಾಗಿ ಎಲ್ಲ ವಸ್ತುಗಳೂ ಆ ಶಿವನಲ್ಲಿಯೇ ಆಶ್ರಯಸ್ಥಾನ ಹೊಂದುವುದೆಂಬುದನ್ನು ಸ್ಪಷ್ಟವಾಗಿ ಹೇಳಿರುವರು. ನವಿಲಿನ ತತ್ತಿಯಲ್ಲಿ ಅವ್ಯಕ್ತ ಸ್ಥಿತಿಯಲ್ಲಿದ್ದ ನವಿಲಿನ ಅವಯವಗಳು ಮತ್ತು ವೈವಿಧ್ಯಪೂರ್ಣವಾದ ಬಣ್ಣದಿಂದೊಡಗೂಡಿದ ಗರಿ ಇತ್ಯಾದಿಗಳು ವ್ಯಕ್ತ ಸ್ಥಿತಿಯನ್ನು ಹೊಂದಿ ದೃಷ್ಟಿಗೆ ಗೋಚರವಾಗುವಂತೆ, ಶಿವನಲ್ಲಿ ಅವ್ಯಕ್ತ ಸ್ಥಿತಿಯಲ್ಲಿದ್ದ ಜಗತ್ತು ಆತನಿಗಿಚ್ಛೆಯಾದೊಡನೆಯೇ ವ್ಯಕ್ತ ರೂಪವನ್ನು ಹೊಂದಿ ವೈವಿಧ್ಯಪೂರ್ಣ ಜಗತ್ತಾಗುವುದು. ಈ ರೀತಿಯಲ್ಲಿ ಜಗತ್ತನ್ನು ಸೃಜಿಸಿದರೂ ಜಗದ ಜೀವಿಗಳ ಬಂಧ ಮೋಕ್ಷಗಳನ್ನು ಹೊದ್ದದೆ ಯಂತ್ರವಾಹಕನಾಗಿ ಪರಶಿವಲಿಂಗವು ಜೀವಿಗಳನ್ನು ಆಡಿಸುವನು. ಅದು ಇಚ್ಛೆ ಬಂದಾಗ ತನ್ನ ಅವಯವಗಳನ್ನು ಹೊರಚಾಚುವುದು, ಇಚ್ಛೆ ಬಾರದಾಗ ಅದು ತನ್ನ ಅವಯವಗಳನ್ನು ಸಂಕುಚಿಸಿಕೊಳ್ಳುವುದು; ಅಂತೆಯೇ ಶಿವನು ಇಚ್ಛೆ ಬಂದಾಗ ಜಗತ್ತನ್ನು ಸೃಜಿಸುವನು, ಇಚ್ಛೆ ಬಾರದಾಗ ಜಗತ್ತನ್ನೆಲ್ಲ ತನ್ನಲ್ಲಿ ಲೀನ ಮಾಡಿಕೊಳ್ಳುವನು. ಈ ಎಲ್ಲ ಭಾವವು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಸೂಳ್ನುಡಿಯಲ್ಲಿ ಹುದುಗಿರುವುದು.

ಲಿಂಗನಿರ್ಮಿತದಿಂದ ಜಗತ್ತಾಯಿತೆಂದೆ ಕಾಣಾ
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೆ

ಈ ಜಗತ್ತು ಲಿಂಗದಿಂದಾದುದು. ಲಿಂಗ ಸತ್ಯವಾದುದು, ಅಂತೆಯೇ ಜಗತ್ತು ಕೂಡ ಸತ್ಯ. ಆದರೆ ಅದು ವ್ಯಕ್ತ ಮತ್ತು ಅವ್ಯಕ್ತ ಸ್ಥಿತಿ ಹೊಂದುತ್ತದೆಂಬುದನ್ನು ಮರೆಯಲಾಗದು. ಜಗತ್ತಿನ ಅವ್ಯಕ್ತ ಸ್ಥಿತಿಯೇ ಲಯ, ವ್ಯಕ್ತ ಸ್ಥಿತಿಯೇ ಸೃಷ್ಟಿ ಎಂಬುದಾಗಿ ಹೇಳಬಹುದು. ಲಯಾವಸ್ಥೆಯಲ್ಲಿ ಜಗತ್ತು ವಿನಾಶ ಹೊಂದುವುದಿಲ್ಲ, ಅದು ಅವ್ಯಕ್ತ ಸ್ಥಿತಿಯಲ್ಲಿ ಶಿವನಲ್ಲಿಯೇ ಅಡಗಿರುವುದು. ಕುಂಬಾರನು ಮಣ್ಣಿನಿಂದ ಅನೇಕ ಬಗೆಯಾದ ಭಾಂಡಗಳನ್ನು ಮಾಡುವನು. ಬೇರೆ ಬೇರೆ ಭಾಂಡಗಳನ್ನು ಆಯಾ ಆಕೃತಿಗೆ ಅನುಗುಣವಾಗಿ ಕೊಡ, ಮಡಿಕೆ ಇತ್ಯಾದಿ ಬೇರೆ ಬೇರೆ ಹೆಸರಿನಿಂದ ಕರೆದಾಗ್ಯೂ ಅವು ಮೂಲ ಮಣ್ಣಿನಿಂದ ಭಿನ್ನವೆ ? ಅಕ್ಕಸಾಲಿಗನು ಚಿನ್ನದಿಂದ ಅನೇಕ ತೆರನಾದ ಆಭರಣಗಳನ್ನು ಮಾಡುವನು. ಆ ಆಭರಣಗಳನ್ನು ಧರಿಸುವ ಅವಯವ ಮತ್ತು ಆಕೃತಿಗನುಗುಣವಾಗಿ ಅವುಗಳಿಗೆ ಓಲೆ, ಮೂಗುತಿ, ಸರ ಇತ್ಯಾದಿ ಹೆಸರಿನಿಂದ ಕರೆದಾಗ್ಯೂ, ಅವು ಮೂಲ ಬಂಗಾರದಿಂದ ಭಿನ್ನವೆ ? ಅಂತೆಯೇ ಈ ಜಗತ್ತಿ

ನಲ್ಲಿರುವ ವಸ್ತುಗಳನ್ನು ಆಕೃತಿ ರೂಪಗಳಿಗನುಗುಣವಾಗಿ ಬೇರೆ ಬೇರೆ ಹೆಸರಿನಿಂದ ಕರೆದಾಗ್ಯೂ ಅವು ಶಿವನಿಂದನ್ಯವಲ್ಲ. "ನಿರ್ವಿಕಾರ, ನಿತ್ಯ ನಿರಂಜನ, ನಿರ್ಗುಣ, ಪರಿಪೂರ್ಣ, ನಿರ್ವಿಕಲ್ಪ ಪರಬ್ರಹ್ಮ ಶಿವನಿಂದ ಜಗತ್ತು ಉದಿಯಿಸಿತ್ತೆಂದಡೆ ಶಿವನಿಂದನ್ಯವೆನಿಸಬಹುದೆ ?" ಎಂಬುದಾಗಿ ಅಲ್ಲಮಪ್ರಭು ದೇವರು ಪ್ರಶ್ನಿಸಿರುವರುವರು. 'ಮರ್ತ್ಯಲೋಕವು ಕರ್ತಾರನ ಕಮ್ಮಟ' ಸತ್ಯವಾದುದು. ಆದುದರಿಂದ 'ಶಿವನೊಲಿಸ ಬಂದ ಪ್ರಸಾದ ಕಾಯುವ ಕೆಡಿಸಲಾಗದು' ಎಂದು ಭಕ್ತಿನಿಧಿ ಬಸವಣ್ಣನವರು ಎಚ್ಚರಿಕೆಯನ್ನಿತ್ತಿರುವರು. ಒಟ್ಟಿನಲ್ಲಿ ಶಿವನ ಚಿಚ್ಛಕ್ತಿಯಿಂದಾದ ಜಗತ್ತು ಶಿವನಿಂದನ್ಯವಲ್ಲ. "ಲಿಂಗನಿರ್ಮಿತದಿಂದ ಜಗತ್ತಾಯಿತು* ಎಂಬ ಸಿದ್ಧಲಿಂಗ ಶಿವಯೋಗಿಗಳ ವಚನದಲ್ಲಿ ಈ ಎಲ್ಲ ಭಾವವೂ ಹುದುಗಿರುವುದು.

ಲಿಂಗ ಮೆಚ್ಚಿ ಅಹುದಹುದೆನ್ನುವ ತೋಂಟದ ಸಿದ್ಧಲಿಂಗ ಶಿವಯೋಗಿಗಳವರ ದಿವ್ಯ ವಚನಗಳನ್ನೋದಿದಾಗ " ಮಾತೇ ಜ್ಯೋತಿರ್ಲಿಂಗ " ಎಂಬ ನುಡಿಯ ಹಿರಿಮೆ ವ್ಯಕ್ತವಾಗುವುದು.

ಕಣ್ಣಿನಲ್ಲಿ ಕಾಮ, ಮನದಲ್ಲಿ ಕ್ರೋಧ,
ಪ್ರಾಣದಲ್ಲಿ ಲೋಭ, ಬುದ್ಧಿಯಲ್ಲಿ ಮದ,
ವಿವೇಕದಲ್ಲಿ ಮತ್ಸರ, ಅರುಹಿನಲ್ಲಿ ಮಾಯೆಯುಳ್ಳನ್ನಕ್ಕರ;
ಎಂತು ಭಕ್ತನೆಂಬೆ ? ಎಂತು ಮಾಹೇಶ್ವರನೆಂಬೆ ?
ಎಂತು ಪ್ರಸಾದಿಯೆಂಬೆ ? ಎಂತು ಪ್ರಾಣಲಿಂಗಿಯೆಂಬೆ ?
ಎಂತು ಶರಣನೆಂಬೆ ? ಎಂತು ಐಕ್ಯನೆಂಬೆ ?
ಎಂತು ಷಟ್‌ಸ್ಥಲದಲ್ಲಿ ಸಂಪೂರ್ಣನೆಂದೆಂಬೆ ?
ಎಂತು ಧ್ಯಾನಿಗಳೆಂಬೆ ? ಎಂತು ಅನುಭಾವಿಗಳೆಂಬೆ ?
ವಾಕುಪಾಟಾರ್ಥಿಗಳ, ಉದರ ಘಾತಕರ
ಎನಗೊಮ್ಮೆ ತೋರದಿರಾ ! ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ !

— ತೋಂಟದ ಸಿದ್ಧಲಿಂಗೇಶ್ವರ

# ಶಿವಕಾಮಧೇನು ಸಿದ್ಧಲಿಂಗೇಶ

— ತಾಳಕೇರಿ ಬಸವರಾಜ ಗವಾಯಿ.

ಕರುಣಾಳು ಎಡೆಯೂರವಾಸ ಸಿದ್ಧಲಿಂಗೇಶ
ಪೊರೆಯೋ ಹೇ ಪರಮೇಶ ದೇವಾಧಿದೇವ || ಪ ||

ಭವದಲ್ಲಿ ಬಂದೆ ಗತಿಯೇನು ಮುಂದೆ
ತವಸೇವೆಯೊಂದೆ ಬೇಡುವೆನು ತಂದೆ || ೧ ||

ಭಕ್ತಿಯ ಪಥವ ಮುಕ್ತಿಯ ನಿಲವ
ತೋರಿಸಿ ಅಭವ ಕೃಪೆಯಾಗು ದೇವ || ೨ ||

ವಿರತಿಯ ಭಾನು ಶಿವಕಾಮಧೇನು
ಪರಶಿವನೆ ನೀನು, ಶರಣೆಂಬೆ ನಾನು || ೩ ||

ಶಿವಮಂತ್ರಪ್ರಾಣ ನೀನೇ ಪ್ರಮಾಣ
ತವ ನಾಮ ಸ್ಮರಣ ಭವತಾಪಹರಣ || ೪ ||

ತನುಮನವುಧನವು ನಿನಗೆ ಅರ್ಪಣವು
ಕರುಣೆ ನಿನ್ನೊಲವು ಇರಲೆನಗೆ ಬಲವು || ೫ ||

ಜಗದೇಕಗುರುವೆ ಜಗವ ತುಂಬಿರುವೆ
ನೆನೆಸಿದಲ್ಲಿರುವೆ ಹೇ ಕಲ್ಪತರುವೆ || ೬ ||

ಗದುಗಿನ ಶ್ರೀ ತೋಂಟದಾರ್ಯ ಮಠದ

# ಕಾಗದಪತ್ರ ಸಾಹಿತ್ಯ

— ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿಗಳು

ಕನ್ನಡ ನಾಡು ಧರ್ಮದ ಬೀಡು. ಇಲ್ಲಿ ಶೈವ, ಜೈನ, ವೈಷ್ಣವ ಮತ-ಪಂಥಗಳು ಹೆಚ್ಚಾಗಿ ಪರಸ್ಪರ ಸದ್ಭಾವನೆಯಿಂದ ಬಾಳಿ ಬದುಕಿದ ಪ್ರಸಂಗಗಳು ಶಾಸನೋಕ್ತವಾಗಿವೆ. ಅನೇಕ ಧಾರ್ಮಿಕ ಪೀಠಗಳು ಈ ಪವಿತ್ರ ಪರಂಪರೆಗೆ ಪರಮಾದರ್ಶವೆನಿಸಿ ಉಳಿದು ಬೆಳಗಿವೆ. ಅವುಗಳ ಪಂಕ್ತಿಯಲ್ಲಿ ಗದುಗಿನಲ್ಲಿರುವ ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗ ಯತಿಗಳ ಬಳಿವಿಡಿದು ಬಂದ ವಿರಕ್ತ ಗುರುಪೀಠ ಬಹು ಘನತೆವೆತ್ತ ಸಂಸ್ಥಾನಮಠ.

ನಾನು ಕಾಶಿಯಿಂದ ವ್ಯಾಸಂಗ ಮುಗಿಸಿಕೊಂಡು ಬಂದಮೇಲೆ ೧೯೫೦ ರಲ್ಲಿ ಶ್ರೀ ಶಿವಯೋಗ ಮಂದಿರ ಸಂಸ್ಥೆಯ ಮುಖಪತ್ರಿಕೆ 'ಸುಕುಮಾರ' ವನ್ನು ಪ್ರಾರಂಭಿಸಿದ್ದೆ. ಅದರ ತಿಂಗಳ ಸಂಚಿಕೆಗಳಲ್ಲಿ ನಾಡಿನ ಪ್ರಾಚೀನ ಗುರುಪೀಠಗಳ ಚರಿತ್ರೆಯನ್ನು ಅಲ್ಲಿ ದೊರೆಯುವ ಅಮೌಲ್ಯ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಹಿತ ಪ್ರಕಟಿಸುವ ಯೋಜನೆ ಹಾಕಿಕೊಂಡಿದ್ದೆ. ಅದನ್ನು ನನ್ನ ಗುರುಮನೆ ಅನಂತಪುರದ ಶ್ರೀ ಮುರುಘಾ ಮಠದಲ್ಲಿಯ ಹಸ್ತಪ್ರತಿ ಗ್ರಂಥಗಳ ಸಂಶೋಧನೆಯೊಂದಿಗೆ ಪ್ರಾರಂಭಿಸಿದ್ದೆ. ಆಮೇಲೆ ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಮಠವನ್ನು ಸಂದರ್ಶಿಸಿದ್ದೆ. ಅಲ್ಲಿ ಅನೇಕ ಕಾಗದ ಪತ್ರಗಳು ರಾಶಿಯಾಗಿ ಬಿದ್ದುದನ್ನು ಗಮನಿಸಿದೆ. ಅವನ್ನೆಲ್ಲ ಜೋಡಿಸಿ ಗಂಟು ಕಟ್ಟಿ, ಮರದ ದೊಡ್ಡ ಪೆಟ್ಟಿಗೆ

ಯಲ್ಲಿ ಇಡಿಸಿ ಸಮಾಧಾನ ಪಟ್ಟಿದ್ದೆ. ಅಂದು ಕೆಲವು ಕಾಗದ ಪತ್ರಗಳ ಟಿಪ್ಪಣಿಗಳನ್ನು ಬರೆದುಕೊಂಡೆ. ಇತಿಹಾಸದ ದೃಷ್ಟಿಯಿಂದ ಅವು ಬಹಳ ಉಪಯುಕ್ತವಾದ ಸಾಮಗ್ರಿಯೆನಿಸಿದವು.

ಈ ಪೀಠಕ್ಕೆ ಸಂಬಂಧಿಸಿದ ಪತ್ರಸಾಹಿತ್ಯ ಅಮೂಲ್ಯ ಚಾರಿತ್ರಿಕ ನಿಧಿಯೆಂದರೆ ಅತಿಶಯದ ಮಾತಲ್ಲ ಅವುಗಳ ಪರಿಶೀಲನೆಯಲ್ಲಿ ಪೀಠದ ಗತವೈಭವದ ಭವ್ಯ ಪರಂಪರೆ ಜೀವಂತವಾಗಿ ಸುಳಿದು ಬರುತ್ತದೆ. ಪೀಠದ ಶಾಖಾ ಮಠಗಳು ನಾಡಿನ ನಗರ-ಗ್ರಾಮಗಳಲ್ಲಿ ಪವಿತ್ರ ಸಂಸ್ಕೃತಿಯ ಕೇಂದ್ರಗಳಾಗಿ ನಿಂದಿವೆ. ಬಾದಾಮಿ, ಬಾಗಲಕೋಟೆ, ಹುನಗುಂದ ಸೀಮೆಗಳಲ್ಲಿ ಶ್ರೀ ತೋಂಟದ ಸ್ವಾಮಿಯ ಶಾಖಾ ಮಠಗಳು ಈಗಲೂ ಅಸ್ತಿತ್ವದಲ್ಲಿವೆ. ಕೆಲವಂತೂ ನಾಮಾವಶೇಷವಾಗಿವೆ. ಈ ಮಠಗಳಿಗೆ ಅನೇಕ ಶಿಷ್ಯರು ಜಾತಿ-ಮತಗಳ ಸಂಕುಚಿತ ಭಾವನೆಯಿಲ್ಲದೆ ಅನನ್ಯ ಭಕ್ತಿಯಿಂದ, ತ್ರಿಕರಣಪೂರ್ವಕವಾಗಿ, ಸ್ವಸಂತೋಷ ಹಾಗೂ ಸ್ವಯಂಪ್ರೇರಣೆಯಿಂದ ಭೂಮಿಯ ದಾನ ನೀಡಿದ ಪ್ರಸಂಗಗಳ ಉಲ್ಲೇಖ ಪತ್ರಗಳಲ್ಲಿ ಹೃದಯಸ್ಪರ್ಶಿಯಾಗಿದೆ. ಅಲ್ಲಿಯ ಸನ್ನಿವೇಶಗಳನ್ನು ಓದುತ್ತಿದ್ದಂತೆಯೇ ಕಣ್ಣು ಆನಂದಬಾಷ್ಪಗಳಿಂದ ತೇವಗೊಳ್ಳುತ್ತವೆ.

ಕನ್ನಡ ನಾಡಿನ ಚರಿತ್ರೆಯಲ್ಲಿ ಇದುವರೆಗೆ ಶಿಲಾಶಾಸನ ಮತ್ತು ತಾಮ್ರಪಟಗಳೇ ವಿಪುಲ ಸಾಮಗ್ರಿಯೆನಿಸಿದ್ದವು. ಅವುಗಳ ತರುವಾಯ ವಿಜಾಪುರದ ಶಾಹರ ಹಾಗೂ ವಿಜಯನಗರದ ರಾಜರ ಆಳಿಕೆಯ ಕಾಲದಲ್ಲಿ ಕಾಗದ ಪತ್ರಗಳೇ ಹೆಚ್ಚಾಗಿ ಬಳಕೆಯಲ್ಲಿ ಬಂದವು. ನಾಡಿನ ಪ್ರಾಚೀನ ಮಠ-ಮಾನ್ಯಗಳಲ್ಲಿ ಇಂದಿಗೂ ಉಳಿದಿರುವ ಅವನ್ನು ಆಸ್ಥೆಯಿಂದ ಸಂಗ್ರಹಿಸಿ ಶ್ರದ್ಧೆಯಿಂದ ಪರಿಶೀಲಿಸಿ ಪ್ರಕಟಿಸಿದರೆ ಮರೆತು ಹೋದ ಚರಿತೆಯ ಅನೇಕ ಸ್ವಾರಸ್ಯಮಯ ಹೊಸ ಪುಟಗಳು ಬೆಳಕಿಗೆ ಬಂದು ಕರ್ನಾಟಕದ ಇತಿಹಾಸ ಇನ್ನೂ ಶ್ರೀಮಂತವಾಗಬಹುದಾಗಿದೆ.

ಈ ಕಾಗದ ಪತ್ರಗಳಲ್ಲಿಯ ಪ್ರಾರಂಭದ ಸ್ವಸ್ತಿ, ಗುರುಗಳ ಪ್ರಶಸ್ತಿ, ದಾನಿಗಳ ವಂಶಸ್ತುತಿ, ಕೊನೆಗೆ ದತ್ತಿಯ ಪರಿಪಾಲನೆಗೆ ತಪ್ಪಿದವರನು ಕುರಿತ ಶಾಪೋಕ್ತಿ ಮುಂತಾಗಿ ಬರವಣಿಗೆ ಪ್ರಾಚೀನ ತಾಮ್ರ ಪಟಗಳ ಟಂಕರಣೆಯ ಅನುಕರಣೆಯಲ್ಲಿಯೇ ವಿನೂತನವಾಗಿದೆ.

**ಒಂದು :**

ಪರಮ ಗುರುಭಕ್ತರಾದ ನಾಡಗೌಡರು - ದೇಸಾಯರು[೧] ಪೂಜ್ಯರ ಅನುಗ್ರಹ ಪಡೆದು ತಮ್ಮ ವಂಶದ ಶ್ರೇಯೋಭಿವೃದ್ಧಿಯ ಜೊತೆಗೆ ಪ್ರಜೆಗಳ ಕಲ್ಯಾಣವನ್ನೂ

---

೧. 'ದೇಶರಾಜ = ದೇಸರಾಯ = ದೇಸಾಯ = ದೇಸಾಯಿ' ಪದಗಳು ಪೇಶವೆಯ ರಾಜ್ಯ ವ್ಯವಸ್ಥೆಯ ಕಾಲದಲ್ಲಿ ರೂಢವಾದವು.

ಸಂಕಲ್ಪಿಸಿ ಗುರುಮಠಕ್ಕೆ ಭೂದಾನ ನೀಡುವ ಪರಂಪರೆಯಲ್ಲಿ ತ್ಯಾಗಮಯ ಭೋಗದ ಭಾರತೀಯ ಪರಮಾದರ್ಶದ ಹಿರಿಮೆ ಪಡಿಮೂಡಿದೆ. ಕ್ರಿ. ಶ. ೧೮೩೬ ರಲ್ಲಿ ಲಿಖಿತವಾದ ದಾನಪತ್ರವಿದು:

"ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥

ಸ್ವಸ್ತಿ ಶ್ರೀ ಮನ್ನೃಪ ಶಾಲಿವಾಹನ ಶಕ ವರ್ಷ ಸಂಖ್ಯೆ ೧೭೫೮ ನೆಯ ವ್ಯಯನಾಮ ಸಂವತ್ಸರ ಭಾದ್ರಪದ ಬಹುಳ ೬ ಗುರುವಾರ ಮೃಗಶಿರಾ ನಕ್ಷತ್ರ ಪುಣ್ಯಕಾಲ ಪುಣ್ಯ ಪ್ರದೇಶದಲ್ಲಿ ಶ್ರೀಮದವಿರಳ ಪರಂಜ್ಯೋತಿ ಸ್ವರೂಪ ಸಚ್ಚಿದಾನಂದ ನಿತ್ಯ ಪರಿಪೂರ್ಣ ನಿರಾಕಾರ ಸ್ವರೂಪಿಗಳಾದ ಅನ್ನದಾನಿ[೧] ಸ್ವಾಮಿಗಳವರ ಚರಣಾರವಿಂದಗಳಿಗೆ

ನಿಮ್ಮ ನಿಜ ಪಾದಭಜನ ಭಕ್ತಿನಿರತರಾದ ಮಹಾಲ ಕಾರಡಗಿ ತಾಲೂಕ ಬುಳಪ್ಪನಕೊಪ್ಪದ ಸಿದ್ದಣ್ಣಗೌಡರ ಪುತ್ರ ಸಕ್ರಪ್ಪಗೌಡರು ದಾನಪತ್ರ ಬರಕೊಟ್ಟ ಕ್ರಮವೆಂತೆಂದರೆ– ತಮ್ಮ ನಿಜಭಕ್ತಿ ಪೂರ್ಣ ಫಲಪ್ರಾಪ್ತಿಯಿಂದ ಸಕಲ ಸಂಪತ್ ಪ್ರಾಪ್ತಿಗಳಾಗಿ ನಿಜವಂಶೋಚ್ಛ್ರಾಯವಾಗಬೇಕೆಂದು ನಮ್ಮ ಇನಾಮತಿ ಸ್ವಾಸ್ತಿ ಯೊಳಗೆ ಪಂಚಮ ಭಾಗದಲ್ಲಿ ಮಠದ ಪೂರ್ತಿ ಭೂಮಿಯನು ನೇಮಿಸಿ ನಿಧಿ–ನಿಕ್ಷೇಪಗಳ ಸಹ ಧಾರಾದತ್ತ ಮಾಡಿ ಬರಕೊಟ್ಟದಿತೆ. ಆ ಚಂದ್ರಾರ್ಕವು ಅನುಭವಿಸಿಕೊಂಡು ನಮ್ಮ ಕಲ್ಯಾಣ ವರ್ಧಿಸುವದು. ಇದಕ್ಕೆ ಮುಂದೆ ದಾರ ರಾದರು. ನಮ್ಮ ವಂಶದಲ್ಲಿ ಹುಟ್ಟಿದವರು ನಡೆಸಿಕೊಡುವುದು ಎಂದು ಸಮ್ಮತ ದಿಂದ ಬರಕೊಟ್ಟ ಭೂದಾನಪಟ ಕಾಗದವು."

**ಎರಡು :**

ಶಾ. ಶ. ೧೭೭೩ (ಕ್ರಿ. ಶ. ೧೮೫೧) ವಿರೋಧಿಕೃತ್ ಸಂ. ವೈಶಾಖ ಶು. ೧೨ ಸೋಮವಾರ ಹಣಮನಾಯಕ ದೇಸಾಯಿ, ಸರದೇಸಾಯಿ, ಪರಗಣೆ ಬಾದಾವಿನಾಡ ಪಟ್ಟಣಶೆಟ್ಟಿ, ಪರಗಣೆ ಎಲಬುರಗಿ ನಾಡ ಚವುಧರಿ, ಮಾಮಲೆ ಬಾಗಲಕೋಟೆ,

---

೧. ವಿರಕ್ತ ಗುರುಗಳಲ್ಲಿ ಆಚರಣೆಯ ಕೆಲವು ಕಟ್ಟುಪಾಡುಗಳನ್ನು ಅನುಸರಿಸಿ ಕುಮಾರ, ಮುರುಘ, ಸಂಪಾದನೆ, ಕೆಂಪಿನ, ಚಿಲ್ಲಾಳ ಸಮಯಗಳು ಪರಂಪರಿತ ವಾಗಿವೆ. ಚಿಲ್ಲಾಳ ಸಮಯಕ್ಕೆ ಶ್ರೀ ತೋಂಟದಾರ್ಯ ಮಠವೇ ಮೂಲ ಪೀಠ. ಈ ಪರಂಪರೆಯ ಶಾಖಾ ಮಠಗಳಲ್ಲಿ ದಾಸೋಹ ನಡೆಸುವ ಅನ್ನದಾನ ಸ್ವಾಮಿಗಳೇ ಹೆಚ್ಚು. 'ಚಿಲ್ಲಾಳ–ಚೀಲಾಳ' ಶಿವಯೋಗದ ಪಾರಿಭಾಷಿಕ ಪದ 'ಚಿಲ್ಲಲಾಟ' ಪದದ ತದ್ಭವರೂಪ. ಕುಮಾರಸಮಯದವರು ಶಿವಾನುಭವಿಗಳು.

ಶಿರೂರ ನಾಯಕ ಇವರು ತೋಂಟದ ಮಹಾಸ್ವಾಮಿಗಳವರಿಗೆ ಭೂದಾನವನ್ನು ತಮ್ಮ ಸಂಸ್ಥಾನಕ್ಕೆ ಪುಣ್ಯವೃದ್ಧಿಯಾಗಲೆಂಬ ಇಚ್ಛೆಯಿಂದ ೩೬ ಬೀಘೆ[೧] ಭೂಮಿಯನ್ನು ಲಿಂಗಮುದ್ರೆ ಸಹಿತ ನೆಡಸಿ ದಾನ ಬಿಟ್ಟರು. ಆ ಭೂಮಿಯಲ್ಲಿದ್ದ ನಿಧಿ, ನಿಕ್ಷೇಪ, ತರುಪಾಷಾಣ ಮೊದಲಾದವನ್ನು ಗುರುಗಳು ಶಿಷ್ಯಪರಂಪರವಾಗಿ ಅನುಭವಿಸಿ ಆಶೀರ್ವದಿಸುತ್ತಿರಬೇಕೆಂಬುದು ಜನನಾಯಕರ ಅಭಿಲಾಷೆ. ದಾನ ಪತ್ರದ ಅಂತ್ಯದಲ್ಲಿ–"ಬೇರೆಯವರು ನೀಡಿದ ದಾನವನ್ನು ನಡೆಸಿಕೊಂಡು ಬರುವುದು ತಾನು ಮಾಡಿದ ದಾನಕ್ಕಿಂತಲೂ ಎರಡು ಪಟ್ಟು ಹೆಚ್ಚು ಪುಣ್ಯಕಾರಿ. ಪರರು ದಾನವಿತ್ತ ಭೂಮಿಯನ್ನು ಅಪಹರಿಸುವದರಿಂದ ತಾನು ಮಾಡುವ, ನೀಡುವ ಧರ್ಮವೂ ವ್ಯರ್ಥವಾಗುವುದು" ಎಂಬ ಉದಾತ್ತ ಆದರ್ಶವನ್ನು ಜನರ ನೆನಪಿಗೆ ತಂದುಕೊಡುವ ಈ ಗ್ರಂಥ ಗಮನೀಯ :

ಸ್ವದತ್ತಾದ್ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ ।
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥

**ಮೂರು :**

ಕಾಲ ನಿರ್ದೇಶವಿಲ್ಲದ ಈ ಕಾಗದದಲ್ಲಿ 'ಮಹಾನಾಯಕಾಚಾರ್ಯ ನಾಯಕ ಶಿರೋಮಣಿ ಚೌಡೇರ ಚೌಡಿ ಕದಂಬಾಗಡಿಯಂಕ ಭೀಮ' ಕಿಲ್ಲೆ ಬದಾಮಿ ಸೀಮೆಯ ದೇಸಾಯಿ, ಯಲಬರಗಿ ಸೀಮೆ, ನಾಡ ಪಟ್ಟಣಶೆಟ್ಟಿ, ಬಾಗಡಿಕೋಟೆ ಸೀಮೆ ಸರನಾಡ ಚೌದರಿಗಳಾದ ಪವಾಡಿ ನಾಯಕರು 'ಅವಿರಳ ಪರಂಜ್ಯೋತಿ ನಿತ್ಯ ಶಿವಾನಂದ ಭರಿತರಾದ ರಾಜಮಾನ್ಯ ರಾಜಶ್ರೀ' ತೋಂಟದಾರ್ಯ ಸ್ವಾಮಿಗಳ ವರಿಗೆ ಬಿನ್ನಹ ಪೂರ್ವಕ ತೊರೆ ನೀರಲಗಿಯ ಇನಾಮತಿ ಜಮೀನನ್ನು ಮಾನ್ಯದ ಮಹತ್ತಿಗೆ ಬಿಡಿಸಿಕೊಟ್ಟ ಉಲ್ಲೇಖವಿದೆ.

---

೧. ೩೬ ಬೀಘೆ=೨೨⅔ಎಕರೆ 'ವಿಂಶತಿ ವರ್ಗ'ದ ಅಪಭ್ರಂಶ.ಇಪ್ಪತ್ತು ಮೂರು ಇಲ್ಲವೆ ದೊಡ್ಡ ಅಳತೆ ಗೋಲ ಚಕ್ಕಚೌಕು ಭೂಮಾಪನ. ಅದರ ಪರ್ಯಾಯವೇ ಕನ್ನಡ ಶಾಸನಗಳಲ್ಲಿ ಬರುವ 'ಮತ್ತರು'. ಅದು 'ವಿವರ್ಧಿತ ವಿಂಶತಿವರ್ಗ'ದ ಸೂಚಕ 'ಮಹತ್ತರ' ಪದದ ತದ್ಭವ. 'ಎಕರೆ' ಪದವು 'ಏಕಮತ್ತರ'ದ ಅಪಭ್ರಂಶವಾಗಿರಬೇಕು. ಉತ್ತರಭಾರತದಲ್ಲಿ 'ಬೀಘಾ' ಬಹಳ ಬಳಕೆಯಲ್ಲಿದೆ. 'ಬೀಸ್ ಬಿಸ್ವಾ' ಎಂದರೆ ಒಂದು ಬೀಘೆ. ಒಂದು ಬೀಘೆಯಲ್ಲಿಯ ಇಪ್ಪತ್ತನೆಯ ಭಾಗವೇ ಬೀಸ್ವಾ(ಬೀಸವಾಂ). 'ಬಿಸ್ವಾ' ಒಂದು ಮೊಳ ಅಳತೆಯ ಸೂಚಕ. ತೂಕದಲ್ಲಿ 'ವೀಸೆ' ಐದುಸೇರಿನ ಅಳತೆ. ಕಿಟ್ಟೆಲ್ ಕೋಶದಲ್ಲಿ 'ಬೀಗೆ' (ಬೀಘೆ) ಶಬ್ದ ವಿಲ್ಲದಿರುವುದೊಂದು ಕೊರತೆ.

**ನಾಲ್ಕು :**

ಭಕ್ತರು ಗುರುಗಳಿಗೆ ಬಿನ್ನಯಿಸಿಕೊಳ್ಳುವ ಪತ್ರದ ಪದ್ಧತಿಯನ್ನು ಕ್ರಿ. ಶ. ೧೮೪೯ (?) ರಲ್ಲಿ ಬರೆದ ಈ ಕಾಗದ ಸೂಚಿಸುತ್ತದೆ.

"ಶ್ರೀಮತ್ ಪರಮ ಪಾವನ-ಪವಿತ್ರ ಚಾರು ಚರಿತ್ರ ಸಂಮೋಹ ಸಂಗ ಸನ್ಮಾರ್ಗ ಸಕಲ ದೇವತಾಶಿರಃ ಪ್ರಧಾನ ಸಾರಜನ ಸದುಹೃದಯ ಕರ್ಣಿಕಾ ನಿವಾಸ ಕರುಣ ರಸಭರಿತ ಕಾಮನಾಶನ ಅನಾದಿ ನಿರಂಜನ ಅಲ್ಲಮ ಪ್ರಭುದೇವರ ಸಂಪ್ರದಾಯಕರಾದ ರಾಜಪೂಜಿತ ರಾಜಶ್ರೀ ತೋಂಟದ ಸ್ವಾಮಿಯವರ ದಿವ್ಯ ಶ್ರೀಪಾದ ಪದ್ಮಗಳಿಗೆ ಕಾರುಣ್ಯಪ್ರಿಯ ಭಕ್ತನಾದ ನಾಲವಾರದ ಬಸಪ್ಪನು ಮಾಡುವ ದೀರ್ಘದಂಡ ಬಿನ್ನಹ

ಆದಾಗಿ ನಾವು ಈ ಕೀಲಕನಾಮ ಸಂವತ್ಸರ ಕಾರ್ತಿಕ[೧]ವದಿ ೧ ಶುಕ್ರವಾರದ ಸಾರೋದಕ್ಕೆ[೨] ತಮ್ಮ ಅನುಗ್ರಹದಿಂದ ಪರಿಣಾಮದಲ್ಲಿ ಇದ್ದೇವೆ. ತಮ್ಮ ಕಡೆಯಣ ಶಿವಾನಂದ ವೈಭವಂಗಳನು ನಿರಂತರ ಆಶೀರ್ವದಿಸಿ ಪತ್ರವನ್ನು ಬರೆಸಿ ಕೃತಾರ್ಥರ ಮಾಡುವಲ್ಲಿಗೆ ಕರ್ತೃಗಳೇ ಸೈ. ತದನಂತರ ರಾಜಶ್ರೀ...."

**ಐದು :**

ಶಾ. ಶ. ೧೭೭೬ (ಕ್ರಿ. ಶ. ೧೮೫೪) ಆನಂದನಾಮ ಸಂವತ್ಸರ ಕಾರ್ತಿಕ[೩] ಬ. ೬ ಗುರುವಾರ ಪುಷ್ಯನಕ್ಷತ್ರದ ಪುಣ್ಯಕಾಲದಲ್ಲಿ ಶ್ರೀಮದವಿರಳ ಪರಂಜ್ಯೋತಿ ಸ್ವರೂಪ ಸಚ್ಚಿದಾನಂದ ನಿತ್ಯಪರಿಪೂರ್ಣ ನಿರಾಕಾರ ಸ್ವರೂಪಿಗಳಾದ ಅನ್ನದಾನಿ ಸ್ವಾಮಿಗಳವರ ಚರಣಾರವಿಂದಗಳಿಗೆ 'ನಿಜಪದ ಭಜನ ಭಕ್ತಿನಿರತ'ರಾದ ಕಸಬೆ[೪] ಅಣ್ಣಿಗೇರಿ ಸೀಮೆ ದೇಸಾಯಿ ಭದ್ರಪ್ಪಗೌಡರು ತಮ್ಮ ಇನಾಮತಿ[೫] ಉಮ್ಮಳಿ (ಉಂಬಳಿ) ಮಜರೇ[೬] ಬನಾಪುರದ ಸೀಮೆಯಲ್ಲಿಯ ಭೂಮಿಯನ್ನು 'ಚವರೀಮಾನ್ಯ' ವೆಂದು ನಿಧಿ-ನಿಕ್ಷೇಪ[೭] ಸಹ ಧಾರಾದತ್ತವಾಗಿ ನೀಡಿದ ಉಲ್ಲೇಖ ವಿರುವ ದಾನಪತ್ರವಿದು :

---

೧. 'ವೃದ್ಧಿ'ಯ ತದ್ಭವ, ಶುಕ್ಲಪಕ್ಷ ಸೂಚಕ; ೨. ಸ್ವರೋದಯ = ಸೂರ್ಯೋದಯ
೩. ಬಹುಲ-ಬಹುಳ (ಕೃಷ್ಣಪಕ್ಷ); ೪. ಕಸ್ಬಾ (ಅರಬ್ಬಿ) = ದೊಡ್ಡ ಗ್ರಾಮ;
೫. ಇನ್‌ಆಮ್ (ಅ) = ಪುರಸ್ಕಾರ, ದಾನ; ೬. ಮಜರಾ (ಅ) = ಸಣ್ಣ ಹಳ್ಳಿ;
೭. ಅಷ್ಟಭೋಗ : ನಿಧಿ, ನಿಕ್ಷೇಪ, ಅಕ್ಷೀಣ, ಆಗಾಮಿ, ಸಂಚಿತ, ಜಲ, ತರು, ಪಾಷಾಣ;

**ಆರು :**

ಗುರು ಮಠಗಳಿಗೆ ನಾಡಗೌಡರು ಮತ್ತು ಮಹಾಜನರು ಭೂದಾನ ಮಾಡು ವುದು ಧರ್ಮಕಾರ್ಯ ಅವ್ಯಾಹತವಾಗಿ ನಡೆಯಲೆಂದು. ಗ್ರಾಮ ದೇವಸ್ಥಾನಗಳ ಜೀರ್ಣೋದ್ಧಾರ, ಮಠಗಳ ಸ್ಥಾಪನೆ, ಅಲ್ಲಿ ಜಂಗಮಮೂರ್ತಿ ನೆಲಸಿ ದಾಸೋಹ ಪೂರ್ವಕ ಬೋಧೆ, ಕರ್ತೃ ಗದ್ದಿಗೆಯ ನಿತ್ಯಪೂಜೆ, ನಂದಾದೀಪಾರಾಧನೆ ಇವೆಲ್ಲ ಅವರ ದೃಷ್ಟಿಯಲ್ಲಿ ಅಖಂಡವಾಗಿ ನಡೆಯಬೇಕಾದ ಧರ್ಮಕಾರ್ಯಗಳು. ಅವುಗಳಿ ಗಾಗಿಯೇ ನಿಜಗುಣಿಗಳಾದ ಭಕ್ತಜನರು ನೀಡುವುದು ಮಾಡುವುದು.

ಸ್ವಸ್ತಿ ವಿಜಯಾಭ್ಯುದಯ ಶ್ರೀಮನ್ನೃಪ ಶಾಲಿವಾಹನ ಶಕ ೧೭೦೪ (ಕ್ರಿ. ಶ. ೧೭೮೨) ಶುಭಕೃತ್ ಸಂವತ್ಸರದಲ್ಲಿ ಕಿಲ್ಲೆ[೧] ಬಾದಾಮಿ ಸೀಮೆಯ ಸರ[೨]ದೇಸಾಯಿ, ಯಲಬರಗಿ ಸೀಮೆಯ ಪಟ್ಟಣಶೆಟ್ಟಿ, ಬಾಗಡಿಕೋಟೆ ಸೀಮೆಯ ಸರನಾಡ ಚೌಧರಿ ಹನಮಪ್ಪನವರು ಬರೆಸಿಕೊಟ್ಟ ದಾನ ಪತ್ರದಲ್ಲಿ ಸುಬೇದಾರ[೩] ವಿಷ್ಟಪ್ಪನವರ ಇಚ್ಛೆಯಂತೆ ಚೆಲುಲಿಂಗನ ಗುಡಿಯ ದುರಸ್ತಿಯು[೪] ಮಾಡಿಸಿ, ಅದರ ನಾಲ್ಕು ಮೂಲೆಗೆ ಶಿವಲಿಂಗ ಮುದ್ರೆಯ ಕಲ್ಲು ನಡೆಸಿ, ಅಲ್ಲಿ ಒಬ್ಬ ಜಂಗಮ ಮೂರ್ತಿ ಯನ್ನು ನಿತ್ಯ ಧರ್ಮಕಾರ್ಯ ಕ್ರಮವಾಗಿ ನಡೆಸುವುದಕ್ಕಾಗಿ ನೇಮಿಸುವ ನಿರೂಪ ವಿಲ್ಲಿ ಉಲ್ಲಿಖಿತವಾಗಿದೆ.

**ಏಳು :**

ಶಾ. ಶ. ೧೭೦೫ (ಕ್ರಿ. ಶ. ೧೭೮೩) ಶೋಭನ ಸಂವತ್ಸರದಲ್ಲಿ ಪೂಜ್ಯ ಶ್ರೀಗಳವರ ಕಾರುಣ್ಯಪ್ರಿಯ ಭಕ್ತರು ಗದಗು ರವುಡಕುಂದೆ ಸೀಮೆ ದೇಸಾಯಿ, ಕಿಲ್ಲೆ ಬಾದಾಮಿ ಸರದೇಸಾಯಿ, ಕಲಕೆರೆ ಸೀಮೆ ನಾಡಗೌಡರಾದ ಬಾಹದರ[೫] ವೆಂಕಪ್ಪಯ್ಯನವರು ಬರೆಸಿದ ದಾನ ಪತ್ರವಿದು. ಇದರಲ್ಲಿ ಬಾದಾಮಿ ಸೀಮೆಯ ಉಪ್ಪಳಿ ಗ್ರಾಮ ಉಮಚಿಗಿಯಲ್ಲಿ ಶಾಖಾ ಮಠದ ಧರ್ಮ ನಡೆಯಬೇಕೆಂದು

---

೧. ಕಿಲಾ (ಅರಬ್ಬಿ) ದುರ್ಗ, ಕೋಟೆ, ಕೊತ್ತಳ;

೨. ಪಾರ್ಸಿ ಶಬ್ದ, ಸಂಸ್ಕೃತ ಶೀರ್ಷದ ತದ್ಭವ;

೩. ಸುಬೇದಾರ = ಪ್ರಾಂತಶಾಸಕ, ಪ್ರದೇಶಾಧಿಕಾರಿ; ಸೂಬಾ (ಅ) = ಪ್ರಾಂತ, ಪ್ರದೇಶ ದಾರ್ (ಪಾರ್ಸಿ) = ವತ್ (ಉಳ್ಳ, ಹೊಂದಿದ) ಅರ್ಥದಲ್ಲಿಯ ಪ್ರತ್ಯಯ;

೪. ದುರಸ್ತೀ (ಪಾರ್ಸಿ) = ಖಂಡ ಸ್ಫುಟಿತದ ಸುಧಾರಣೆ, ಜೀರ್ಣೋದ್ಧಾರ; 'ಮರಮ್ಮತ್' ಅದೇ ಅರ್ಥದಲ್ಲಿಯ ಇನ್ನೊಂದು ಅರಬ್ಬಿ ಶಬ್ದ ಬಳಕೆಯಲ್ಲಿ ಬಂದಿದೆ. ಅದರ ಕನ್ನಡ ತದ್ಭವ 'ಮರಾಮತು';

೫. ಬಹಾದೂರ (ಪಾರ್ಸಿ)= ಯುದ್ಧವೀರ; 'ಬಹದ್ದೂರ' ಇನ್ನೊಂದು ಕನ್ನಡ ತದ್ಭವರೂಪ

ಮೂವತ್ತಾರು ಬೀಗೆ ಭೂಮಿ ಮಾರು ೧ ಹಾಗ[1] ಜಕಾತಿ[2] ಮೇಲೆ ಹೇರಿಗೆ ಒಂದಕ್ಕೆ ರು. .॥. 'ವಾಪಿಸಕೀ ಆಯ'[3] ಸಹ ಮಾಡಿಕೊಟ್ಟ ಉಲ್ಲೇಖ ವಿಶಿಷ್ಟವಾಗಿದೆ.

**ಎಂಟು :**

ಗದಗು ನಗರದ ಕೆಲವು ಮನೆತನಗಳು ಶ್ರೀ ತೋಂಟದ ಸ್ವಾಮಿಗಳವರ ಮಠಕ್ಕೆ ಅತ್ಯಂತ ನಿಷ್ಠೆಯಿಂದ ಸೇವೆ ಸಲ್ಲಿಸುತ್ತ ಬಂದಿವೆ. ಅವುಗಳಲ್ಲಿ ಮಾನ್ವಿ ಹುಂಬಿ, ವಾಲಿ ವಂಶಜರು ಆ ಭಾಕ್ತಿಕ ಪರಂಪರೆಯನ್ನು ಇಂದಿನವರೆಗೂ ಮುಕ್ಕಾಗದಂತೆ ಕಾಪಾಡಿಕೊಂಡು ಬಂದಿರುವರು. ಕೆಳಗಿನ ಪತ್ರದಲ್ಲಿ[4] ಆ ವರ್ತಕ ಮನೆತನಗಳ ಹಿರಿಯರ ಉಲ್ಲೇಖವಿರುವದೊಂದು ವೈಶಿಷ್ಟ್ಯ:

> "ಶ್ರೀಮತ್ ಸಚ್ಚಿದಾನಂದ ಅವಿರಳ ಪರಂಜ್ಯೋತಿ ಸದಾ ಶಿವಧ್ಯಾನ ನಿರತರಾದ ರಾಜಮಾನ್ಯ ರಾಜೇಶ್ರೀ ಡಂಬಳದ ತೋಟದ ಸ್ವಾಮಿಗಳವರಿಗೆ
>
> ತಮ್ಮ ಅತ್ಯಂತ ಭಕ್ತರಾದ ಗದಗು ರವುಡಕುಂದೆ ಸೀಮೆ ಸರದೇಸಾಯಿ ಪ॥ ಸಿಂಧನೂರು ಸೀಮೆ ಸರದೇಸಾಯಿ ಕಿಲ್ಲೆ ಬಾದಾವಿ ಸ॥ ಕಲಕೇರಿ ಸೀಮೆ ನಾಡಗೌಡರಾದ ಮಥುರಾಬಾಯಿ ಸೀನಪ್ಪಯ್ಯನವರ ಪುತ್ರ ವೆಂಕಪ್ಪಯ್ಯನವರ ಪುತ್ರರಾದ ಬಹಾದರ ಸೀನಪ್ಪಯ್ಯನವರು ಬರಸಿ ಇನಾಮು ಪತ್ರವೆಂತೆಂದರೆ– ದಮ್ಮಳ ಮಠದ ಗದಗಿ ಪೂಜಾ ದೀಪಾರಾಧನೆ ಧರ್ಮಕೃತ್ಯ ಉದ್ದೇಶ ರಾ॥ ಅಂದಾನೆಪ್ಪ ಮಾನವಿ ವ ಹುಂಬಿ ವೀರಪ್ಪ ವ ವಾಲಿ ಲಿಂಗಣ್ಣ ಮುಂತಾದ ಸಮಸ್ತ ಗದಿಗಿನ ಇನಾಮತಿ ದೈವದವರು ಹೇಳಿಕೊಂಡ ಮೂಲ ಆ ಧರ್ಮ ನಡೆಯಬೇಕೆಂದು ನಮ್ಮ ಗದಿಗಿನ ಇನಾಮತಿ ಪೈಕಿ ಹೊಲ ಪುರಾಣದ ಭದ್ರಯ್ಯನ ಬಗಿ ಹೊಲಕ್ಕೆ ಪೂರ್ವದಲ್ಲಿ ಇದ್ದುದು ಮಾರು ೧ ಒಂದು ಮೂವತ್ತು ಆರು ಬಿಘೆದಲಿ ಮಟಕೆ ಮಾಡಿಕೊಟ್ಟು ಇನಾಮತಿ ಅವರಿಗೆ

---

೧. ೧/೪ ಹಣ–ಒಂದಾಣೆ ಎರಡು ಕಾಸು, ತೆರಿಗೆಯ ಆಕಾರ;

೨. 'ಜಕಾತ' ಅರಬ್ಬಿ ಶಬ್ದ. ಕುರಾನಿನ ಪ್ರಕಾರ ಧರ್ಮ ಕಾರ್ಯಕ್ಕಾಗಿಯೇ ವಿನಿಯೋಗಿಸಬೇಕಾದ ಪ್ರತಿಯೊಬ್ಬ ವ್ಯಕ್ತಿಯ ವಾರ್ಷಿಕ ಉತ್ಪನ್ನದ ಇಪ್ಪತ್ತನೆಯ ಅಂಶ ಮುಂದೆ ಅದು ಬರಿಯ ರಾಜಕರದ ಅರ್ಥದಲ್ಲಿ ರೂಢವಾಯಿತು.

೩. ವಾಪಸೀ (ಪಾರ್ಸಿ)– ಸಂತೆ ಮುಗಿದ ಮೇಲೆ ತಿರುಗಿ ಹೋಗುವಾಗ ವರ್ತಕರಿಂದ ಬರುವ ಉತ್ಪತ್ತಿ;

೪. ಕಾಲ ಕ್ರಿ. ಶ. ೧೮೧೪ ಆಗಿರಬೇಕು.

ತಾಕೀದಿ[೧] ಪತ್ರ ಬರಕೊಟ್ಟು ಇಥೇವೆ. ಆ ಭೂಮಿ ತಂಮ್ಮ ಶಿಷ್ಯ ಪರಂಪರ ಅನುಭವಿಸಿ ದಂಮ್ಮಳದ ಮಠದ ಧರ್ಮ್ಮ ನಡಸಿ ಸಂಸ್ಥಾನಕ್ಕೆ ಕಲ್ಯಾಣ ಚಿಂತಿಸಿಕೊಂಡು ಇಹುದೆಂದು ಬರಕೊಟ್ಟ ಇನಾಮ ಪತ್ರವು. ಆ ಭೂಮಿಯೊಳಗ ಇಪ್ದಂತಾ ನಿಧಿ, ನಿಕ್ಷೇಪಾದಿ, ಅಷ್ಟತೇಜೋ ಪಾರ್ಜನೆಯನ್ನು ಮಠಕೆ ಮಾಡಿಕೊಟ್ಟು ಇಥಿತೆ "ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ ॥ ಪರದತ್ತಾ ಪಹಾರೇಣ ಸ್ವದತ್ತಂ ನಿಃಫಲಂ ಭವೇತ್ ॥೧॥" (ಅಂತ್ಯದಲ್ಲಿ ಮೋಡಿ ಲಿಪಿಯಲ್ಲಿ ಬರೆಹವಿದೆ.)

**ಒಂಬತ್ತು :**

ಕ್ರಿ. ಶ. ೧೭೬೦ ರಲ್ಲಿ ಬರೆದ ಈ ಕಾಗದ. ಮಣ್ಣಿನ ಮಕ್ಕಳಾದ ರಡ್ಡಿ ರೈತರು 'ಲಿಂಗದ' 'ನಾಮದ' ಎಂಬ ಭೇದವಿಲ್ಲದೆ ಏಕೋಭಾವದಿಂದ ಶಿವಾಚಾರ ಪಥದಲ್ಲಿ ನಡೆದವರೆನ್ನುವ ಸತ್ಯವಿಲ್ಲಿ ಸುಸ್ಪಷ್ಟ :

"ಶ್ರೀಮತ್ ಪರಮ ಕೈಲಾಸ ಸಿಂಹಸನಾರೂಢ
ಪರಶಿವಲೀಲಾ ಸ್ವೀಕೃತ ಕಳೇವರರು ಮಪ್ಪ
ನಂದೀಶಾದಿ ರುದ್ರ ಪ್ರಮಥಗಣಂಗಳ
ಸಂಪ್ರದಾಯವಿಡಿದೊಪ್ಪುವ ಶ್ರೀ ಅನ್ನದಾನಿ
ಸ್ವಾಮಿಗಳ ಪಾದಕ್ಕೆ

೦॥ ನಿಮ್ಮ ಬಾಲಕರಾದ ಕ॥ ಸಿರೋಳದ ಬರಮಣ್ಣಗೌಡನ ಮಕ್ಕಳು ರಾಯಪ್ಪಗೌಡ ವ ತಿಂಮಣಗೌಡ ವ ವೀರಣಗೌಡ ವ ಸಂಕಣಗೌಡ ನಮ್ಮ ಗುಳಗೊಂದಿ ಇನಾಮಗಾವ...........ದಾನಪತ್ರ ಬರಕೊಟ್ಟು ಕ್ರಮವೆಂತೆಂದರೆ ಗುಳಗೊಂದಿ ನಮ್ಮ ಹೊಸಮಾನ್ಯ ಸರ್ವ ಮಾನ್ಯದೊಳಗೆ ಹೊಲ ಮಾರು .।. ಬೀಗೆ ವಂಬತ್ತು ನಾಕುವರೆ ಮೊಳದ ಹಾಗದಲಿ ಶಿರೋಳಧ ವಿರತಮಟ್ಟಕ್ಕೆ ನಮ್ಮ ಆತ್ಮ ಸಂತೋಷದಿಂದ ನಾಕು ಮೂಲಿಗೆ ಲಿಂಗಮುದ್ರಿಕಲ್ಲು ಹಾಕಿ ಸ್ತಾಪನಿ ಮಾಡಿ ಸ್ವಾಮಿಗಳ ಪಾದಕ್ಕೆ ಸಮರ್ಪಿತ ಮಾಡಿ ಇದ್ದೇವು. ನಮಗೆ ಸ್ವಾಮಿಗಳು ಸದಾ ಸರ್ವಕಾಲದಲ್ಲಿ ಆಸೀರ್ವಾದ ಕೊಟ್ಟುಕೊಂಡು ಸುಕದಲ್ಲಿ ಹೊಲ ಅನುಭವ ಮಾಡಿಕೊಂಡು ಇಹುದು. ನಮ್ಮ ವಳಗೆ ದಾರರೆ ಇಲ್ಲಿ ಹರಕತ್ತು ಮಾಡಿದರೆ ಶಿವಾಚಾರ ಕುಲಾಚಾರಕ್ಕೆ ಹೊರತು. ನಮ್ಮ

---

೧. ತಾಕೀದೀ ಹುಕುಂ (ಅ)= ರಾಜಾಜ್ಞೆ (ಎಚ್ಚರಿಕೆಯೊಂದಿಗೆ ನೀಡಿದುದು,) ಜಾಹಿ ಫರ್ಮಾನ (ಪಾರ್ಸಿ);

> ಕುಲದೈವ ಪರುತದೇವರು ವೆಂಕಟೇಶ ಸಾಕ್ಷಿಯಾಗಿ ಕೊಟ್ಟು ಇದ್ದೇವು. ನಮ್ಮ ಆತ್ಮಸಂತೋಷದಿಂದ ಬರಕೊಟ್ಟ ದಾನಪತ್ರ॥.... ಪ್ರಮಾತಿ ನಾಮ ಸಂವತ್ಸರದ ಜ್ಯೇಷ್ಠ ಶುದ್ಧ ಪುರ್ಣೊಮಿ[೧] ಶಕೆ ೧೬೮೧ ಸ್ವದಸ್ತೂರ[೨] ಯಿರಣಗೌಡರ ಬರಹ"

ಕೆಳಗೆ ಹಿರೇಮಠದ ಪಟ್ಟದ ದೇವರು, ರೇವಯ್ಯ ದೇವರು, ಇಟಗಿ ಬನ್ನಿಕೊಪ್ಪದ ಚಿಣ್ಣಪ್ಪಗೌಡರು ಮುಂತಾದ ಗ್ರಾಮಸ್ತರ ಸಾಕ್ಷಿಯ ಕನ್ನಡ ಹಸ್ತಾಕ್ಷರಗಳಿವೆ. ಕೆಲವು ಮೋಡಿಯಲ್ಲಿವೆ.

ಹತ್ತು :

ಹಿಂದಿನ ಕಾಲದ ತಾಮ್ರಪಟ ಮತ್ತು ಶಿಲಾಶಾಸನಗಳಲ್ಲಿ ಭೂದಾನದ ಸೀಮೆಯ ಚಕ್ಕುಬಂದಿ ಬಹಳ ವಿಸ್ತರವಾಗಿರುತ್ತದೆ. ಅಲ್ಲಿ ಹೊಳೆ-ಹಳ್ಳ, ಬಹುಕಾಲ ಬಾಳುವ ಮರಗಳೇ ಗಡಿಯ ಗುರುತುಗಳಾಗಿರುತ್ತವೆ. ದಾನಭೂಮಿ ಐಮೂಲೆಯಾಗಿರಕೂಡದು. ಗಡಿಯನ್ನು ಗುರುತಿಸುವ ಈ ಪ್ರಾಚೀನ ಪದ್ಧತಿ ಯನ್ನೇ ೧೯ ನೆಯ ಶತಮಾನದಲ್ಲಿಯೂ ಅನುಸರಿಸಿರುವುದನ್ನು ಈ ದಾನಪತ್ರದಲ್ಲಿ ಕಾಣುತ್ತೇವೆ.

ಶಾ. ಶ. ೧೭೨೮ (ಕ್ರಿ.ಶ. ೧೮೦೬) ಅಕ್ಷಯನಾಮ ಸಂವತ್ಸರ ಫಲ್ಗುಣ ವದ್ಯ ದಶಮಿ ಗುರುವಾರ ಮೌಜೆ ಮಲ್ಲಾಪುರ ಬಣಗೌಡನ ಗಿರಿಯಪ್ಪಗೌಡನ ಮಗ ಲಿಂಗಣಗೌಡನು ಬರಕೊಟ್ಟ ಭೂದಾನ ಪತ್ರ :

> " ವಿರಕ್ತ ಮಠದ ದೀಪಾರಾಧನೆ ನಡೆಯಬೇಕೆಂದು ತ್ರಿಕರಣಶುದ್ಧ ವಾಗಿ ಆತ್ಮಸಂತೋಷದಿಂದ ತಮ್ಮ ಇನಾಮ ಹೊಲ ನಾಲ್ಕುವರಿ ಮೂರು ಪೈಕಿ ಬಾಲಪ್ಪಗೌಡರವರ ದೀಪಾರಾಧನೆ ಹೊಲಕ್ಕೆ ಹೊಂದಿ ಉತ್ತರ ಭಾಗಕ್ಕೆ ಹೊಲ ಮೂರು –ಒಂದು ವೀಸಾ[೩], ಪಶ್ಚಿಮ ಭಾಗಕ್ಕೆ ಅರ ಹುಣಸಿ ಹಾದಿ ಮೊದಲು ಮಾಡಿಕೊಂಡು, ದಕ್ಷಿಣ ಭಾಗಕ್ಕೆ ಹಳ್ಳ ಪರಿಯಂತರ ಚೌಮೂಲಿ ಶುದ್ಧವಾಗಿ ಮಾನ್ಯ ಪೂರ್ವಕ್ಕೆ ಕೊಟ್ಟು ಇಧೇವೆ. ಶಿಷ್ಯ ಪಾರಂಪರವಾಗಿ ಅನುಭವಿಸಿಕೊಂಡು ಶ್ರೀ ದೇವರ ಗದ್ದುಗೆಗೆ ದೀಪಾರಾಧನೆ ಮಾಡಿ ಸುಖದಲ್ಲ ಬಹುದು. ಇದಕ್ಕೆ ನಾನು

---

೧. ಕ್ರಿ. ಶ. ೧೭೫೯.

೨. ದಸ್ತೂರ (ಪಾರ್ಸಿ) = ಹಸ್ತದ; ರೀತಿ, ನಿಯಮ, ಪದ್ಧತಿಯ ಅರ್ಥದಲ್ಲಿಯೂ ಈ ಪದ ಪ್ರಯುಕ್ತವಾಗಿದೆ.

೩. ೧/೬ ಹಣ = ೩ತ್ತಿ ಕಾಸು, ತೆರಿಗೆಯ ಆಕಾರ; ಹಣ = ೪ ಆಣೆ, ೮ ಕಾಸು.

ಅಥವ ನಮ್ಮ ವಂಶದ ವಳಗಾಗಿ ದಾರಾರು ವಬ್ಬರು ದಿಕ್ಕತು ಮಾಡಿದರೆ ಕುಲಾಚಾರಕ್ಕೆ ಹೊರತು."

ಹನ್ನೊಂದು:

ಶಾ. ಶ. ೧೭೦೦ (ಕ್ರಿ. ಶ. ೧೭೭೮) ಮಾರ್ಗಶಿರ ಬಹುಳ ೧೨ರಲ್ಲಿ ಆರೇರ ಶಿದ್ದೋಜಿಯ ಹಾವಳಿಯಿಂದ ಗ್ರಾಮದ ಪುನರ್ನಿವೇಶನಕ್ಕಾಗಿ ಆ ಗ್ರಾಮವನ್ನು ತೋಟದ ಸ್ವಾಮಿಗಳವರಿಗೆ ಅಧೀನಗೊಳಿಸಿ ಶ್ರೀ ಮನ್ಮಹಾನಾಯಕಾಚಾರ್ಯ ಬಾಗುಳಿ ಬಸಪ್ಪ ನಾಯಕ ಅಯ್ಯನವರು ಹಂಪಸಾಗರದ ಗೌಡ-ಸೇನಬೋಗರು, ಪ್ರಜೆಗಳು, ದೈವದವರು, ನಿಯೋಗಸ್ತರು, ಅಂಗಡಿಕಾರರು ಮುಂತಾದ ಸಮಸ್ತರಿಗೆ ಬರಸಿಕೊಟ್ಟ ಕಾಲಕ್ರಮದ ಪತ್ರ ಕನ್ನಡ ಸಾಮಾಜಿಕ ವ್ಯವಸ್ಥೆಯ ಇತಿಹಾಸ ದಲ್ಲಿಯೇ ಹೊಸತು. ಮನೆಯಿದ್ದವರು, ಹೊಸದಾಗಿ ಮಾಳಿಗೆ ಮನೆ ಕಟ್ಟಿದವರ ಅರೆಗಂಡಾಯ–ಬಿರಾಡ ಕೊಡುವ ಕರಾರಿದ್ದರೆ ಹುಲ್ಲು ಮನೆಯಲ್ಲಿ ವಾಸಿಸುವ ಬಡವರು ಎರಡು ವರ್ಷ ಬಿರಾಡ ಕೊಡಬೇಕಾಗಿರಲಿಲ್ಲ. ಅವರಿಗೆ ಅರೆಗಂಡಾಯದ ಸವಲತ್ತನ್ನೂ ದಯಾಳು ಶ್ರೀಗಳವರು ದಯಪಾಲಿಸಿದ್ದರು.

ಹನ್ನೆರಡು :

ಶ್ರೀ ತೋಂಟದ ಮಠದ ಧಾರ್ಮಿಕ ಆಚರಣೆಯ ಪರಂಪರೆಯಲ್ಲಿ ವಿಶಾಲ ಮನೋಭಾವ ಹಾಸುಹೊಕ್ಕಾಗಿ ಸಾಮಾಜಿಕರಲ್ಲಿ ಪರಸ್ಪರ ಸೌಹಾರ್ದವನ್ನು ನೆಲೆ ಗೊಳಿಸಿತ್ತು. ಶ್ರೀಗಳವರು ತಮ್ಮ ಪೀಠದ ಸ್ಥಾನಮಾನದ ಘನಪ್ರತಿಷ್ಠೆಯ ಹಮ್ಮಿನಲ್ಲಿ ಪರಮತದವರ ಮನವನ್ನು ಎಂದೂ ನೋಯಿಸಿದವರಲ್ಲ. ಬ್ರಾಹ್ಮಣ ಅಧಿಕಾರಿಯೊಬ್ಬರಿಗೆ ತಾವೇ ಬರೆದ ಈ ಪತ್ರದಲ್ಲಿ ಅವರ ಲೌಕಿಕ ಜಾಣ್ಮೆ ಒಡೆದು ಕಾಣುತ್ತದೆ.

"ಶ್ರೀಮದ್ಗುರು ಸಿದ್ಧೇಶ್ವರ ಚರಣಸಂಭವ
ತೋಂಟದ ಸ್ವಾಮಿಗಳು

ಅಖಂಡಿತ ಲಕ್ಷ್ಮಿಯಲಂಕೃತ ಲಕ್ಷ್ಮೀ ಕಟಾಕ್ಷೇಕ್ಷಣ ನಯ ವಿನಯ ದಯಾದಾಕ್ಷಿಣ್ಯಾದಿ ಸಮಸ್ತ ಸದ್ಗುಣಾಭರಣ ವಿಭೂಷಿತ ನಂಮ್ಮ ಅತಿಶಯಾನಂದ ಪ್ರೇಮಿಗಳಾದ ಗದುಗಿನ ಸುಭೆದಾರ ಆನಂದ ರಾಯರಿಗೆ ಸಕಲ ಕಲ್ಯಾಣಪ್ರದವಾಗಲೆಂದ ಹರಸಿ ಕಳುವಿಸಿದ್ದೇವೆ. ಆದಾಗಿ ನಾವು ಮನ್ಮಥ ಸಂ. ಜೇಷ್ಠ ೪ ನಿಲುವಿಗಿ ಬಂಕಾಪುರದಲ್ಲಿ ಶಿವಾನಂದ

ಭರಿತರಾಗಿದ್ದೇವೆ. ನಿಮ್ಮ ಪರಿಣಾಮ ಬರಸುತ ಬಹುದು. ತರುವಾಯ ರಾ|| ಗೋವಿಂದರಾಯರು ದೇಶಕುಲಕರ್ಣಿ ರುದ್ರಪ್ಪನವರು ನಿಮಗೆ ಕಾಗದ ಬರಸಿದಾರೆ. ಆದರಿಂದ ನಿಮಗೆ ಸಕಲವು ತಿಳಿ ಬಂದಿತು. ಹಂತೇಲಿ ಇದ್ದಾಂತ ಯೊರತ್ತಯ್ಯನ ಬಗೆವು ಸನದ ನಿಮಗೆ ನಕಲ ಬರಸಿದ್ದಾರೆ. ಅವನು ನೀವು ದೈವದವರು ಮನಸಿಗೆ ತಂದು ರಾ|| ಅಪ್ಪನವರಿಗೆ ಯಾವ ಪ್ರಕಾರ ಕಾಗದ ಬರಸಬೇಕೋ ಆ ಪ್ರಕಾರ ಕಾಗದ ಬರಸಿ.... ಸಕಲ ಮಾತಿನ ವಾಂಚಲ್ಯ ನಿಮ್ಮನ್ನೇ ಕೂಡಿದ ಮೇಲೆ ನೂತನವಾಗಿ ಬರಸುವದೇನಿದೆ.

ಯಿಂತಿ ಆ|| ”

**ಹದಿಮೂರು :**

ಷಟ್‌ಸ್ಥಲ ಚಕ್ರವರ್ತಿ ಶ್ರೀ ಸಿದ್ಧಲಿಂಗ ಯತಿರಾಜನು ಗುರುವರ್ಯನ ಸೇವೆ ಮಾಡಿ ಅನುಗ್ರಹ ಪಡೆದು ಸಾವಿರಾರು ಚರಮೂರ್ತಿ ವಿರಕ್ತರೊಡನೆ ಜಗದುದ್ಧಾರಕ್ಕಾಗಿ ಆ ಸೇತು – ಹಿಮಾಲಯ ಸಂಚರಿಸಿದ ಚರಿತೆ ಪುರಾಣ ಪ್ರಸಿದ್ಧ:

ಪೊಡಮಟ್ಟು ಗುರುವಿನಡಿದಾವರೆಗೆ ನಲವಿನಿಂ
ಪೊಡವಿಯಂ ಸಲಹಬೇಕೆಂದು ಚರಮೂರ್ತಿಗಳ
ಗಣನದೊಡಗೂಡಿ ಸಮತೆಯೆನಿಪ್ಪ ಭಸ್ಮಘುಂಟಿಕೆಯ ಸದ್ಭಾವವೆಂಬ ।
ದೃಢಮಾದ ದಂಡವ ದಯಾಕಮಂಡಲವ ನೆರೆ
ಸಡಗರದೆ ವೈರಾಗ್ಯವೆಂದೆಂಬ ಕಪ್ಪರವ
ಪಿಡಿದು ಸುಜ್ಞಾನವೆನಿಸುವ ಕಂತೆದೊಟ್ಟು ನಡೆದಂ ಶರಣರಧಿನಾಥನು ॥

ಪೆಂಪಿನಿಂದ ಖಿಲದೇಶಂಗಳಂ ನೋಡುತ್ತ-
ಲಂಪಿನಿಂದವಿಮುಕ್ತ ಸೌರಾಷ್ಟ್ರ ನೀಲಕಂ-
'ಠಂ ಪರ್ವತಂ ಕೊಲ್ಲಿಪಾಕಿ ಕೇತಾರ ದ್ರಾಕ್ಷಾರಾಮ ಗೋಕರ್ಣವು ।
ಪಂಪೆ ಶಿವಗಂಗೆ ರಾಮೇಶ್ವರಂ ಪೊನ್ನಾಂಬ-
ಲಂ ಪಿರಿದೆನಿಪ ಕಾಳಹಸ್ತಿಯೆಂದೆಂಬಿವುಗ-
ಳಂ ಪದುಳದಿಂ ಚರಿಸುತರುಣಾಚಲಕ್ಕೆ ಬಂದಂ ಚಿದಾನಂದ ಮಯನು॥[೧]

‘ ಸುಜನ ವ್ರಜ ವಜ್ರ ಪಂಜರಾಯಮಾಣ ’ ಗುರುವರೇಣ್ಯ ಸಿದ್ಧಲಿಂಗೇಶ್ವರ ಸ್ವಾಮಿಯು ‘ಲೋಕೋಪಕಾರಾಯ’ ದೇಶ ಸಂಚಾರ ಮಾಡಿದ ವಿಸ್ತಾರವನ್ನು

---

೧. ಸಿ. ಪು. (ಸಂಧಿ ೩, ಪದ್ಯ ೫-೬)

ಶ್ರೀ ಮಠದ ಚರಂತಿ ಶಿಷ್ಯ ಬೆಂಕೆಯ್ಯನವರು ಬಿನ್ನಯಿಸಿಕೊಂಡ ಪತ್ರದ ಒಕ್ಕಣಿಕೆಯಲ್ಲಿ ತಿಳಿಯಬಹುದಾಗಿದೆ :

"ಶ್ರೀ ಅರ್ಧನಾರೀಶ್ವರ

ಶ್ರೀಮತ್ ಕಮಲಜಿ ಕಮಲಾಕಾಂತ ಸಂಕ್ರಂದನಾದಿ ಸುರನರ ಕಿನ್ನರ ಕಿಂಪುರುಷ ಗರುಡ ಗಂಧರ್ವ ಸಿದ್ಧ ವಿದ್ಯಾಧರ ಯಕ್ಷ ರಕ್ಷ ಸೋರಗ ಪೂಜಿತ ಪಾದಾರವಿಂದ ಸಕಲ ಫಲಪ್ರದ ಸರ್ವ ಬ್ರಹ್ಮಾಂಡ ಸಾರ್ವಭೌಮ ಸಕಲ ನಿಷ್ಕಳಸ್ವರೂಪ ಸಕಲ ಜಗದಾದಿ ಕಾರಣರೂಪ ಪರಶಿವಪರಾವತಾರ ಮೂರ್ತಿ ನಿಖಿಲವೇದ ವೇದಶಿರಃ ಶಿವಾಗನು ಪುರಾಣ ಪ್ರಶಾಖೆ ಪ್ರತಿಪಾದ್ಯಮಾನ ಶ್ರೀ ವೀರಶೈವ ಷಟಸ್ಥಳ ಶಿವಯೋಗ ಶಿವಾದ್ವೈತ ಪ್ರತಿಷ್ಠಾಪನಾಚಾರ್ಯ ನಿರತಿಶಯ ಭಕ್ತಿ, ಜ್ಞಾನ, ವೈರಾಗ್ಯ, ದ್ವಿಗುಣ ಮಣಿಗಣ ರತ್ನಾಕರಾಯಮಾನ ಶಿವ ಸಮಯ ಶರಣಾಗತ ಸುಜನ ವ್ರಜ ವಜ್ರ ಪಂಜರಾಯಮಾನ ಷಟುಸ್ಥಲಾಚಾರ್ಯ ಪರಮ ಪ್ರಸನ್ನ ಕೃಪಾಪಾತ್ರ ಶಿವಧ್ಯಾನ ಶಿವಜ್ಞಾನ ಶಿವವ್ರತ ಶಿವಾರ್ಚನ ನಿಷ್ಠ ಕಾಶೀ ಕೇತಾರ ಶ್ರೀಶೈಲ ಗಂಡಕಿ ತುಂಗಭದ್ರಾದಿ ಗಣ್ಯ ಸುಪುಣ್ಯ ತೀರ್ಥಕ್ಷೇತ್ರ ಸಂಚರಣ ಪರಮಸ್ವತಂತ್ರ ಶಿವಪರಾವತಾರ ನಿರಾಭಾರ ನಿರ್ವಿಚಾರ ಗ್ನಾನರೂಪ ರಾಜಾಧಿ ರಾಜ ಪೂಜಿತ ರಾಜಮಾಂನ್ಯ ರಾಜಶ್ರೀ ಸಿದ್ಧೇಶ್ವರ ಸ್ವಾಮಿಗಳವರ ಹೃತ್ಕಮಲದಲ್ಲಿ ಉದ್ಭವರಾದ ಶ್ರೀ ತೋಂಟದ ಸ್ವಾಮಿಗಳ ಪಾದಪದ್ಮ ಯುಗ್ಮಂಗಳಿಗೆ"–

ಈ ಪತ್ರದ ಒಕ್ಕಣಿಕೆಯಲ್ಲಿ ದಂಡಿಯ ಪದಲಾಲಿತ್ಯವು ಲಾಸ್ಯವಾಡುತ್ತದೆ. ಶ್ರೀ ತೋಂಟದ ಮಠದ ಶಿಷ್ಯಪರಂಪರೆಯಲ್ಲಿ ಸಂಸ್ಕೃತ-ಕನ್ನಡ ಉಭಯ ಭಾಷೆಗಳಲ್ಲಿ ಪಾರಂಗತರಾದ ಕವಿ–ವಾಗ್ಮಿ–ಶಾಸ್ತ್ರಜ್ಞರು ಅನೇಕರು. 'ಸಿದ್ಧೇಶ್ವರ ಪುರಾಣ'ದ ಕವಿ ವಿರಕ್ತ ತೋಂಟದಾರ್ಯರು ಸಂಸ್ಕೃತ ಪಂಡಿತರು.

ನುತಮಹಾಶಾಸ್ತ್ರಾರ್ಥ ಚತುರನೆಂದೆನಿಸುವ–
ಪ್ರತಿಮ ಗುಣಗಂಭೀರ ನುತಭಕ್ತವಿತತಿ ಪೂ-
ಜಿತ ವಿರತತೋಂಟದಾರ್ಯಂ ಲೋಕಕತಿ ಚಮತ್ಕೃತಿ
ಯಿಂದೆ ಪೇಳ್ದನಿದನು೧ ||

೧. ಸಿ. ಪು. (ಸಂ. ೧., ಪ. ೨೪)

ಶ್ರೀ ತೋಂಟದ ಸ್ವಾಮಿಗಳ ಶಾಖಾಮಠಗಳಲ್ಲಿ ವಿರಕ್ತ ತೋಂಟದಾರ್ಯ ರಂತಹ ಜಂಗಮಮೂರ್ತಿಗಳು ವಿರಾಜಮಾನರಾಗಿದ್ದುಕೊಂಡು ಧರ್ಮದ ಅಭಿವೃದ್ಧಿಯೊಂದಿಗೆ ಸಾಹಿತ್ಯ ಕೃಷಿಯನ್ನೂ ಮಾಡಿ ಜನಮಾನ್ಯರಾಗಿದ್ದರು.

ಕನ್ನಡನಾಡ ಉತ್ತರಗಡಿಯೆನಿಸಿದ ವಿಜಾಪುರದ ಸೀಮೆಯಲ್ಲಿ ಆದಿಲಶಾಹಿ ಶಾಸನದ ಪ್ರಭಾವದಿಂದ ದಖನಿ ಹಿಂದಿಯ ಭಾಷೆ ಬೆಳೆಯಿತು. ಅದರಲ್ಲಿ ಅಪೂರ್ವ ಸಾಹಿತ್ಯದ ನಿರ್ಮಾಣವೂ ಆಯಿತು. ಆದರಿಂದ ಉರ್ದು ಭಾಷೆ ಶ್ರೀಮಂತವೆನಿಸಿತು. ಈ ದಖನಿ ಕನ್ನಡದಲ್ಲಿ ಸಹಜವಾಗಿ ನುಸುಳಿಬಂದಿತು; ಬಳಕೆಯ ಹೊಸಗನ್ನಡ ನುಡಿಗೆ ಕಳೆತಂದಿತು. ೧೮-೧೯ ನೆಯ ಶತಮಾನದ ಕನ್ನಡ ಮಾತಿನ ಮೋಡಿಯಲ್ಲಿ ಸಂಸ್ಕೃತ ದಖನಿ ಭಾಷೆಗಳ ಗಂಗಾ-ಜಮುನಿಯ ಛಾಯ ಮನೋಜ್ಞವಾಗಿದೆ. ಭಾಷಾ ವಿಜ್ಞಾನ - ಸಮಾಜಶಾಸ್ತ್ರಗಳ ಅಭ್ಯಾಸದ ದೃಷ್ಟಿಯಿಂದ ಈ ಪತ್ರ ಸಾಹಿತ್ಯದಲ್ಲಿ ಸಂಶೋಧಕರಿಗೆ ಸಾಕಷ್ಟು ಸಾಮಗ್ರಿ ಸಿಗುವಲ್ಲಿ ಸಂದೇಹವಿಲ್ಲ.

## ಆಧಾರಗ್ರಂಥ ಸೂಚಿ

೧. ಶ್ರೀ ಸಿದ್ಧೇಶ್ವರ ಮಹಾಪುರಾಣ (ವಿರಕ್ತ ತೋಂಟದಾರ್ಯ ಕೃತ)
ಶ್ರೀ ಜಗದ್ಗುರು ತೋಂಟದಾರ್ಯ ಮಹಾ ಸಂಸ್ಥಾನಮಠ, ಗದಗ, ೧೯೫೧;

೨. ಉರ್ದು-ಹಿಂದಿಕೋಶ ಶ್ರೀ ರಾಮಚಂದ್ರ ವರ್ಮಾ, ೧೯೪೦,
ದ್ವಿ. ಸಂಸ್ಕರಣ;

೩. Kittel's Kannada-English Dictionary (Revised Edn.)
Madras university, 1971;

೪. ದಕ್ಖಿನೀ ಹಿಂದೀ ಕಾವ್ಯಧಾರಾ – ಶ್ರೀ ರಾಹುಲ ಸಾಂಕೃತ್ಯಾಯನ,
ಬಿಹಾರ ರಾಷ್ಟ್ರಭಾಷಾ ಪರಿಷತ್, ಪಟನಾ, ೧೯೫೯;

೫. ಜಂತ್ರಿ (Indian Chronological Tables), ಸಂಪಾದಕರು;
ಶ್ರೀ ಆರ್. ಎಸ್. ಪಂಚಮುಖಿ, ಎಂ.ಎ. ಕನ್ನಡ ಸಂಶೋಧನ ಸಂಸ್ಥೆ,
ಧಾರವಾಡ, ೧೯೫೩;

# ನೀನೆ ಸಿದ್ಧ, ನೀನೆ ಲಿಂಗ!

— ಡಾ. ಶ್ರೀ ಜ. ಚ. ನಿ.

ಸಿದ್ಧಲಿಂಗ ಭವಭಯಭಂಗ
ಶುದ್ಧ ಸಿದ್ಧ ಪ್ರಸಿದ್ಧ ಪವಿತ್ರಾಂತರಂಗ
ನಿನ್ನ ನಾಮವೆ ನಿನಗೆ ನಿಜರೂಪು, ನಿಜಕ್ರಿಯೆ
ನಿನ್ನಿಂದ ನಡೆಯಿತು ಮಾನವೋದ್ಧಾರ ಪ್ರಕ್ರಿಯೆ !

ನೀನು ಕ್ರಿಯಾಚಾರ ಸಿದ್ಧ, ಕ್ರಿಯಾನುಷ್ಠಾನ ಪ್ರಸಿದ್ಧ
ನೀನೇ ಸಮಾಜಪುರುಷನ ಕರಸ್ಥಲ ಕ್ರಿಯಾಲಿಂಗ,
ಕಂಡು ನಲಿವ ಕಳಾಲಿಂಗ !

ನೀನು ಜ್ಞಾನಾಚಾರ ಸಿದ್ಧ, ಜ್ಞಾನ ಪ್ರಚಾರ ಪ್ರಬುದ್ಧ;
ನೀನೇ ಜಿಜ್ಞಾಸು ಜನ ಮನಸ್ಥಲ ಪ್ರಾಣಲಿಂಗ ;
ನೆನೆದು ನೆರೆವ ಚಿಲ್ಲಿಂಗ !

ನೀನು ಭಾವಾಚಾರಸಿದ್ಧ, ಭಾವಾನುಭಾವ ಪ್ರವೃದ್ಧ;
ನೀನೇ ಭಾವುಕ ಜನರ ಭಾವಸ್ಥಲ ಭಾವಲಿಂಗ ;
ಭಾವೋನ್ನತಾನಂದಲಿಂಗ !

# ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯ ಪರಂಪರೆ (ಸು. ೧೪೦೦–೧೪೭೦)







ಚೆನ್ನದೇವ (ಚೆನ್ನಾಚಾರ್ಯ)
ಅಥವಾ
ಚೆನ್ನಂಜೇದೇವರು (ಸು. ೧೪೭೦)

ಸಪ್ಪೆಯಾರ್ಯ೧೫ (ಸು. ೧೪೭೦)
ಕವಿಶಾಂತ೧೬

ಬೋಳಬಸವೇಶ್ವರ೧೭ (ಸು. ೧೪೮೦)
ಗುಮ್ಮಳಾಪುರದ ಸಿದ್ಧವೀರ೧೮
ಗುಮ್ಮಳಾಪುರದ ಸಿದ್ಧಲಿಂಗ ದೇವರು (ಸು. ೧೪೯೦)
ಗೂಳೂರು ಸಿದ್ಧವೀರಸ್ವಾಮಿ೧೯ (ಸು. ೧೪೯೦)
ಶಿಷ್ಯ — ಉದ್ದಾನಾರ್ಯ (ಗಗನದಾರ್ಯ) (ಸು. ೧೫೦೦) — ಶಿಷ್ಯ
ಕವಿಹರೀಶ್ವರ೨೦

ಅರುಣಾಚಲ ಸಿದ್ಧಲಿಂಗಾಖ್ಯ ಸ್ವಾಮಿ (ಸು. ೧೪೯೦)
ಎಳಂದೂರ ಹರೀಶ್ವರ
ಶಾಂತವೀರೇಶ್ವರ (ಸು. ೧೪೭೫)
ಮಗ ಪ್ರಭುದೇವ — ಶಿಷ್ಯ ಪರ್ವತಶಿವಯೋಗಿ೨೧
ಮಗ ತೋಂಟದಾರ್ಯ

ಘನಲಿಂಗಿದೇವ೨೨

ಮಗ ಗುಬ್ಬಿ ಮಲ್ಲಣಾರ್ಯ೫ (೧೫೧೩)
ಮಗ ಶಾಂತೇಶ೬ (೧೫೬೧)
ಚೇರಮಾಂಕ೭ (೧೫೨೬)

ಎಳಮಲೆಯ ಗುರುಶಾಂತದೇವ೮
ಪರ್ವತೇಂದ್ರ (ದೀಕ್ಷಾಗುರು)
ವಿರಕ್ತ ತೋಂಟದಾರ್ಯ೨೩
ಬಿಜ್ಜಾವರದ ತೋಂಟದ ಸಿದ್ಧಲಿಂಗ ಭೂಪಾಲ
ಸಂಪಾದನೆಯ ಸಿದ್ಧವೀರೇಶ
(ಸಂಪಾದನೆ ಸಿದ್ಧವೀರಣ್ಣೊಡೆಯ)೧೦
ಸಂಪಾದನೆ ಬೋಳಬಸವದೇವರು೧೧
ಸಂಪಾದನೆ ಗುರುಲಿಂಗದೇವ೧೩
ಚೆನ್ನಮಲ್ಲಿಕಾರ್ಜುನ೧೨
ಸಂಪಾದನೆ ಕವಿ ಪರ್ವತೇಶ೧೪

(ಶೀಲಾಳಸಮಯ)
ಹರಿಹರ ಸ್ವಾಮಿ
ಭಿಕ್ಷುಕದ ಬಸವಲಿಂಗಾರ್ಯ
ಕಟ್ಟಿಗೆಹಳ್ಳಿ ರಾಜೋಟಿ
ಅಣ್ಣಿಗೇರಿ ಕಾಡಿ ಮಹಂತ ಸ್ವಾಮಿ
ಅರ್ಧನಾರೀಶ್ವರ ಸ್ವಾಮಿ
ಈಸೂರ ನಂದೀಶ್ವರ ಸ್ವಾಮಿ
ಉಗ್ಗಡ ತೋಂಟದಾರ್ಯ ಸ್ವಾಮಿ
ಸದಾಶಿವ ಸ್ವಾಮಿ
ಮಹಾಂತ ಸ್ವಾಮಿ
ವೃದ್ಧ ತೋಂಟದಾರ್ಯ
ಮೃತ್ಯುಂಜಯ ಸ್ವಾಮಿ
ಸಿದ್ಧೇಶ್ವರ ಸ್ವಾಮಿ
ಗುರುಬಸವ ಸ್ವಾಮಿ
* ಶಿವಕುಮಾರ ಮಹಾಸ್ವಾಮಿಗಳು
* ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು

* ಹೆಚ್ಚಿಗೆ ಜೋಡಿಸಲಾಗಿದೆ

ಕಟ್ಟಿಗೆಹಳ್ಳಿ ಸಿದ್ಧವೀರಸ್ವಾಮಿ (ಸಿದ್ಧಲಿಂಗ ಸ್ವಾಮಿ)೨೪

(ಮುರಿಗಾ ಸಮಯ)
ಮುರಿಗಾ ಶಾಂತವೀರ
(ಮುರಿಗಾ ರಾಜೇಂದ್ರಸ್ವಾಮಿ)೨೫
ಇಮ್ಮಡಿ ಗುರುಸಿದ್ಧ ಸ್ವಾಮಿ೨೬
ಕಪ್ಪಿನ ನಂಜೇಸ್ವಾಮಿ (ಸಂಗಡದ) ಮುದ್ದು ಬಸವರಾಜ ದೇವರು — ಮಹಂತಸ್ವಾಮಿ
ಸ್ವಾದಿವೀರ ಚೆನ್ನಬಸವಾರ್ಯ೨೭
ಸಿರಹಟ್ಟಿ ಸಿದ್ಧಲಿಂಗ ಸ್ವಾಮಿ
ಗುರುಪಾದ ಸ್ವಾಮಿ
ಮೂರು ಸಾವಿರದ ಗುರುಪಾದಸ್ವಾಮಿ
ಮೂರು ಸಾವಿರದ ಸಿದ್ಧಲಿಂಗಸ್ವಾಮಿ
ಒಪ್ಪೊತ್ತಿನ ಚೆನ್ನವೀರ ಸ್ವಾಮಿ
ವ್ಯಾಕರಣದ ಸಿದ್ಧಲಿಂಗ ಸ್ವಾಮಿ
ನಿಘಂಟಿನ ಸಿದ್ಧಬಸವ ಸ್ವಾಮಿ
ಸಣ್ಣ ಬರಹದ ರಾಜೋಟಿ ಸ್ವಾಮಿ
ಮಹಾಲಿಂಗ ಸ್ವಾಮಿ
ಹೆಬ್ಬಾಳದ ರುದ್ರ ಸ್ವಾಮಿ
ಮುಪ್ಪಿನ ಸ್ವಾಮಿ
ಜಯದೇವ ಸ್ವಾಮಿ
ಜಯವಿಭವ ಸ್ವಾಮಿ
ಮಲ್ಲಿಕಾರ್ಜುನ ಸ್ವಾಮಿ

(ಕುಮಾರಸಮಯ)
ನೋಡಸಿದ್ಧಲಿಂಗ
ಕುಮಾರದೇಶಿಕೇಂದ್ರ
ಸಿದ್ಧಬಸವ ಸ್ವಾಮಿ
ಮುರುಘಾ ಶಾಂತವೀರ ಗುರು ವಂಶಸಂಭೂತ
ಹುಬ್ಬಳ್ಳಿ ಸಂಗನಬಸವ ದೇಶಿಕ
ಶಾಂತವೀರ ದೇಶಿಕ
ಕುಮಾರ ದೇಶಿಕ
ಶಿವಪೂಜಾ ಬಸವಲಿಂಗ ದೇಶಿಕ
ಗುರುಮಲ್ಲಸ್ವಾಮಿ — ಇಮ್ಮಡಿ ಬಸವಲಿಂಗ ದೇಶಿಕ
ಸಿದ್ಧಬಸವಲಿಂಗ ದೇಶಿಕ
ಬಸವಲಿಂಗ ದೇಶಿಕ

೧. 'ವಿಶೇ...
...ಕರ್ತೃ
...ಮಾಲೆ
೬. ಚೇರಮ...
೭. ತೋಂಟದ ಸಿದ್ಧೇಶ್ವರ ಪುರಾಣ ಕರ್ತೃ
೮. ವಚನ ಸಂಪಾದನಕಾರ
೯. "
೧೦. "
೧೧. 'ಷಟ್ಸ್ಥಲ ಬ್ರಹ್ಮಾನಂದ ವಿರಕ್ತ ಚಾರಿತ್ರ' ವಚನ ಸಂಕಲನದ ಸಂಪಾದನಕಾರ
...ತಯ್ಯನ ತ್ರಿವಿಧಿಯ ಟೀಕಾಕಾರ
...ತೂತ್ರ ಟೀಕೆಯ ಕರ್ತೃ

೧೫. ಚತುರಾಚಾರ್ಯ ಪುರಾಣ ಕರ್ತೃ
೧೬. ಅನ್ಯತೇಶ್ವರ ಭಾಷ್ಯದ ಕರ್ತೃ
೧೭. 'ಅಭವಕಂದ' ಕೃತಿಕಾರ
೧೮. ಮಹಾಚಾರ್ಯ, ವಚನಕಾರ
೧೯. ಮೂರನೆಯ ಶೂನ್ಯ ಸಂಪಾದನಕಾರ
೨೦. ನಾಲ್ಕನೆಯ ಶೂನ್ಯ ಸಂಪಾದನಕಾರ
೨೧. ತೋಂಟದ ಸಿದ್ಧೇಶ್ವರ ಪುರಾಣಾದಿಗಳ ಕೃತಿಕಾರ
೨೨. ಪ್ರಭುದೇವರ ಪುರಾಣದ ಕರ್ತೃ
೨೩. ವಚನಕಾರ, ಸುತ್ತೂರು ಮಠದ ಒಬ್ಬ ಪೀಠಾಧಿಪತಿ
೨೪. ತ್ರಿವಿಧ ಮೂರರ ಸಾರ ಇತ್ಯಾದಿಗಳ ಟೀಕಾಕಾರ
೨೫. 'ಏಕೋತ್ತರ ಸಾರ'ದ ವಚನ ಸಂಕಲನಕಾರ
೨೬. ವೈರಾಗ್ಯ ಷಟ್ಪದಿ ಇತ್ಯಾದಿ ಕೃತಿಗಳ ಕರ್ತೃ
೨೭. 'ಕೈವಲ್ಯ ಸೋಪಾನನಾಮೈಕೋತ್ತರ ಶತಸ್ಥಲ'ದ ಕರ್ತೃ
೨೮. 'ವೀರಶೈವೋತ್ಕರ್ಷ ಪ್ರದೀಪಿಕಾ', 'ವೈದಿಕಾಚಾರ ನಿರ್ಣಯ ಗ್ರಂಥಗಳ ಕರ್ತೃ

ಕೃಪೆ: ಸಿದ್ಧಲಿಂಗ ಶಿವಯೋಗಿ
ಮೈಸೂರು ವಿಶ್ವವಿದ್ಯಾನಿಲಯ
೧೯೭೪.

೭

ಹೀರುವೋಲೆಯ ರೀತಿ ನಿಮ್ಮಯ
ಜ್ಞಾನ ಹೀರುವ ರೀತಿಯು
ಸಾರಸದ್ಗುಣವೆಲ್ಲಿ ಇದ್ದರು
ಅದಕೆ ನಿಮ್ಮಯ ಪ್ರೀತಿಯು

೮

ಪ್ರಾಯ ಪರಿಧಿಯ ಮೀರಿ ಬೆಳೆದಿಹ
ಬುದ್ಧಿ ಕಾರ್ಯದ ಸಿದ್ಧಿಯು
ಧ್ಯೇಯನಿಶ್ಚಲ ದೃಷ್ಟಿ ನಿಮ್ಮದು
ವಿಪುಲ ಜ್ಞಾನಸಮೃದ್ಧಿಯು

೯

ಶರಣವಚನದ ಮುತ್ತು ಸುರಿವವು
ನಿಮ್ಮ ರಸನಾಂಚಲದಲಿ
ಸರಸಸುಂದರ ಕಾವ್ಯಕಾಂತಿಯ
ಖನಿಗಳಿವೆ ಲೇಖನಿಯಲಿ

೧೦

ಕಾಯಕವೆ ಕೈಲಾಸವೆನ್ನುವ
ಭದ್ರಜೀವನ ದರ್ಶನ
ಸ್ವಾಘತವು ನಿಮಗಾಗಿಹುದು ಸಂ-
ಸ್ಫೂರ್ತಿದಾಯಕ ಭಾಷಣ

೧೧

ವಿನುತ ಚಾರಿತ್ರ್ಯದ ಸುಶೀಲದ
ಶುದ್ಧ ನಡತೆಯ ಸದ್ಗುರು
ಜನಕೆ ಬೇಕಾಗಿಹ ಜಗದ್ಗುರು
ವೀರಶೈವದ ಸುರತರು

೧೨

ಐದು ಶತಮಾನಗಳ ಪೂರ್ವದಿ
ಸಿದ್ಧಲಿಂಗ ಯತೀಶನು
ಗೈದ ಮಣಿಹವ ಮುಂದುವರಿಸಲು
ನಿಮ್ಮನೇ ನಿಯಮಿಸಿಹನು

೧೩

ಘನ ಜಗದ್ಗುರು ಪೀಠಕೊಪ್ಪುವ
ನಿಮ್ಮ ಪೀಠಾರೋಹಣ
ಘನ ಸಮಾಜದ ಸರ್ವತೋಮುಖ
ಭಾಗ್ಯದ್ವಾರೋದ್ಘಾಟನ !

## ಭವ್ಯ ಪರಂಪರೆಯನ್ನು ಬೆಳಗುತ್ತಿರುವ

# ಶ್ರೀ ಜಗದ್ಗುರು ತೋಂಟದಾರ್ಯ ಮಠ

— ಹ. ರಾ. ಕಿದಿಯೂರು

ಸಮಾಜವು ಅಂಧರೂಡಿ ಹಿಂಸಾಚಾರಗಳಿಂದ ಜರ್ಝರಿತವಾಗಿ ಅಂಧವಾಗಿ ನಡೆಯತೊಡಗಿದಾಗ, ಅದರ ಸುಂದರತಮ ವೈಶಿಷ್ಟ್ಯವು ಮಣ್ಣುಗೂಡತೊಡಗಿದಾಗ, ಭಕ್ತಿಯು ಕೇವಲ ಆಡಂಭರದ ವಸ್ತುವಾಗಿ ಸಮಾಜದ ಏಳಿಗೆಯು ಅಸಾಧ್ಯವಾದಾಗ, ಗುಣದ ಬೆಲೆಯು ಕಡಿಮೆಯಾಗಿ ಹಣದ ಬೆಲೆ ಹೆಚ್ಚಿದಾಗ, ದುಃಖಿತ ಮಾನವತೆಯ ಉದ್ಧಾರಕ್ಕೆ ಅನೇಕ ಮಹಾ ಪುರುಷರು ಮೇಲಿಂದ ಮೇಲೆ ಅವತರಿಸಿ ಬರುತ್ತಾರೆ. ವಿಶ್ವವು ದಯಾಹೀನರಿಂದ ತುಂಬಿ ಕ್ರೂರತೆ ವಂಚನೆಗಳು ತಲೆಯೆತ್ತಿ ಈ ನಶ್ವರ ಪ್ರಪಂಚದಲ್ಲಿ ಕುಣಿದಾಡ ತೊಡಗಿದಾಗ ಅವನ್ನು ಹೊಡೆದೋಡಿಸುವ ಕ್ರಾಂತಿ ಪುರುಷರು ಆಗಾಗ ಆಗಿ ಹೋಗುತ್ತಾರೆ. ಮಾನವ ಕುಲದಲ್ಲಿ ದುಃಖ, ಕಷ್ಟ, ಅಜ್ಞಾನ, ದಾರಿದ್ರ್ಯ ಹೆಚ್ಚಿ ವಿವಂಚನೆಯ ಮುಸುಕು ಮುತ್ತಿದಾಗೆಲ್ಲ ದಾರಿತೋರುವ ಮಹಾತ್ಮರು ಪ್ರಪಂಚದಲ್ಲಿ ಜನ್ಮವೆತ್ತುತಿದ್ದಾರೆ.

ಹೀಗೆ ಸಮಾಜಕ್ಕೆ ಮಾರ್ಗದರ್ಶಕವಾಗಿ ಬೆಳೆದು ಬಂದ ಗುರು ಪರಂಪರೆಯ ಭವ್ಯ ಇತಿಹಾಸವನ್ನು ಹೊತ್ತುನಿಂತ ಭವ್ಯ ಮಠಗಳಲ್ಲಿ ಗಧುಗಿನ ಶ್ರೀ ನಿರಂಜನ ಜಗದ್ಗುರು ತೋಂಟದಾರ್ಯ ಮಠವೂ ಒಂದಾಗಿದೆ. ಅದು ತನ್ನ ಭವ್ಯ ಪರಂಪರೆಯಿಂದ ಇಂದಿನವರೆಗೂ ವೀರಶೈವ ಧರ್ಮ, ಸಂಸ್ಕೃತಿಗಳ ಕೇಂದ್ರ ಬಿಂದುವಾಗಿ ಸಮಾಜ ಶೀಲತೆಯನ್ನು ಪ್ರಬೋಧಿಸುವ ಶಾಕ್ತಿಕ ಕ್ಷೇತ್ರವಾಗಿ ಬೆಳೆದು ನಿಂತಿದೆ. ಬರಿಯ ಅಂತೆಯೆ ಅದು ಒಂದು ಜಾಗ್ರತ ಸ್ಥಾನವಾಗಿಯೂ ಶೋಭಿಸಿದೆ. ಬರಿಯ

ಧರ್ಮಕಾರ್ಯಗಳಲ್ಲಿ ಮಾತ್ರವಲ್ಲದೆ ಸಾಹಿತ್ಯ, ಕಲೆ, ಸಂಗೀತ, ಶಿಕ್ಷಣಾಭಿವೃದ್ಧಿ, ಮೊದಲಾದ ಕಾರ್ಯಗಳಲ್ಲಿ ಅನವರತವೂ ಶೋಭಾಯಮಾನವಾದ ಪ್ರೋತ್ಸಾಹವನ್ನು ನೀಡುತ್ತ ಗಣನೀಯವಾದ ಪಾತ್ರವನ್ನು ನಿರ್ವಹಿಸಿಕೊಂಡು ಬಂದಿರುವ ಪ್ರತೀತಿ ಕೂಡ ಈ ಮಠಕ್ಕಿದೆ.

'ದಕ್ಷಿಣದ ಕಾಶಿ' ಎಂದು ಹೆಸರಾದ ಗದುಗಿನ ಹೆಸರನ್ನು ಕೇಳಿದೊಡನೆ ಯಾರಿಗೇ ಆದರೂ ಶ್ರೀ ವೀರನಾರಾಯಣ ಹಾಗೂ ಶ್ರೀ ತ್ರಿಕೂಟೇಶ್ವರ ದೇವ ಸ್ಥಳಗಳು ಹೇಗೆ ಮನಃಪಟಲದಲ್ಲಿ ಸುಳಿದು ಹೋಗುತ್ತವೆಯೋ ಹಾಗೆಯೇ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಜಾಗ್ರತ ಸ್ಥಾನವಾದ ಶ್ರೀ ಜಗದ್ಗುರು ತೋಂಟದಾರ್ಯ ಮಠವೂ ನೆನಪಿಗೆ ಬರುವುದು ಸ್ವಾಭಾವಿಕ. ಈ ಮಠ ತನ್ನ ಕಾಲ ವರ್ಷದಲ್ಲಿ ಪಡೆದುಕೊಂಡು ಬಂದ ಕೀರ್ತಿ, ನಡೆದುಕೊಂಡು ಬಂದ ದಾರಿ, ಅಂಥ ತೇಜಸ್ವಿಯಾದುದು. ಭಕ್ತರಿಗೆ ಅಭಿಮಾನವಾದ ಈ ಮಠ, ಜನತೆಯ ಅಂಧಃಕಾರ ಕಳೆದು ತೇಜಸ್ಸನ್ನು ತುಂಬಲು ಭಕ್ತರ ಕಣ್ಮಣಿಯಾಗಿ ಬಾಳಿಕೊಂಡು ಬಂದ ಈ ಮಠದ ಗುರು ಸಮೂಹವೆಲ್ಲಕ್ಕೂ ಒಂದೊಂದು ದೊಡ್ಡ ಇತಿಹಾಸವೇ ಇದೆ.

ಹದಿನೈದನೇ ಶತಮಾನದಲ್ಲಿ ಅವತಾರೀ ಪುರುಷರೆಂದು ಖ್ಯಾತರಾದ, ತಮ್ಮ ಆತ್ಮ ತೇಜೋ ಭಕ್ತಿಯಿಂದ ಅನೇಕ ಪವಾಡಗಳನ್ನು ಮೆರೆದು ಭಕ್ತಿಯ ಭಕ್ತಿಯನ್ನು ಮೆರೆದು ಜಾಗೃತ ಭಕ್ತರೆನಿಸಿದ ಶ್ರೀ ನಿರಂಜನ ತೋಂಟದ ಸಿದ್ಧ ಲಿಂಗೇಶ್ವರರೇ ಈ ಮಠದ ಪೀಠದ ಮೂಲ ಜಗದ್ಗುಗಳಾಗಿರುವರು. ಅವರ ಪರಂಪರಾಗತವಾದ ಪೀಠ ಇದಾಗಿದ್ದು ಅದು ತನ್ನದೇ ಆದ ಶತ ಶತಮಾನಗಳ ಇತಿಹಾಸವನ್ನು, ಹಿರಿಮೆಯನ್ನು ಎತ್ತಿ ಹಿಡಿದಿದೆ.

ಹನ್ನೆರಡನೇ ಶತಮಾನದ ನಂತರದಲ್ಲಿ ವಚನ ಸಾಹಿತ್ಯದಲ್ಲಿ ಆಸಕ್ತಿ ತೋರಿ ವಚನ ಕರ್ತೃತ್ವವನ್ನು ಉಳಿಸಿಕೊಂಡು ಬಂದ ವೀರಶೈವ ಶರಣರಲ್ಲಿ ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಉಲ್ಲೇಖನಾರ್ಹವಾಗಿದ್ದಾರೆ. ಅವರ ಕಾಲ ಸುಮಾರು ಕ್ರಿ.ಶ. ೧೪೭೦. ಅವರು ರಚಿಸಿರುವ ವಚನಗಳು ವೀರಶೈವ ಮತದ ಸಿದ್ಧಾಂತಗಳ ವ್ಯಕ್ತವಾಣಿಯಾಗಿವೆ. ಅಗಾಧ ಶಿವಾನುಭವ ಜ್ಞಾನಿಗಳಾಗಿದ್ದ ಅವರ ಧರ್ಮ ಜಾಗೃತಿಯಲ್ಲಿ ತಮ್ಮದೇ ಆದ ರೀತಿ ವೈಶಿಷ್ಟಗಳನ್ನು ಮೆರೆದರು. "ಷಟ್‌ಸ್ಥಲ ಜ್ಞಾನಸಾರಾಮೃತ "ವೆಂಬ ಅವರ ಕೃತಿ ಸಾಹಿತ್ಯಕ್ಕೆ ಅನುಭವಪೂರ್ಣವಾದ ಕೊಡುಗೆ. "ಮನಸ್ಸು ಮರ್ಕಟವಂತೆ" ಎಂದು ಬಸವಣ್ಣನವರು ಹೇಳಿದಂತೆ ಶ್ರೀ ತೋಂಟದ ಸಿದ್ಧಲಿಂಗೇಶ್ವರರೂ ಅದನ್ನೇ ಪುನಃ ಎತ್ತಿ ಹೇಳಿ ತಮ್ಮ ಆತ್ಮ

ನಿರೀಕ್ಷಣೆಯನ್ನು ಮಾಡಿಕೊಂಡಿದ್ದಾರೆ. ಕಾಮನ ಬಿಲ್ಲಿನಂತೆ ಈಗ ತೋರಿ ಮರುಕ್ಷಣದಲ್ಲಿ ಮಾಯವಾಗಿ ಹೋಗುವ ಈ ಅಶಾಶ್ವತವಾದ ದೇಹವನ್ನು ಶಾಶ್ವತ ವೆಂದು ನಂಬಿ ಮೋಸ ಹೋಗಬೇಡಿರೆಂದು ಭಕ್ತರನ್ನು ಎಚ್ಚರಿಸಿದ್ದಾರೆ. ಅವರ ಒಂದೊಂದು ವಚನವೂ ವೇದಾಂತ, ದೈವ ಭಕ್ತಿ, ಸದ್ಗುಣ ಶೀಲತೆಗಳನ್ನು ಸಾರುವ ರಸಘಟ್ಟಿಯಾಗಿವೆ.

ಅಪಾರ ಶಿಷ್ಯ ಸಮೂಹವನ್ನು ಹೊಂದಿ ಭಾರತದಾದ್ಯಂತ ಸಂಚರಿಸಿ, ಧರ್ಮ ಜಾಗ್ರತಿಯನ್ನುಂಟುಮಾಡಿದ ಶ್ರೀ ಸಿದ್ಧಲಿಂಗೇಶ್ವರರು ಎಡೆಯೂರಿನಲ್ಲಿ ಶಿವಯೋಗ ಸಮಾಧಿಕ್ತರಾಗಿರುವರು. ಆ ಕ್ಷೇತ್ರ ಇಂದಿಗೂ ಜಾಗ್ರತ ಸ್ಥಾನ ವೆಂದು ಖ್ಯಾತವಾಗಿದೆ. ಅಲ್ಲಿನ ಹೂದೋಟವೊಂದರಲ್ಲಿ ಅವರು ಧ್ಯಾನಾಸಕ್ತ ರಾಗಿ ತಪೋನಿಷ್ಟರಾಗಿದ್ದುದರಿಂದ ಅವರಿಗೆ ತೋಂಟದಾರ್ಯ ಮಹಾಸ್ವಾಮಿ ಗಳೆಂದು ಹೆಸರಾಯಿತು. ಅವರ ನಂತರದಲ್ಲಿ ಜಗದ್ಗುರು ಪೀಠವನ್ನಲಂಕರಿಸಿದ ಮಹಾಸ್ವಾಮಿಗಳಿಗೆಲ್ಲಾ ತೋಂಟದಾರ್ಯ ಮಹಾಸ್ವಾಮಿಗಳೆಂದೇ ಹೆಸರಾಯಿತು. ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಜಂಗಮ ಪೀಠದ ಮಠಗಳಲ್ಲಿ ಶ್ರೀ ಎಡೆಯೂರ ಡಂಬಳ ಹಾಗೂ ಗದುಗಿನ ಮಠಗಳು ಬೃಹನ್ಮಠಗಳಾಗಿ ಪರಿವರ್ತನೆಗೊಂಡಿವೆ.

ಇದು ಈ ಮಠದ ಇತಿಹಾಸಕ್ಕೆ ಪೀಠಿಕೆಯಾದರೂ ಗದುಗಿನ ಮಠವು ಇಲ್ಲಿರುವ ಗದ್ದುಗೆಯಿಂದ ಹೆಚ್ಚಿನ ವ್ಯಾಪ್ತಿಯನ್ನೂ ಕೀರ್ತಿಯನ್ನೂ ಪಡೆಯಿ ತೆನ್ನಲಾಗುತ್ತಿದೆ. ಕ್ರತುಪುರವೆಂದಿದ್ದ ಈ ನಗರದ ಹೆಸರು ಕೂಡಾ ಈ ಗದ್ದುಗೆಯ ಪ್ರಭಾವದಿಂದಾಗಿ "ಗದುಗು" ಎಂದಾಯಿತೆಂದೂ ಹೇಳಲಾಗುತ್ತಿದೆ.

ನಿರಂಜನ ಜಗದ್ಗುರು ತೋಂಟದಾರ್ಯ ಪೀಠ ಚರವರ್ಯರಲ್ಲಿ ಒಬ್ಬರಾಗಿದ್ದ ಶ್ರೀ ಕರಿಬಸವ ಮಹಾ ಶಿವಯೋಗಿಗಳು ಘನತೆವೆತ್ತವರು. ಅತೀವ ವೈರಾಗ್ಯ ಶಾಲಿಗಳಾದರೂ ಜ್ಞಾನಸಂಪನ್ನರಾಗಿದ್ದು ಹಿಮಾಲಯದಲ್ಲಿ ಕುಳಿತು ತಪಸ್ಸು ಮಾಡಿ ತಮ್ಮ ಆತ್ಮಶಕ್ತಿಯನ್ನೂ ಜ್ಞಾನಬಲವನ್ನೂ ಹೆಚ್ಚಿಸಿಕೊಂಡರು. ಕಾಶಿಯಲ್ಲಿ ಕೆಲಕಾಲ ತಂಗಿ ಶಾಸ್ತ್ರಾಭ್ಯಾಸವನ್ನು ಆಳವಾಗಿ ಮಾಡಿ ದಕ್ಷಿಣಕ್ಕೆ ಹೊರಟುಬಂದಾಗ ದಕ್ಷಿಣ ಕಾಶಿಯೆಂದು ಖ್ಯಾತವಾದ ಕ್ರತುಪುರದಲ್ಲಿ (ಈಗಿನ ಗದುಗು) ಸಂಚರಿಸುತ್ತಿದ್ದಾಗ ಇಲ್ಲಿನ ಪುಣ್ಯವೂ, ಕ್ಷೇತ್ರಮಹಿಮೆಯೋ ಅವರ ಮನಸ್ಸನ್ನು ಈ ಸ್ಥಳ ಸೆಳೆಯಿತು. ಇಲ್ಲಿಯ ವಾತಾವರಣ ಸೌಂದರ್ಯಪೂರ್ಣ ವಾಗಿತ್ತು, ಮೌನಮಯವಾಗಿತ್ತು. ಮನುಷ್ಯನ ಹೃದಯ ಮನಸ್ಸಗಳ ಪವಿತ್ರತೆ ಸಾಧಿತವಾಗುವುದಕ್ಕೆ ಇಂಥ ಪ್ರದೇಶದ ಆವಶ್ಯಕತೆ ಇದೆ ಎಂಬುದನ್ನು ಮಹಾ ಸ್ವಾಮಿಗಳು ಅರಿತುಕೊಂಡು ಇಲ್ಲಿಯೆ ತಮ್ಮ ತಪೋಭೂಮಿಯನ್ನು ಆರಿಸಿ

ಕೊಂಡರು. ಈಗ ಮಠವಿರುವ ಪ್ರದೇಶದಲ್ಲಿ ಆಗ ನಗರ ಪ್ರದೇಶವಿರದೆ ಬಿದಿರು ಹುಲ್ಲು ಪೊದೆಗಳಿಂದ ಕೂಡಿದ ಕಾಡಿನಂತಿತ್ತು. ಅಲ್ಲೊಂದು ಗುಹೆಯೂ ಇದ್ದಿತೆಂದೂ ಆ ಗುಹೆಯಲ್ಲಿಯೆ ಕುಳಿತು ಮಹಾಸ್ವಾಮಿಗಳು ತಪವನ್ನಾಚರಿಸು ತಿದ್ದರೆಂದೂ ತಿಳಿದುಬರುತ್ತದೆ. ಲಿಂಗಾನುಷ್ಠಾನದಲ್ಲಿಯೆ ನಿಷ್ಠರಾಗಿದ್ದ ಅವರು ಸಾಮಾನ್ಯವಾಗಿ ಜನರಿಗೆ ಗೋಚರವಾಗಿ ಜನರ ಜೊತೆ ಬೆರೆಯಲು ಇಷ್ಟ ಪಡು ತ್ತಿರಲಿಲ್ಲ. ಏಕಾಂತದ ತಪೋನಿಷ್ಠೆಯಲ್ಲಿ ಅವರು ಆಸಕ್ತರಾಗಿದ್ದರು. ಆ ಗುಹೆ ಯಲ್ಲಿಯೆ ಅವರ ಜೀವಂತ ಸಮಾಧಿಸ್ಥರಾದ ಮೇಲೆ ಅವರು ಭಕ್ತರ ಆ ಗುಹೆಯ ಮೇಲ್ಭಾಗದಲ್ಲಿ ಗದ್ದುಗೆಯನ್ನು ಕಟ್ಟಿಸಿದರೆಂದೂ ಅಲ್ಲಿಂದ ಆ ಪ್ರದೇಶ ಆ ಗದ್ದುಗೆ ಭಕ್ತರ ದರ್ಶನ ಕ್ಷೇತ್ರವಾಯಿತೆಂದೂ ತಿಳಿದು ಬರುತ್ತದೆ. ಈ ಗದ್ದುಗೆ ಈಗಲೂ ಮಠದ ಮುಂಭಾಗದಲ್ಲಿದೆ. ಗದ್ದುಗೆಯ ಮೇಲ್ಭಾಗದಲ್ಲಿ ರಚಿತವಾದ ಶಿಲಾಮಂಟಪ, ಹಿಂಭಾಗದಲ್ಲಿ ಶೋಭಾಯಮಾನವಾಗಿರುವ ಮಠದ ಕಟ್ಟಡ ಗಳನ್ನೆಲ್ಲ ಈ ಮಠದ ಪೀಠಸ್ಥರಾದ ಗುರು ಪರಂಪರೆಯವರು ಬೇರೆ ಬೇರೆ ಕಾಲದಲ್ಲಿ ರಚಿಸಿದರೆಂದು ತಿಳಿದು ಬರುತ್ತದೆ.

ಮೂಲ ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗೇಶ್ವರರಿಂದ ೧೭ ಜಗದ್ಗುರು ಗಳಾಗಿ ಕೀರ್ತಿಶೇಷರಾಗಿದ್ದಾರೆ. ಈಗಿರುವವರು ೧೮ ನೆಯವರು. ಹಾಗೂ ಈಗ ಪಟ್ಟಾಭಿಷಿಕ್ತರಾಗುತ್ತಿರುವವರು ೧೯ ನೆಯವರು. ಜಗದ್ಗುರು ತೋಂಟದ ಬೋಳ ಬಸವ ಮಹಾಸ್ವಾಮಿಗಳು, ಜಗದ್ಗುರು ತೋಂಟದ ಕಾದೀ ಮಹಾಂತ ಸ್ವಾಮಿಗಳು, ಜಗದ್ಗುರು ತೋಂಟದ ಅರ್ಧನಾರೀಶ್ವರ ಸ್ವಾಮಿಗಳು, ಮೊದ ಲಾದ ಅನೇಕ ಮಹಾಸ್ವಾಮಿಗಳು ತಮ್ಮ ಮಹತಿಯಿಂದ ಮಹಿಮಾನ್ವಿತರಾಗಿ ಶೋಭಿಸಿ ಭಕ್ತರ ಕಣ್ಮಣಿಗಳಾಗಿ ಬಾಳಿದರು. ಶ್ರೀಗಂಧ ದಹಿಸಿ ಕಂಪನ್ನು ಬಿಟ್ಟು ಹೋಗುವಂತೆ ಈ ಮಹಾಸ್ವಾಮಿಗಳೆಲ್ಲ ತಮ್ಮ ಸುಕೃತಿಗಳಿಂದ ಮಹಿಮೆ ಗಳಿಂದ ಭಕ್ತಜನ ಪ್ರಿಯರಾಗಿ ಬಾಳಿದರು. ಧರ್ಮ ದೊಡ್ಡದು. ಅದೇ ನಮ್ಮನ್ನು ಸತ್ಯದೆಡೆಗೂ, ಬೆಳಕಿನೆಡೆಗೂ ಒಯ್ಯುವ ಸಾಧನವೆಂದು ನಂಬಿ ನಡೆದು ತೋರಿಸಿದ ಪುಣ್ಯಜೀವಿಗಳಿವರು.

ಲಕ್ಕುಂಡಿಯ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರು ಪಟ್ಟಕ್ಕೆ ಬಂದಾಗ ಈ ಮಠದ ಕೀರ್ತಿ ಸುತ್ತೆಲ್ಲ ಪಸರಿಸಿ ಇಲ್ಲಿನ ಪರಂಪರೆಗೆ ಕೀರ್ತಿ ಕಳಶ ವಾಯಿತು. ಮಠವು ಸಕಲೈಶ್ವರ್ಯ, ವೈಭವಗಳನ್ನು ಹೊಂದಿದ್ದರೂ ಕೂಡಾ ವಿರಕ್ತ ಜೀವನದಲ್ಲಿ ಶೋಭಿಸಿದರವರು. ಅವರ ಸನ್ನಿಧಾನದಲ್ಲಿ ಆಗ ಹನ್ನೊಂದು ಜನ ಚರಮೂರ್ತಿಗಳೂ ಅನೇಕ ಮರಿದೇವರುಗಳೂ ಇದ್ದುದಲ್ಲದೆ ಆನೆ, ಕುದುರೆ ರಥ ಮೊದಲಾದ ಗೌರವದ ಸಂಕೇತಗಳಾಗಿದ್ದವೆಂದೂ ಹೇಳಲಾಗುತ್ತದೆ. ಅವರ ಕಾಲದಲ್ಲಿ ಮಠವು ದೇದೀಪ್ಯಮಾನನಾಗಿ ಶೋಭಿಸಿತು. ಸಂಸ್ಕೃತ ಭಾಷೆಯ

ಅಭ್ಯಾಸಕ್ಕೆ ಸಂಸ್ಕೃತ ಭಾಷೆಯ ಪ್ರಾರಂಭ, ಅದಕ್ಕೆ ಆರ್ಥಿಕ ಸಹಾಯ ನೀಡಿದ್ದಲ್ಲದೆ ಸಂಗೀತ ಶಾಸ್ತ್ರ ಅಭ್ಯಾಸಕ್ಕೆ ಕೂಡಾ ಶ್ರೀ ಮಠದಲ್ಲಿ ವ್ಯವಸ್ಥೆ ಮಾಡಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಅವರ ಕಾಲದಲ್ಲಿ ಮಠದ ಸರ್ವಾಂಗೀಣ ಉನ್ನತಿ ಯಾಯಿತೆಂದು ಹೇಳುತ್ತಾರೆ.

ನಂತರ ಪೀಠಕ್ಕೆ ಬಂದ ಶ್ರೀ ತೋಂಟದ ಗುರು ಬಸವ ಮಹಾಸ್ವಾಮಿ ಗಳಲ್ಲಿ ಧರ್ಮಕಾರ್ಯಗಳಲ್ಲಿ, ಶಿಕ್ಷಣ ಕಾರ್ಯಗಳಲ್ಲಿ ಅತೀವ ಆಸಕ್ತಿಯಿತ್ತು. ಭಕ್ತಜನ ಪ್ರಿಯರಾಗಿ ಬಾಳಿದರು. ಉಚ್ಚ ಶಿಕ್ಷಣಕ್ಕೆ ಅನುಕೂಲತೆಯೇ ಇಲ್ಲದ ಗದಗದಲ್ಲಿ ಆಗ ಪೂರ್ಣಾವಧಿಯ ಕಾಲೇಜೊಂದು ಸ್ಥಾಪನೆ ಗೊಳ್ಳುವುದಕ್ಕೆ ಸಹಾಯಮಾಡಿದರು. ಅವರ ಈ ಸಹಾಯದ ಸ್ಮರಣೆಗಾಗಿಯೆ ಇಂದು ಗದುಗಿನ ಕೆ. ಎಲ್. ಇ. ಸೊಸಾಯಿಟಿಯವರ ಕಾಲೇಜು "ಜಗದ್ಗುರು ತೋಂಟದಾರ್ಯ ಕಾಲೇಜು" ಎಂಬ ನಾಮ ಖ್ಯಾತಿಯನ್ನು ಪಡೆದಿದೆ. ಅನೇಕ ರೀತಿಯಲ್ಲಿ ಸಾಹಿತ್ಯ ವೃದ್ಧಿಗೂ ಅವರು ಸಹಾಯ ಮಾಡಿದ್ದಾರೆ. ಇವರ ಕಾಲದಲ್ಲಿಯೇ ಸಂಸ್ಥಾನ ಮಠದ ಚರಿತ್ರೆ ಗ್ರಂಥ "ಶ್ರೀ ಸಿದ್ಧೇಶ್ವರ ಪುರಾಣ" ಅಚ್ಚಾಯಿತು. ಹಾಗೂ ಸಂಸ್ಥಾನ ಮಠದ ವಂಶಾವಳೀ ಗ್ರಂಥ "ಶ್ರೀ ಅರ್ಧನಾರೀಶ್ವರ ಪುರಾಣ" ರಚಿತಗೊಂಡಿತು.

ಅವರ ನಂತರ ಪಟ್ಟಕ್ಕೆ ಬಂದ ಶ್ರೀ ಶಿವಕುಮಾರಸ್ವಾಮಿಗಳವರು ೧೮ ನೇ ಜಗದ್ಗುರುಗಳು. ಸಂಸ್ಕೃತದಲ್ಲಿ ಉದ್ದಾಮ ಪಂಡಿತರಾಗಿಯೂ, ಶಿಕ್ಷಣ ಪ್ರೇಮಿ ಗಳಾಗಿಯೂ, ಸಾಹಿತ್ಯ ಪುರಸ್ಕರ್ತರಾಗಿಯೂ ಪಂಡಿತಾಭಿಮಾನಿಗಳಾಗಿ ಶೋಭಿ ಸುತ್ತ ಈ ವರೆಗೂ ಧರ್ಮಕಾರ್ಯ ನಿರತರಾಗಿ ಮಠದ ಪರಂಪರೆಯನ್ನು ಬೆಳಗಿ ಸುತ್ತ ಬಂದಿದ್ದಾರೆ. ಕಾಶಿಯಲ್ಲಿ ಉಚ್ಚ ಸಂಸ್ಕೃತ ಶಿಕ್ಷಣ ಪಡೆದ ಶ್ರೀ ಶಿವ ಕುಮಾರ ಮಹಾಸ್ವಾಮಿಗಳವರು ಗದುಗಿನ ಜೆ. ಟಿ. ಕಾಲೇಜಿಗೆ ಆರ್ಥಿಕ ಸಹಾಯ ಮಾಡಿದ್ದಲ್ಲದೆ ಬೆಳವಣಿಕೆಯ ಪ್ರಸಾದ ನಿಲಯಕ್ಕೆ ಜಮೀನು ನೀಡಿದ್ದಾರೆ. ಹನುಮನಮಟ್ಟಿ ಗ್ರಾಮೀಣ ವಿದ್ಯಾಲಯಕ್ಕೆ ಕೂಡಾ ಬಹು ದೊಡ್ಡ ಕ್ಷೇತ್ರದ ಜಮೀನು ನೀಡಿದ್ದಾರೆ. ಶಿವಾನುಭವ ಕಾಯಕ್ರಮಗಳಿಗೆ ಸತತ ಪ್ರೋತ್ಸಾಹ ನೀಡುತ್ತ ಬಂದಿದ್ದಾರೆ.

ಅವರ ಹಿರಿಯ ಜ್ಞಾನ ದೃಷ್ಟಿಯ ಮಾರ್ಗದರ್ಶನದಲ್ಲಿ ಈಗ ಪಟ್ಟಕ್ಕೆ ಬರುತ್ತಿರುವ ಶ್ರೀ ಸಿದ್ಧರಾಮದೇವರು ಕೂಡಾ ಶ್ರೀಮಠದ ಭವ್ಯ ಪರಂಪರೆ ಯನ್ನು ಬೆಳಗಿ ಬೆಳೆಸಲಿ ಎಂದೂ, ಧರ್ಮಜ್ಞಾನಿಗಳಾಗಿ ಭಕ್ತರಲ್ಲಿ ಧರ್ಮದೃಷ್ಟಿ ಯನ್ನು ಬೆಳೆಸುವ ಭಕ್ತರಾಗಲೆಂದೂ ಮಠದ ಅನುಯಾಯಿಗಳು ಸದ್ಭಕ್ತರೂ, ಅಭಿಮಾನಿಗಳೂ ಆದ ನಾವೆಲ್ಲರೂ ಹಾರೈಸೋಣ.

ಶ್ರೀ ನಿರಂಜನ ಜಗದ್ಗುರು

# ತೋಂಟದ ಅರ್ಧನಾರೀಶ್ವರ

— ಸಿದ್ಧಲಿಂಗಯ್ಯ ಹೊಸಮಠ

ಡಂಬಳ ಬೃಹನ್ಮಠದಲ್ಲಿ ನೆಲಿಸಿ ಭಕ್ತವರನಾದ ಶ್ರೀ ತೋಂಟದ ಅರ್ಧ ನಾರೀಶ್ವರ, ನಿರಂಜನ ಜಗದ್ಗುರು ತೋಂಟದಾರ್ಯ ಪರಂಪರೆಯಲ್ಲಿ ಬರುವ ಒಂಭತ್ತನೆಯ ಪೀಠಾಧಿಪತಿ. ತಮ್ಮ ಗುರು ಶ್ರೀ ಕೌದೀಮಹಾಂತಸ್ವಾಮಿ ಗಳವರಿಂದ ಷಟ್‌ಸ್ಥಲಾಚಾರ್ಯ ಪಟ್ಟವನ್ನು ವಹಿಸಿಕೊಂಡಮೇಲೆ ತಮ್ಮ ಪರಂಪರೆಯ ಮೂಲಕರ್ತೃ ಶ್ರೀ ತೋಂಟದ ಸಿದ್ಧಲಿಂಗೇಶನಂತೆ ತೇಜೋಮಯ ವಾಗಿ ಬೆಳಗಿದ ಕಾರಣ ಅವರು "ದ್ವಿತೀಯ ಸಿದ್ಧಲಿಂಗ"ನೆಂದು ಪ್ರಸಿದ್ಧರಾದರು.

ಶ್ರೀ ಅರ್ಧನಾರೀಶ್ವರರ ಶಿವಯೋಗ ಶಕ್ತಿಯ ಪ್ರಭಾವ ಎಷ್ಟಿತ್ತೆಂದರೆ ಆ ಕಾಲದಲ್ಲಿ ಕನ್ನಡ ನಾಡಿನ ಪ್ರಸಿದ್ಧ ರಾಜಮನೆತನಗಳಾದ ಡಂಬಳ-ಕೆಳದಿ-ಸ್ವಾದಿ-ಇಕ್ಕೇರಿ-ಹಾಗಲವಾಡಿ ಮತ್ತು ಹರಪನಹಳ್ಳಿ ಸಂಸ್ಥಾನಿಕರು ಶ್ರೀ ಅರ್ಧನಾರೀಶ್ವರರ ಶಿವಯೋಗ ಶಕ್ತಿಗೆ ಮಣಿದು, ಅವರ ದಾಸಾನು ದಾಸರಾದರು. ಭೋಗಜೀವನ ಯೋಗಜೀವನಕ್ಕೆ ತಲೆಬಾಗಿತು. ಈಗಲೂ ಈ ಸಂಸ್ಥಾನಿಕರು ಕೊಟ್ಟ ದಾನ ದತ್ತಿಗಳು ಸಂಸ್ಥಾಮಠದಲ್ಲಿವೆ. ಈ ಕಾರಣದಿಂದ ಡಂಬಳ ಬೃಹನ್ಮಠವು "ಸಂಸ್ಥಾನ ಮಠ"ವೆಂಬ ಮನ್ನಣೆಗೆ ಪಾತ್ರವಾಯಿತಲ್ಲದೆ ಶ್ರೀ ಅರ್ಧನಾರೀಶ್ವರರು ........"ಶ್ರೀ ಮದ್ರಾಜಾಧಿರಾಜ ರಾಜಪೂಜಿತ...."ರಾದರು. ಇದನ್ನು ಸಂಸ್ಥಾನ ಮಠದಲ್ಲಿಯ ಕಾಗದ ಪತ್ರಗಳ ಒಕ್ಕಣಿಕೆಯಿಂದ ಅರಿಯಬಹುದು.



ಶ್ರೀ ನಿ. ಜ. ತೋಂಟದ ಅರ್ಧನಾರೀಶ್ವರ ಮಹಾಸ್ವಾಮಿಗಳವರ ಗದ್ದುಗೆ, ಡಂಬಳ



ಡಂಬಳ ಸಂಸ್ಥಾನಮಠದ ಮಹಾದ್ವಾರ



ಗದುಗಿನ ಸಂಸ್ಥಾನಮಠದ ಮಹಾದ್ವಾರ



ತೋಂಟದ ಶ್ರೀ ಜ. ಸಿದ್ಧೇಶ್ವರ ಮಹಾಸ್ವಾಮಿಗಳು ತಮ್ಮ ಮೂಲ ಕರ್ತೃಸ್ಥಾನವಾದ ಶ್ರೀ ಎಡೆಯೂರು ಕ್ಷೇತ್ರಕ್ಕೆ ದಿ. ೬-೧೨-೧೯೧೭ ರಂದು ಶ್ರೀ ನಿ. ಪ್ರ. ಹಾನಗಲ್ಲ ಕುಮಾರ ಮಹಾಸ್ವಾಮಿಗಳೊಡನೆ ಪರಿವಾರದೊಂದಿಗೆ ದಯಮಾಡಿಸಿದುದು.



**ಎಡೆಯೂರಿಂದ ಜಗದ್ಗುರುಗಳ ಪುನರಾಗಮನ: ಮಾನ್ವಿಹಳ್ಳಿಯಲ್ಲಿ ಗಣಾರಾಧನೆ.**

೧. ಶ್ರೀ ಗುರುಬಸವ ಚರಮೂರ್ತಿಗಳು, ಇಟಗಿ. ೨. ಶ್ರೀ ಅನ್ನದಾನ (ಮೃತ್ಯುಂಜಯ) ಸ್ವಾಮಿಗಳು, ಮುಂಡರಗಿ. ೩. ಶ್ರೀ..........., ೪. ಶ್ರೀ ಜ. ಸಿದ್ಧೇಶ್ವರ ಸ್ವಾಮಿಗಳು. ೫. ಶ್ರೀ ಸಿದ್ಧೇಶ್ವರ ಮೂರ್ತಿ. ೬. ಶ್ರೀ ರೇವಣಸಿದ್ಧ ಸನ್ನಿಧಿ ಚರಮೂರ್ತಿಗಳು. ೭. ಶ್ರೀ ಸಿದ್ಧಲಿಂಗ ಚರಮೂರ್ತಿಗಳು, ಅಣ್ಣಿಗೇರಿ. ೮. ಶ್ರೀ ಅನ್ನದಾನ ಮರಿದೇವರು.

"....ನಿರಂಜನ ಗಣೇಶ್ವರಪರಾವತಾರಭೂತ
ಕಗ್ಗಿರೆ ಪುಷ್ಪವಾಟಿಕಾ ವಲ್ಮೀಕಸ್ಥಿತ ಎಡೆಯೂರ
ವಿರಾಜಮಾನ ಶ್ರೀ ಮದನಾದಿ ತೋಂಟದ ಸಿದ್ಧೇಶ್ವರ
ಪರಂಪಾನ್ವಯಾನುಗತ ಶ್ರೀ ಮದ್ಬೊಂಬಲ ಮಹಾಸಂಸ್ಥಾನ
ಬೃಹನ್ಮಠಾಧೀಷ್ಠಿತ.... ಶ್ರೀ ಮದ್ರಾಜಾಧಿರಾಜ ರಾಜಪೂಜಿತ...."

(ಪ್ರವಾಸ ಕಾರ್ಯಕ್ರಮ ಪತ್ರಿಕಾ)

ಶ್ರೀ ಅರ್ಧನಾರೀಶ್ವರರ ಗುರುಗಳಾದ ಪರಮ ವೈರಾಗ್ಯಶಾಲಿ ಶ್ರೀ ಕಾದೀ ಮಹಾಂತ ಸ್ವಾಮಿಗಳವರು ಒಂದು ದಿನ ತಮ್ಮ ಬೆಳಗಿನ ಶಿವಪೂಜೆ ಪೂರೈಸಿ ಕೊಂಡು, ಬಾಚಿಗೊಂಡನ ಹಳ್ಳಿಯ ಪಕ್ಕದಲ್ಲಿ ಹರಿದ ಹಗರಿ ಹಳ್ಳದ ತೀರದ ನೋಟವನ್ನು ಅವಲೋಕಿಸುತ್ತ ಹೊರಟಿದ್ದರು. ಆಗ ಒಂದು ವೃಕ್ಷದ ಅಡಿಯಲ್ಲಿ ತೇಜಸ್ವಿಯಾದ ಎಂಟು ವರ್ಷದ ಬಾಲಕನೋರ್ವನು ಮಂಡಿಸಿರುವದು ಕಂಡು ಬಂದಿತು. "ಇದು ಶಿವೇಚ್ಛೆಯಿಂದ ದೊರೆತಿದೆ" ಎಂದು ಭಾವಿಸಿದ ಶ್ರೀ ಕಾದೀ ಮಹಾಂತ ಸ್ವಾಮಿಗಳು ಆ ಮಗುವಿನೊಡನೆ ತಮ್ಮ ಮಠಕ್ಕೆ ದಯಮಾಡಿಸಿದರು.

ಮುಂದೆ ಕೆಲಹೊತ್ತಿನಲ್ಲಿ ಭಸ್ಮ ರುದ್ರಾಕ್ಷಿಗಳನ್ನು ಧರಿಸಿದ ಮಧ್ಯಮ ವಯ
ಸ್ಸಿನ ಒಬ್ಬ ಭಕ್ತ ಮಠದಲ್ಲಿ ಪ್ರವೇಶಿಸಿ ಗುರುಗಳಿಗೆ ಅವರ ಪಕ್ಕದಲ್ಲಿದ್ದ ಮಗು
ವನ್ನು ತೋರಿಸಿ " ಪೂಜ್ಯರೇ ! ನನ್ನ ಸಮಯಾಚಾರಕ್ಕಾಗಿ ಮಲೆನಾಡಿನಲ್ಲಿ
ಪ್ರಸಿದ್ಧವಾದ ಅರಳೆಲೆಮಠದ ಪಟ್ಟದ ಸ್ವಾಮಿಯವರಿಂದ ಈ ಮಗುವನ್ನು ಪಡೆದು
ಕೊಂಡಿದ್ದೇನೆ. ಈತನೇ ನನ್ನ ಗುರು, ನನಗೆ ಕೋರಶೆಟ್ಟಿ ಎಂದೆನ್ನುವರು.
ವ್ಯಾಪಾರವೇ ನನ್ನ ಕಾಯಕ. ಪ್ರಾಪ್ತಿಯ ಅರ್ಧ ಪಾಲು ಗುರುಲಿಂಗ-ಜಂಗಮ
ದಾಸೋಹಕ್ಕಾಗಿ ವಿನಿಯೋಗವಾಗುವದರಿಂದ ಈ ಹೆಸರು ರೂಢಿಯಾಗಿದೆ" ಎಂದು
ನಮ್ರತೆಯಿಂದ ಬಿನ್ನವಿಸಿದ.

ಕೋರಿಶೆಟ್ಟಿ ಹೇಳಿದುದನ್ನೆಲ್ಲ ಗುರುಗಳು ಶಾಂತಚಿತ್ತರಾಗಿ ಕೇಳಿಕೊಂಡು
"ಇದು ನಮ್ಮ ವಸ್ತು, ಈ ವರೆಗೂ ನಿನ್ನಲ್ಲಿ ನಮ್ಮದಾಗಿಯೇ ಇತ್ತು. ಜಗದ್ಗುರು
ವಿನಲ್ಲಿ ಇರಬೇಕಾದ ಎಲ್ಲ ಲಕ್ಷಣಗಳೂ ಈತನಲ್ಲಿವೆ" ಎಂದು ಹೇಳಿ ಆ ಕೋರ
ಶೆಟ್ಟಿಯನ್ನು ಆ ಬಾಲ ವಟುವಿನೊಡನೆ ತಮ್ಮಲ್ಲಿಟ್ಟುಕೊಂಡು ಆ ಬಾಲಕನಿಗೆ
"ವಿರಕ್ತಾಶ್ರಮ"ವನ್ನು ದಯಪಾಲಿಸಿ ಷಟ್‌ಸ್ಥಲ "ಬ್ರಹ್ಮೋಪದೇಶ" ಮಾಡಿದರು.
ನಂತರ 'ಈ ಬಾಲವಟು ತನ್ನ ಆಚರಣೆಯನ್ನು ಶಕ್ತಿ ವಿಶಿಷ್ಟಾದ್ವೈತ
ಸಿದ್ಧಾಂತದಂತೆ " ಶರಣ ಸತಿ ಲಿಂಗ ಪತಿ" ಭಾವದಿಂದ ಇಟ್ಟುಕೊಳ್ಳಲು ಗುರು
ಗಳಾದ ಕಾದೀ ಮಹಾಂತ ಸ್ವಾಮಿಗಳವರು ಬಹಳ ಸಂತಸಪಟ್ಟು ಶಿಷ್ಯೋತ್ತಮ

ನಿಗೆ "ಅರ್ಧನಾರೀಶ್ವರ" ಎಂಬ ಅನ್ವರ್ಥಕ ನಾಮಕರಣ ಮಾಡಿ ತಮ್ಮ ಷಟ್ ಸ್ಥಲಾಚಾರ್ಯ ಪಟ್ಟವನ್ನು ಶ್ರೀ ಅರ್ಧನಾರೀಶ್ವರನಿಗೆ ಅನುಗ್ರಹಿಸಿದ ನಂತರ ಶ್ರೀ ನಿರಂಜನ ಜಗದ್ಗುರು ತೋಂಟದ ಅರ್ಧನಾರೀಶ್ವರ ಶಕ್ತಿ ವಿಶಿಷ್ಟ ಪರಮಾತ್ಮ ನಂತೆ ಕಂಗೊಳಿಸಹತ್ತಿದ.

ಇದಾದ ಮೇಲೆ ಗುರುಗಳಾದ ಕೌದೀ ಮಹಾಂತ ಸ್ವಾಮಿಗಳು ತಮ್ಮ ಇಷ್ಟಲಿಂಗದಲ್ಲಿ ಬಯಲಾದ ನಂತರ ಅವರ ಅಪಾರ ಶಿಷ್ಯಪರಿವಾರ ಕೇವಲ ಬಾಲಕ ನೋರ್ವನಿಗೆ ಅಧಿಕಾರ ಹೋಯಿತೆಂದು ಅಂತರಂಗದಲ್ಲಿ ಕರಬುತ್ತಿರುವ ದನ್ನು ಕಂಡ ಶ್ರೀ ಅರ್ಧನಾರೀಶ್ವರರು "ಇನ್ನು ಇಲ್ಲಿ ಇರುವದು ತರವಲ್ಲ"ವೆಂದು ಊಹಿಸಿ ಅಂದಿನ ರಾತ್ರಿಯೇ ತಮ್ಮ ಆಪ್ತಶಿಷ್ಯ ಕೋರಶೆಟ್ಟಿಯೊಡನೆ ಹೊರಟು ಕೇವಲ ಒಂದು ಅಡಿಯಷ್ಟಿದ್ದ ಹಗರಿ ಹಳ್ಳವನ್ನು ದಾಟಿ ಮುಂದಕ್ಕೆ ಪ್ರಯಾಣ ಬೆಳಸಿದರು.

ಇದು ಹೇಗೋ ಗೊತ್ತಾಗಿ ಮಠದ ಶಿಷ್ಯ ಸಮೂಹ ಶ್ರೀ ಅರ್ಧನಾರೀಶ್ವರ ರನ್ನು ಬೆಂಬತ್ತಿದರು. ಆದರೆ ಅವರು ಬರುತ್ತಲೇ ಕೇವಲ ಒಂದು ಅಡಿಯಷ್ಟು ಮಾತ್ರ ಇದ್ದ ಹಗರಿಹಳ್ಳ ಪಾತ್ರ ಸೂಸಿ ಹರಿಯಹತ್ತಿತು. ಹೀಗೆ ಅನಿರೀಕ್ಷಿತ ವಿಘ್ನ ಒದಗಿದ್ದರಿಂದ ಶಿಷ್ಯರೆಲ್ಲರು ನಿರುಪಾಯರಾಗಿ ಮಠಕ್ಕೆ ಹಿಂದಿರುಗಿದರು.

ಕೋರಶೆಟ್ಟಿ ತನ್ನ ಹೆಗಲ ಗದ್ದುಗೆ ಮೇಲೆ ತನ್ನ ಗುರುಗಳನ್ನು ಮೂರ್ತ ಗೊಳಿಸಿ ಕಾವಿ ಅರಿವೆಯಿಂದ ಆಚ್ಛಾದಿತವಾದ ತಾಳೆಗರಿಯ ಛತ್ರಿಯನ್ನು ಗುರುಗಳ ಮೇಲೆ ಹಿಡಿದು ಪಥಕ್ರಮದಿಂದ ಡಂಬಳ ಪುರಿಯನ್ನು ತಲ್ಪಿದ.

ವಿಲಕ್ಷಣ ರೀತಿಯಲ್ಲಿ ಸಾಗಿದ್ದ ಈ ಗುರುಶಿಷ್ಯರನ್ನು ಶೋಧಿಸುವದು ಕಠಿಣವಾಗಿರಲಿಲ್ಲ. ಹಗರಿಹಳ್ಳ ಇಳಿದ ನಂತರ ಮಠದ ಶಿಷ್ಯರು ಬಾಚಿಗೊಂಡನ ಹಳ್ಳಿಯಿಂದ ಹೊರಟು ವಿಚಾರಿಸುತ್ತ ಅವರೂ ಡಂಬಳ ಗ್ರಾಮವನ್ನು ತಲ್ಪಿ ಶ್ರೀ ದೊಡ್ಡ ಬಸವೇಶ್ವರ ದೇವಾಲಯಕ್ಕೆ ಬಂದರು.
ಶಿಷ್ಯರೆಲ್ಲ ಒಳಗೆ ಹೋಗಿ ನೋಡಿದಾಗ ಧ್ಯಾನಾಸಕ್ತ ಗುರುಗಳು ನೆಲದಿಂದ ಕೆಲ ಅಡಿ ಮೇಲಕ್ಕೆದ್ದು ಅಂತರಿಕ್ಷದಲ್ಲಿಯೇ ಸಮಾಧಿಸ್ಥರಾದದ್ದು ಗೋಚರಿಸಿತು.

ಇದರಿಂದ ಶಿಷ್ಯರೆಲ್ಲರ ಮೊದಲಿನ ಕಹಿ ಭಾವನೆಗಳು ದೂರಾಗಿ ಭಯ ಭಕ್ತಿಗಳು ಉಂಟಾದವು. ಅವರಿಗರಿಯದಂತೆ ಅವರ ಮುಖದಿಂದ ಹರ್ಷಾರವ ಗಳು ಹೊರಹೊರಟವು. ಇದರಿಂದ ಶ್ರೀ ಅರ್ಧನಾರೀಶ್ವರರು ಧ್ಯಾನ ಸಮಾಧಿ ಯಿಂದ ಎಚ್ಚೆತ್ತು ನೋಡಿದಾಗ ಶಿ ಷ್ಯ ರೆ ಲ್ಲ ರೂ ಆಗಮಿಸಿದ್ದು ತಿಳಿಯಿತು.

ಅವರಲ್ಲಾದ ಮಾನಸಿಕ ಬದಲಾವಣೆಯಿಂದ ಸಂತುಷ್ಟರಾಗಿ "ನಿಮ್ಮೆಲ್ಲರ ಕೋರಿಕೆ ಏನಿದೆ ?" ಎಂದು ಕೇಳಿದರು. ಮುಂದೆ ಅವರ ಅಭೀಷ್ಟದಂತೆ ಅವರೆಲ್ಲರಿಗೆ "ಶಿವಾನುಭವಚರ" ದಯಪಾಲಿಸಿ "ಷಟ್‌ಸ್ಥಲೋಪದೇಶದಿಂದ ಲೋಕವನ್ನುದ್ಧರಿಸಿ" ರೆಂದು ಉಪದೇಶಿಸಿ ಅವರನ್ನು ಬೀಳ್ಕೊಟ್ಟರು.

ಹೀಗೆ ಗುರುಗಳಿಂದ "ಶಿವಾನುಭವ ಚರಂತಿಗೆ" ಯನ್ನು ಪಡೆದುಕೊಂಡ ಶಿಷ್ಯರು ಸೊಂಡೂರು, ಮೈಸೂರು, ಉರುವಕೊಂಡ ಮುಂತಾದವುಗಳಲ್ಲಿಗೆ ಹೋಗಿ ಮಠಗಳನ್ನು ಸ್ಥಾಪಿಸಿ ತಮ್ಮ ಶಿವಯೋಗ ತೇಜಸ್ಸಿನಿಂದ ವಿಖ್ಯಾತ ರಾದರು.

ಇದಾದ ಮೇಲೆ ಶ್ರೀ ಅರ್ಧನಾರೀಶ್ವರರು ಕೋರಶೆಟ್ಟಿಯನ್ನು ಕರುಣೆಯಿಂದ ನೋಡಿ "ನಿನಗೆ ಗುರುಸೇವೆಯ ಮೂಲಕ ಜಂಗಮ ಲಕ್ಷಣ ಪ್ರಾಪ್ತವಾಗಿದೆ" ಎಂದು ಹೇಳಿ ಕಠೋರ ಬ್ರಹ್ಮಚರ್ಯ ಪಾಲಿಸಿದ ಆತನಿಗೆ "ಷಟ್‌ಸ್ಥಲ ಬ್ರಹೋಪದೇಶ" ಮಾಡಿ ಕಾವಿವಸ್ತ್ರದಿಂದ ಆಚ್ಛಾದಿತವಾದ ತಾಳಗರಿ ಛತ್ರಿ, ಕೋರಿ ಟೊಪ್ಪಿಗೆ, ಅಳಿಲು ಬಣ್ಣದ ಕಂಬಳಿ, ಶಿವಾನುಭವ ಶಾಸ್ತ್ರ ಗ್ರಂಥ ಈ ಚಿನ್ಹೆಗಳುಳ್ಳ "ಅನ್ನದಾನಚರ" ವನ್ನು ಕೊಟ್ಟು ಕಳಿಸಿದರು. ಅಂದಿನಿಂದ ಅನ್ನದಾನಚರ ಪ್ರಾರಂಭವಾಯಿತು.

ಶ್ರೀ ಅನ್ನದಾನ ಚರಮೂರ್ತಿಗಳು ಹಾಗೆಯೇ ಮೃಡಗಿರಿಗೆ ಹೋಗಿ ಗುರು ಅರ್ಧನಾರೀಶ್ವರ ಕೃಪಾಬಲದಿಂದ ಅನೇಕ ಮಹತ್ವಗಳನ್ನು ಮಾಡಿ, ಭಕ್ತರು ಭಕ್ತಿಯಿಂದ ಕಟ್ಟಿಸಿಕೊಟ್ಟ ಮಠದಲ್ಲಿ ನಿತ್ಯವೂ ಅನ್ನ ದಾಸೋಹವನಿಟ್ಟು "ಅನ್ನದಾನ ಮಹಾಸ್ವಾಮಿ" ಗಳೆಂದು ಪ್ರಸಿದ್ಧರಾದರು.

"ಶಿವಾನುಭವ" ತತ್ತ್ವೋಪದೇಶದಿಂದ ಮನಸ್ಸಿನ ಮೇಲಾಗುವಷ್ಟು ಪರಿಣಾಮ "ಪ್ರಸಾದ" ಸೇವನೆಯಿಂದಲೂ ಆಗುವದು. ಪ್ರಸಾದವಾದ ಬಳಿಕ ಪದಾರ್ಥದ ಮುನ್ನಿನ ಗುಣ ಅಳಿದು ಹೋಗುವಂತೆ ಪ್ರಸಾದ ಸೇವನೆಯಿಂದ ಜೀವಭಾವವೆಲ್ಲ ನಷ್ಟವಾಗಿ ಶಿವಭಾವ ಉಂಟಾಗುವದು. ಇದೇ "ಅನ್ನ ದಾಸೋಹ" ದ ಮುಖ್ಯ ತತ್ತ್ವ.

ಶ್ರೀ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ "ಶಿವಾನುಭವ ಚರ" ವನ್ನು ಹೆಚ್ಚಾಗಿ ಬಳಕೆಯಲ್ಲಿ ತಂದಂತೆ ಆತನ ಪರಂಪರೆಯಲ್ಲಿ ಒಂಬತ್ತನೇ ಪೀಠದವರಾದ ಶ್ರೀ ಅರ್ಧನಾರೀಶ್ವರರು "ಅನ್ನದಾನ ಚರ" ವನ್ನು ಪ್ರಾರಂಭಿಸಿ ಅದರ ಪ್ರವರ್ತಕರೆನಿಸಿದರು.

ಈ ಪ್ರಕಾರ ಶಿಷ್ಯರೆಲ್ಲರನ್ನು ಬೀಳ್ಕೊಟ್ಟು ಏಕಾಂಗಿಯಾದ ಮೇಲೆ ಶ್ರೀ ಅರ್ಧನಾರೀಶ್ವರರಿಗೆ ವೈರಾಗ್ಯ ಒಲಿತು ಅವರು ಯಾವಾಗಲೂ ಶಿವಯೋಗದಲ್ಲಿಯೇ ಮಗ್ನರಾಗ ಹತ್ತಿದರು.

ಶ್ರೀ ಅರ್ಧನಾರೀಶ್ವರರಿದ್ದ ಡಂಬಳ ಸಂಸ್ಥಾನಕ್ಕೆ ದೊರೆ ಶೀನಪ್ಪ ನಾಯಕ. ಗಲತ್ಕುಷ್ಠದಿಂದ ಬಳಲುತ್ತಿದ್ದ ಶೀನಪ್ಪ ನಾಯಕನಿಗೆ ಜೀವನದಲ್ಲಿ ಜಿಗುಪ್ಸೆ ಹುಟ್ಟಿ ಕಾಶಿಗೆ ಹೋಗಿ ಅಲ್ಲಿ ಗಂಗಾನದಿಯೊಳಗೆ ದೇಹತ್ಯಾಗ ಮಾಡುವದನ್ನು ನಿಶ್ಚಯಿಸಿದ.

ಅದೇ ದಿನ ರಾತ್ರಿ ಶೀನಪ್ಪ ನಾಯಕನ ಕನಸಿನಲ್ಲಿ ಅವನ ಕುಲದೈವ ಆಂಜನೇಯ ಕಾಣಿಸಿಕೊಂಡು (ಒಂಟಿ ಆಲದಪ್ಪ) ಅರಸನಿಗೆ "ವಿಶ್ವನಾಥನೇ ದೊಡ್ಡ ಬಸವಪ್ಪನ ದೇವಾಲಯಕ್ಕೆ ಸಮೀಪದಲ್ಲಿರುವ ಗುಹೆಯಲ್ಲಿದ್ದಾನೆ. ಆತನನ್ನು ಸೇವಿಸಿ ರೋಗಮುಕ್ತನಾಗು" ಎಂದು ಸೂಚಿಸಿದ.

ಮಾರನೇ ದಿನವೇ ಅರಸು ಬೆಳಗಿನ ಝಾವದಲ್ಲಿ ಎದ್ದು ಸ್ನಾನ ತೀರಿಸಿಕೊಂಡು ದೊಡ್ಡ ಬಸವೇಶ್ವರ ದೇವಾಲಯದ ಹತ್ತಿರ ಗವಿಯನ್ನು ಸಂಶೋಧಿಸ ಹತ್ತಿದ. ಒಂದು ಗುಹೆಯಿಂದ ಘಂಟನಿನಾದದೊಡನೆ ಧೂಪದ ವಾಸನೆ, ಬರಹತ್ತಿತು. ಅದೇ ಶಿವಯೋಗಿಗಳ ಸ್ಥಾನವಾಗಿರಬೇಕೆಂದು ಊಹಿಸಿ ಪ್ರತಿದಿನ ಬೆಳಿಗ್ಗೆ ಅದರ ಮುಂದಿನ ರಜಾಂಗಣ ಉಡುಗಹತ್ತಿದ.

ಒಂದು ದಿನ ಪ್ರಾತಃಕಾಲ ಅರಸು ರಜಾಂಗಣವನ್ನು ಉಡುಗುತ್ತಿದ್ದ. ಪೂರ್ವ ದಿಗಂತದಲ್ಲಿ ಅರುಣೋದಯವಾಗಿದೆ. ಆಗ ಗುಹೆಯಿಂದ ಉದಯ ರವಿಯಂತೆ ಕಂಗೊಳಿಸುವ ಶ್ರೀ ಅರ್ಧನಾರೀಶ್ವರ ಶಿವಯೋಗಿಗಳು ಹೊರಬಂದರು.

ಅರಸನಿಗೆ ಅವರನ್ನು ನೋಡುವದಾಗದೆ ಭಕ್ತಿ ಕಂಪಿತನಾಗಿ ನೆಲಕ್ಕೆ ಮೈಯಿಕ್ಕಿದ. ಶಿವಯೋಗಿಗಳು ಕರುಣೆಯಿಂದ ಅರಸನನ್ನು ಸಂತೈಸುತ್ತ ಬಂದ ಕಾರಣವನ್ನು ಕೇಳಿದರು. ಆಗ ಅರಸು ಎದ್ದು ನಿಂತಾಗ ಅವನ ರೋಗವೆಲ್ಲ ಮಾಯವಾಗಿತ್ತು. ಅರಸನಿಗಾದ ಆನಂದ ಅಷ್ಟಿಷ್ಟಲ್ಲ. ಅವನು ಗದ್ಗದಿತ ಕಂಠದಿಂದ ಶಿವಯೋಗಿ ವರ್ಯನಿಗೆ "ಗುರುವೆ ! ನಾನು ಪೂರ್ವ ಪುಣ್ಯವಶಾತ್ ಈ ಡಂಬಳ ಸಂಸ್ಥಾನಕ್ಕೆ ದೊರೆಯಾಗಿರುವೆ. ನನ್ನ ಹೆಸರು ಶೀನಪ್ಪ ನಾಯಕ. ಆದರೆ ಪ್ರಾರಬ್ಧ ಕರ್ಮದಿಂದ ಮಹಾರೋಗಕ್ಕೆ ತುತ್ತಾದೆ. ಇದರಿಂದ ಜೀವನದಲ್ಲಿ ಹೇಯಹುಟ್ಟಿ ದೇಹತ್ಯಾಗಕ್ಕೆ ಮನಸ್ಸು ಮಾಡಿದಾಗ ಶ್ರೀ ಮಾರುತಿಯ ಆದೇಶದಂತೆ ತಮ್ಮ ಸೇವೆಗೆ ನಿಂತೆ. ಈಗ ನನಗೆ ಇದು ಎರಡನೇ ಜನ್ಮ. ಇನ್ನು ಮುಂದೆ ತಾವೇ ನನ್ನ ಅಧಿದೈವ. ಈ ಗ್ರಾಮವನ್ನೇ ತಮ್ಮ ಸ್ವಕ್ಷೇತ್ರವನ್ನಾಗಿರಿಸಿಕೊಳ್ಳ

ಬೇಕು. ತಮ್ಮ ಯಾವತ್ತು ಸೇವೆಯನ್ನು ನಾನು ಪೂರೈಸುವೆ". ಎಂದು ಹೇಳಿ ಪುನಃ ಗುರುಗಳ ಶ್ರೀಚರಣಕ್ಕೆ ಮಣಿದು ಊರಿಗೆ ಹಿಂದಿರುಗಿದ.

ತಕ್ಷಣವೇ ಮಠವನ್ನು ಕಟ್ಟಿಸಬೇಕಾಗಿದ್ದರಿಂದ ಆ ಕೂಡಲೇ ತನ್ನ ಅರಮನೆಯ ಬಹು ಭಾಗವನ್ನು ಕೆಡವಿ ಅದೇ ಕಲ್ಲು ಕಿಡಕಿ ಬಾಗಿಲುಗಳಿಂದ ಮಠವನ್ನು ಸಾಧ್ಯವಿದ್ದಷ್ಟು ತೀವ್ರ ಕಟ್ಟಿಸಿದ, ಇಂಡಗೂ ಮಠಕ್ಕಿರುವ ವಿಶಾಲವಾದ ಅರಮನೆ ಕಿಡಕಿ ಬಾಗಿಲುಗಳನ್ನು ನೋಡಬಹುದು. ಆಮೇಲೆ ಅರಸು ಶ್ರೀಗಳ ಶಿವಪೂಜಾ ವಿನಿಯೋಗಾರ್ಥ ಅನೇಕ ದಾನ ದತ್ತಿಗಳನ್ನು ಹಾಕಿಕೊಟ್ಟ.

ಈ ರೀತಿ ಭೋಗಾಪೇಕ್ಷಿಗಳು ಶಿವಯೋಗಿ ಸನ್ನಿಧಿಗೈತಂದು ತಮ್ಮ ತಾಪ ತ್ರಯಗಳನ್ನು ನೀಗಿಕೊಂಡಂತೆ ಜ್ಞಾನಬುಭುತ್ಸುಗಳೂ ಶ್ರೀ ಅರ್ಧನಾರೀಶ್ವರರ ಅನುಭಾವ ಸಂಪತ್ತಿಗೆ ಹಾರೈಸಿ ತಮ್ಮ ಜ್ಞಾನತೃಷೆಯನ್ನು ಹಿಂಗಿಸಿಕೊಂಡರು. ಇಂಥವರಲ್ಲಿ ಪ್ರಕಾಂಡ ಪಂಡಿತ ಮರಿ ತೋಂಟದಾರ್ಯರು ಹಾಗೂ ಮೌನಪ್ಪಯ್ಯ ಪಂಡಿತರು ಮುಖ್ಯರು.

ಹೀಗೆ ದಿಗಂತ ವಿಶ್ರುತವಾದ ಅರ್ಧನಾರೀಶ್ವರನ ಮಹಿಮಾತಿಶಯವನ್ನು ಕೇಳಿ ಕೆಳದಿಯ ಭೂಪಾಲರು ಅರ್ಧನಾರೀಶ್ವರನ ದರ್ಶನಕ್ಕೆ ಬಂದು ಕೆಲ ದಿನ ಇದ್ದು ಮರಳಿ ಹೋಗುವಾಗ ಶ್ರೀ ಮರಿ ತೋಂಟದಾರ್ಯರನ್ನು ತಮಗೆ ಕ್ರಿಯಾ ಮೂರ್ತಿಗಳನ್ನಾಗಿ ಕರುಣಿಸಬೇಕೆಂದು ಬೇಡಿಕೊಂಡರು. ಆ ಮೇರೆಗೆ ಮರಿ ತೋಂಟದಾರ್ಯರು ಕೆಳದಿಯ ರಾಜಸ್ಥಾನ ಸೇರಿದ ನಂತರ " ವೀರಶೈವಾನಂದ ಚಂದ್ರಿಕೆ ", " ವೀರಶೈವ ಪ್ರದೀಪಿಕೆ ", ಮತ್ತು ಸಿದ್ಧಾಂತ ಶಿಖಾಮಣಿಯ " ತತ್ತ್ವ ಪ್ರದೀಪಿಕೆ " ಮುಂತಾದ ಅಮೋಘ ಕೃತಿಗಳು ಅವರಿಂದ ರಚಿತವಾಗಿ ವೀರಶೈವ ಸಂಸ್ಕೃತ ವಾಙ್ಮಯ ಶ್ರೀಮಂತವಾಯಿತು.

ಕೆಳದಿಯ ರಾಜಮನೆತನಕ್ಕೆ "ಗಂಡುಸಂತಾನ"ವೇ ಇರಲಿಲ್ಲ. ಪುತ್ರ ಕಾಮೇಷ್ಟಿಗೆ ಮಿಗಿಲಾದ ಜಗದ್ಗುರು ತೋಂಟದಾರ್ಯ ಪರಂಪರೆಯ ಜಂಗಮ ಲೀಲೆಯನ್ನು ಶ್ರೀ ಮರಿ ತೋಂಟದಾರ್ಯರಿಂದ ಕೇಳಿ ತಿಳಿದ ರಾಜಕುಟುಂಬವು ಗುರುದರ್ಶನೋತ್ಕಂಠಿತವಾಗಿ ಡಂಬಳಕ್ಕೆ ಹೊರಡಬೇಕೆನ್ನುವಷ್ಟರಲ್ಲಿ "ಶ್ರೀ ಅರ್ಧ ನಾರೀಶ್ವರ"ನೇ ಕೆಳದಿಯ ರಾಜವೀಥಿಯಲ್ಲಿ ಕಾಣಿಸಿಕೊಂಡನು.

ನೂರಾರು ಮೈಲುಗಳ ಆಚೆಗಿರುವ ಗುರುಪುಂಗುವ ಕೇವಲ ಸ್ಮರಣೆ ಮಾತ್ರದಿಂದ ದರ್ಶನ ಕೊಟ್ಟಿದ್ದನ್ನು ನೋಡಿ ಕೆಳದಿಯ ರಾಜಮನೆತನದ ಭಕ್ತಿ ಪ್ರವಾಹ ಎಲ್ಲೆಮೀರಿತು.

ರಾಜವೈಭವದಿಂದ ಗುರುಗಳಿಗೆ ರಾಜಾತಿಥ್ಯವಾಯಿತು. ಗುರುಗಳು ರಾಜ ಕುಟುಂಬವನ್ನು ಹರಿಸಿ ಮರಳುತ್ತಿರುವಾಗ ಮಕ್ಕಳಿಲ್ಲದೆ ಕೊರಗುತ್ತಿರುವ

ವೀರಭದ್ರನಾಯಕನ ಪತ್ನಿ ಮಲ್ಲಮಾಂಬೆಯನ್ನು ನೋಡಿ, "ಮಗಳೆ! ನಿನ್ನ ಮನದಳಲವನ್ನು ಬಲ್ಲೆ, ಗುರುತೋಂಟದ ಸಿದ್ಧಲಿಂಗನು ನಿನ್ನ ಅಭೀಷ್ಟವನ್ನು ಪೂರೈಸುವನು" ಎಂದು ಹೇಳಿ ಆಕೆಗೆ ಭಸ್ಮಘುಟ್ಟಿಯನ್ನು ಅನುಗ್ರಹಿಸಿ ಸ್ವಸ್ಥಾನಕ್ಕೆ ಹಿಂದಿರುಗಿದರು.

ಮಹಾರಾಣಿ ಮಲ್ಲಮಾಂಬೆಗೆ ಗುರುಗಳ ಆಶೀರ್ವಾದದಂತೆ ವರ್ಷ ತುಂಬು ವದರೊಳಗಾಗಿ ಪುತ್ರೋತ್ಸವವಾಯಿತು. ಆ ಮಗು ಗುರುಗಳ ಆಶೀರ್ವಾದದ ಭಸ್ಮಘುಟ್ಟಿಯಿಂದ ಜನ್ಮವೆತ್ತಿದ ಕಾರಣ ಆ ಮಗುವಿಗೆ "ಬೂದಿ ಬಸಪ್ಪನಾಯಕ" ನೆಂದು ನಾಮಕರಣವಾಯಿತು.

ಮುಂದೆ ಈತನ ಕಾಲದಲ್ಲಿ ಕೆಳದಿ ತುಂಬಾ ಪ್ರಸಿದ್ಧಿಗೆ ಬಂದಿತು.

ಕೆಳದಿಯ ಭೂಪಾಲರು ಶ್ರೀ ಅರ್ಧನಾರೀಶ್ವರರ ಲಿಂಗಪೂಜಾ ವಿನಿಯೋ ಗಕ್ಕೆ ಅನೇಕ ದಾನ-ದತ್ತಿಗಳನ್ನು ಹಾಕಿ ಕೊಟ್ಟರಲ್ಲದೆ ತಮ್ಮ ಸೀಮೆಯಿಂದ ಪರಸ್ಥಲಕ್ಕೆ ಹೋಗುವ ಯಾಲಕ್ಕಿ, ಶುಂಠಿ, ಮೆಣಸು ಮುಂತಾದ ಸರಕುಗಳಿಗೆ ಕಟ್ಟಲ್ಪಡುವ ಆದಾಯವನ್ನು ಸಹ ಭಕ್ತಿ ಕಾಣಿಕೆಯಾಗಿ ಅರ್ಪಿಸಿದರು.

ಸ್ವತಃ ಮಲ್ಲಮಾಂಬೆ ಹೆಣೆದ ಜರದ ಕಲಾಬತ್ತಿನ ಪೀತಾಂಬರ ಈಗಲೂ ಸಂಸ್ಥಾನಮಠದಲ್ಲಿದೆ. ಅದರಂತೆ ಮಲ್ಲಮಾಂಬೆ ವೀರಭದ್ರನಾಯಕ ಮೂರ್ತಿ ಗಳಿದ್ದ ಸುವರ್ಣದ ಹರಳು ಕೆತ್ತಿದ ಪಾದುಕೆಗಳೂ ಸಹ ಕೆಳದಿ ರಾಜ-ಮನೆತನದ ಭಕ್ತಿಯ ದ್ಯೋತಕವಾಗಿ ಈಗಲೂ ಸಂಸ್ಥಾನಮಠದಲ್ಲಿವೆ.

ಹೀಗೆ ಅರ್ಧನಾರೀಶ್ವರ ತ್ಯಾಗಿ-ಭೋಗಿಗಳೆಲ್ಲರ ಆರಾಧ್ಯ ದೈವನಾಗಿ ಭಕ್ತಿ ಜ್ಞಾನ ವೈರಾಗ್ಯಗಳು ಭಕ್ತ ಕೋಟಿಯಲ್ಲಿ ಪುನಃ ರಾರಾಜಿಸುವಂತೆ ಮಾಡಿ ಶಿವಾನು ಭವ ಚರ, ಅನ್ನದಾನ ಚರಣಗಳಿಗೆ ಪುನಃ ಚೇತನವನ್ನು ಕೊಟ್ಟು ಪ್ರತಿಸಿದ್ಧಲಿಂಗ ನೆನಿಸಿ ಡಂಬಳ ಸಂಸ್ಥಾನಮಠದ ಶಿವಯೋಗ ಮಂಟಪದ ಗುಹೆಯಲ್ಲಿ ಶಿವ ಸಮಾಧಿಯನ್ನು ಹೊಂದಿದನು.

ಆಶ್ಚರ್ಯವೆಂದರೆ ಗದ್ದುಗೆಯ ಬಾಗಿಲ ತೆರದಾಗ ಒಂದು ವಿಧವಾದ ಸುಗಂಧ ಮಯವಾದ ಪರಿಮಳ ಒಳಗಿಂದ ಬಂದು ದರ್ಶನಾರ್ಥಿಗಳ ಭಾವ ಮನಗಳನ್ನು ಪುನೀತವನ್ನಾಗಿ ಮಾಡುತ್ತಿದೆ.

ಈ ಗದ್ದುಗೆಯ ಸಾನಿಧ್ಯದಿಂದ ಡಂಬಳ ಪ್ರತಿ ಎಡೆಯೂರೆನಿಸಿ ಜಂಗಮ ಕ್ಷೇತ್ರವಾಗಿ ಮೆರೆದಿದೆ. ದೊರೆ ಶಿವಪ್ಪನಾಯಕನ ಸೇವಾರ್ಥವಾಗಿ ಈಗಲೂ ಮಾಘ ಶುದ್ಧ ಪೌರ್ಣಿಮೆಯಂದು ಮಹಾ ರಥೋತ್ಸವ ವೈಭವದಿಂದ ಜರಗುತ್ತದೆ.

# ನೂರೊಂದು ವಿರಕ್ತರು

## (ಒಂದು ಸಮೀಕ್ಷೆ)

— ಡಾ. ವಿ. ಶಿವಾನಂದ

೧೫ ನೆಯ ಶತಮಾನದಲ್ಲಿ ವಿಜಯನಗರದ ದೊರೆ ಪ್ರೌಢದೇವರಾಯನ ಆಳ್ವಿಕೆಯ ಕಾಲದಲ್ಲಿ ನೂರೊಂದು ವಿರಕ್ತರು ಉದಯರಾಗಿ ವೀರಶೈವದ ಪ್ರವರ್ಧಮಾನಕ್ಕೆ ಕಾರಣರಾದ ಸಂಗತಿ ಅನೇಕ ಕಾವ್ಯ-ಪುರಾಣಗಳಲ್ಲಿದೆ. ಗುಬ್ಬಿ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ (೧೫೩೦), ರೆಕ್ಕೇರಿ ಯಾರಾಧ್ಯ ನಂಜುಂಡನ ಭೈರವೇಶ್ವರ ಕಾವ್ಯ (೧೫೫೦), ಅದ್ರೀಶನ ಪ್ರೌಢ ರಾಯನ ಕಾವ್ಯ (೧೫೫೦), ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ (೧೫೮೪), 'ಸಿದ್ಧನಂಜೇಶನ ರಾಘವಾಂಕ ಚರಿತೆ (೧೬೭೦), ಶಾಂತಲಿಂಗ ದೇಶಿಕನ ಭೈ. ಕಾ. ಕ. ಸ. ೧ ರತ್ನಾಕರ (೧೬೭೨), ರಾಮಪುರ ಬೊಕ್ಕನ ನಿಜಶರಣ ತ್ರಿವಿಧಿ (೧೭೦೦), ನಿರಂಜನ ವಂಶರತ್ನಾಕರ (೧೮೦೦) ಹಾಗೂ ಸಟೀಕು ಏಕೋತ್ತರ ಶತಸ್ಥಲ ಗ್ರಂಥಗಳಲ್ಲಿ ಇವರ ಉಲ್ಲೇಖವಿದೆ. ನೂರೊಂದು ವಿರಕ್ತರನ್ನೇ ಕುರಿತು ಒಂದು ಸ್ವತಂತ್ರ ಕಾವ್ಯ ಬರೆದ ಕವಿ ಮೋದಿಯ ರುದ್ರ. (೧೭೩೨). 'ಷಟ್‌ಸ್ಥಲ ಕೋವಿದ'ನಾದ ಮಳೆಯಸ್ವಾಮಿಯು 'ಕಂದ ನೀ ಬಾರೆಲವೊ ಪರಮ ನೂರೊಂದು ವಿರಕ್ತ ಮಹೇಶ್ವರರ ಚರಿತ್ರೆ ವಿರಚಿಸೆಂದು ವರವಿತ್ತು ಪೇಳಲು' ಕವಿ ರುದ್ರನು 'ಆ ಮಹಾ ಪೂರ್ವಕಥನ ದೊರಕುವದು ದುರ್ಲಭಂ ಗುರುವೆ ಬಿನ್ನಹ'ವೆಂದು ಕೇಳಲು ಮಳೆಸ್ವಾಮಿಯವರ ಕೃಪೆ ತನಗಾಯಿತೆಂದೂ, ಆ ಮಹಿಮರ ಚರಿತ್ರೆ ಪೂರವಿಸಿರುವದಾಗಿಯೂ ಕವಿ ಹೇಳುತ್ತಾನೆ.

ಕರುಣಿಸುತ ಕಂದನೀ ಬಾರೆಲವೊ ನಿನಗೊಂದು
ವರವ ಬುದ್ಧಿಯ ಕೇಳು ಈ ಕಾವ್ಯ ರಚಿಸಿದ್ದೈ
ಪರಮ ನೂರೊಂದು ವಿರಕ್ತ ಮಹೇಶ್ವರರ ಚರಿತ್ರ ವಿರಚಿಸೆಂದು
ವರವಿತ್ತು ಪೇಳಲ್ಕೆ ಆ ಮಹಾಪೂರ್ವಕಥೆ
ದೊರಕುವದು ದುರ್ಲಭಂ ನಾನೆಂತು ವಿರಚಿಸುವೆ
ಗುರುವೆ ಬಿನ್ನಹವೆಂದು ನುಡಿಯಲ್ಕೆ ಪೇಳಿದಂ ವರ
ಪ್ರಸಾದ ವಾಕ್ಯವಂ

೧೦೧ ವಿರಕ್ತರ ನಾಮೋಲ್ಲೇಖ— ಇತರ ವೀರಶೈವ ಕವಿಗಳಿಗೆ ಹೇಳಲ ಸಾಧ್ಯವಾದ ೧೦೧ ವಿರಕ್ತರ ಹೆಸರಿನ ಪೂರ್ಣಪಟ್ಟಿ ದೊರಕುವ ಕೃತಿ ಮೋದಿಯ ರುದ್ರನದಾಗಿದೆ. ಅವನು ಹೇಳುವ ೧೦೧ ಹೆಸರುಗಳು ಇಂತಿವೆ :

೧. ಕರಸ್ಥಲನಾಗಿದೇವ
೨. ಗುರುಬಸವ
೩. ಹೊನ್ನಿದೇವ
೪. ಹೇಟಿಯ ಮರುಳ
೫. ಟಗರ ಕಾಳೆಗದರ ಪ್ರಭುದೇವ
೬. ಬಾಲ ಲಿಂಗಣ್ಣ
೭. ಬತ್ತಲೇಶ.
೮. ಮಿಡಿಬಲ್ಲ ಶಾಂತೇಶ
೯. ಆಯುಧ ಶಾಂತೇಶ
೧೦. ಕುದುರೆಯ ಶಾಂತ
೧೧. ಮಂಚದ ಶಾಂತ
೧೨. ಮದ್ದಳೆ ಶಾಂತ
೧೩. ಬುಡುಬುಡುಕೆಯ ಶಾಂತ
೧೪. ಡಂಗುರ ಶಾಂತ
೧೫. ಖಂಡಣಿ ಶಾಂತ
೧೬. ಸಾಣಬಂಡೆಯ ಶಾಂತ
೧೭. ಮದ್ದಾನಿ ಶಾಂತ
೧೮. ಸಿಂಗಡಿಯ ಶಾಂತ
೧೯. ಚಕ್ರದ ಶಾಂತ
೨೦. ಬೊಂಬೆ ಕಟ್ಟಿ ಮೆರೆಸುವ ಶಾಂತ
೨೧. ಜಟ್ಟಿ ಶಾಂತ
೨೨. ವೀರ ಶಾಂತ
೨೩. ಡೊಂಬರ ಶಾಂತ
೨೪. ವರ್ಧೇಂದ್ರಿಯ ಶಾಂತ
೨೫. ಗುರುಬಸವೇಶ್ವರ
೨೬. ನಿಬ್ಬೆರಗಿನ ಶಾಂತ
೨೭. ಸರಕಿಲ ಶಾಂತೇಶ್ವರ
೨೮. ರುದ್ರಭೂಮಿಯ ಶಾಂತ
೨೯. ಬಣ್ಣ ಗದ್ದುಗೆ ಶಾಂತ
೩೦. ರುದ್ರಮೂರ್ತಿ ಶಾಂತ
೩೧. ಭದ್ರಕಾಳಿ ಶಾಂತ
೩೨. ಇದ್ದಲಿ ಶಾಂತ
೩೩. ಬಯಲ ಶಾಂತ
೩೪. ಮಡಿವಾಳ ಶಾಂತ
೩೫. ಹಿಡಿಗಡಲಕಿಯ ಶಾಂತ
೩೬. ಶಿವಮೂರ್ತಿ ಮುನಿಲಾದಿ ಶಾಂತ
೩೭. ಪಿಟಲಕ ಶಾಂತ
೩೮. ಕೋಲ ಶಾಂತ

---

೧. ನೂ. ವಿ. ಕಾ. ಸಂಧಿ ಪ. ೨೩ ಹಸ್ತಪ್ರತಿ



೧. ಶ್ರೀ ಸಿದ್ಧಲಿಂಗ ಚರಮೂರ್ತಿಗಳು ಅಣ್ಣಿಗೇರಿ. ೨. ಶ್ರೀ ರೇವಣಸಿದ್ಧ ಸನ್ನಿಧಿ ಚರಮೂರ್ತಿಗಳು. ೩. ಶ್ರೀ ಗುರುಬಸವ ಚರಮೂರ್ತಿಗಳು, ಇಟಗಿ. ೪. ಶ್ರೀ ಜ. ಸಿದ್ಧೇಶ್ವರ ಸ್ವಾಮಿಗಳು. ೫. ............... ೬. ಶ್ರೀ ಮಲ್ಲಿಕೇರಿ ಶ್ರೀಗಳು. ೭. ಶ್ರೀ ಸದಾಶಿವ ಚರಮೂರ್ತಿಗಳು, ಶಿರೋಳ. ೮. ನೋಣವಿನಕೆರೆ ಶ್ರೀಗಳು. ೯. ........... ೧೦. ಶ್ರೀ ಅನ್ನದಾನ ಸ್ವಾಮಿಗಳು, ಮುಂಡರಗಿ. ೧೧. ಶ್ರೀ ಶಂಕರಪ್ಪ ಚರಮೂರ್ತಿಗಳು ಡಂಬಳ. ೧೨. ...........

೩೯. ಪಾವನಗುಂಡ ಶಾಂತ
೪೦. ಲಂಡರಾಹುತನೆಂಬ ಶಾಂತ
೪೧. ಚಂಡಿನಾಟದ ಶಾಂತ
೪೨. ಶಿಶುಗಳೊಡನೆ ಆಟವಾಡುವ ಶಾಂತ
೪೩. ಬಿಸಿನೀರಿನ ಶಾಂತ
೪೪. ಚಂದಕುಸುರಿನ ಚತುರ ಶಾಂತ
೪೫. ಬೇಟೆಯ ಶಾಂತ
೪೬. ಶಿವಮೂರ್ತಿಯ ಧೂಪದ ಶಾಂತ
೪೭. ಸುವಿವೇಕಿ ಶಾಂತ
೪೮. ಮಜ್ಜನ ಶಾಂತೇಶ
೪೯. ವಿಭೂತಿಯ ಶಾಂತೇಶ
೫೦. ವಸುಗೆಲಸದ ಶಾಂತ
೫೧. ಜೂಜಿನ ಶಾಂತ
೫೨. ಕಿನ್ನರಿ ಶಾಂತ
೫೩. ಎಗ್ಗದ ಶಾಂತ
೫೪. ಎಚ್ಚರನಿಯಮ (ನೀಯುವ) ಶಾಂತ
೫೫. ಗಿರಿಗಟೆಯ ಶಾಂತ
೫೬. ಕಸ್ತೂರಿ ತಿಲಕದ ಶಾಂತ
೫೭. ಇಂದ್ರಜಾಲ ಶಾಂತ
೫೮. ಗಿಂಡಿಯ ಶಾಂತ
೫೯. ಚಂಡಿನಾಟದ ಶಾಂತ
೬೦. ಬೊಂಬೆಯ ಮೂಳ್ಪ ಶಾಂತ
೬೧. ವಿಧಾನದ ಶಾಂತ
೬೨. ಚಂಡವಿಕ್ರಮ ಶಾಂತ
೬೩. ಚಂದ್ರವಂಶಿ ಶಾಂತ
೬೪. ತೃಣದ ಶಾಂತ
೬೫. ನಾಟ್ಯ ಶಾಂತ
೬೬. ಮಹೇಂದ್ರಜಾಲದ ಗುಣದಶಾಂತ
೬೭. ಕವಿಶಾಂತ
೬೮. ಗಂಗಿಯ ಶಾಂತ
೬೯. ಭಟ್ಟಶಾಂತ
೭೦. ಹೆಸರನು ಇಟ್ಟಶಾಂತ
೭೧. ಬೆಟ್ಟದ ಮೇಲಣ ಶಾಂತ
೭೨. ಅಪ್ಪಗೋಲಿನ ಶಾಂತಮೂರ್ತಿ
೭೩. ನಿಷ್ಠೆ ನಿಜ ನೇಮದ ಶಾಂತ
೭೪. ಶಂಭು ಶಾಂತೇಶ
೭೫. ಉಗ್ಗಡಿನ ಶಾಂತ
೭೬. ಆಟ್ಟ ಹೊಯ್ವಡ ಮಾಯೆ ಶಾಂತ
೭೭. ಕಟ್ಟುನಾಯಕ ಶಾಂತ
೭೮. ಮರವಿಕ್ರಯಿ ಶಾಂತ
೭೯. ಚಕ್ಕಿ ಶಾಂತ
೮೦. ಬೊಗರಿಗೆಯ ಶಾಂತಲಿಂಗ
೮೧. ಮರುತರದ ಶರಫಿ ಶಾಂತ
೮೨. ಸ್ವಸ್ಥಿರದ ಸಮಾಧಿಯ ಮೇಲಿರುವ ಶಾಂತ
೮೩. ಸೂಜಿಯ ಪರಮಶಾಂತ
೮೪. ಒಕ್ಕಲಿಗನೆನಿಸುವ ಗುರುಶಾಂತ
೮೫. ಕೆಲಸಿ ಶಾಂತ
೮೬. ಶಂಕರನ ಒಲುಮೆಯ ಶಾಂತ
೮೭. ನಿಂಬೆ ಶಾಂತ
೮೮. ಸೊಡ್ಡಿನ ಶಾಂತ
೮೯. ಚೆಲುವ ಶಾಂತೇಶ
೯೦. ಸಾಧನೆಯ ಶಾಂತನು
೯೧. ಒಡ್ಡಶಾಂತ
೯೨. ನಿರ್ವಂಚನೆಯ ಶಾಂತ
೯೩. ಪಂಚಾಂಗವಿಡಿದೋದುವ ಶಾಂತ
೯೪. ಶೂಲದ ಶಾಂತಲಿಂಗ
೯೫. ಕಂಚಿನಾದ್ರಿಯ ಶಾಂತ
೯೬. ರತ್ನದ ಶಾಂತ

೯೭. ಕೋಲ ಶಾಂತ
೯೮. ಬಾಲಗಾಸಿಯ ಶಾಂತಮೂರುತಿ
೯೯. ಹಾಲ ಶಾಂತ
೧೦೦. ಗಾಣಶಾಂತ
೧೦೧. ಬಾಣಬತ್ತಿ ಶಾಂತಲಿಂಗ

**ಚಾಮರಸಾದಿಗಳು ೧೦೧ ವಿರಕ್ತರೇ?**– 'ಪ್ರೌಢರಾಯನ ಕಾವ್ಯ'ದಲ್ಲಿ ನೂರೊಂದು ವಿರಕ್ತರು ಎಂಬ ಸ್ಪಷ್ಟ ಪ್ರಯೋಗವಿದೆ. ಆದರೆ ಅವರಲ್ಲಿ ನೂರೊಂದು ವಿರಕ್ತರು ಯಾರು ಯಾರು? ಎಂದು ಹೇಳುವಲ್ಲಿ ಸಂದಿಗ್ಧತೆಯಿದೆ.

ಹರರೂಪವಾದ ನೂರೊಂದು ಸುವಿರಕ್ತರುರೆ
ಕರಸ್ಥಲದ ನಾಗಿದೇವನು ಕಲ್ಲುಮಠದ ಪ್ರಭು
ವರನು ವೀರಣ್ಣೊಡೆಯರುಂಚಾಮರಸಾದಿ ಶಿವಭಕ್ತ–

—ತತಿಯು ನೆರೆದುದು[೧]

ಈ ಪದ್ಯದ ಅನ್ವಯಕ್ರಮವನ್ನು ಕುರಿತು ವಿಚಾರಿಸುತ್ತ ಡಾ|| ಆರ್. ಸಿ. ಹಿರೇಮಠರವರು ಹೀಗೆ ಬರೆಯುತ್ತಾರೆ. "ಕರಸ್ಥಲದ ನಾಗಿದೇವನು, ಕಲ್ಲುಮಠದ ಪ್ರಭುವರನು ವೀರಣ್ಣೊಡೆಯರುಂ" ಎಂಬಲ್ಲಿರುವ ಸಮುಚ್ಚಯ ಸೂಚಕ 'ಉಂ' ಅರ್ಥಪೂರ್ಣವಾಗಿದೆ. 'ಉಂ' ಎಂಬ ವಿಧಿಯಿಂದ ಮುಗಿಯುವ ಸಮುಚ್ಚಯದ ಮೂವರನ್ನು ('ನಾಗಿದೇವ, ಪ್ರಭುವರ, ವೀರಣ್ಣೊಡೆಯ—) 'ನೂರೊಂದು ವಿರಕ್ತರೆಂದು' 'ಚಾಮರಸಾದಿ'ಗಳನ್ನು ಶಿವಭಕ್ತತತಿಯೆಂದು ಅರ್ಥಮಾಡಿಕೊಳ್ಳಬೇಕಾಗುತ್ತದೆ"[೨] ಡಾ|| ಆರ್. ಸಿ. ಹಿರೇಮಠರ ಈ ಹೇಳಿಕೆಯ ಮೇರೆಗೆ ಚಾಮರಸನು ಭಕ್ತ, ವಿರಕ್ತನಲ್ಲ; ಆದರೆ ಈ ವಿಷಯ ಚರ್ಚಾಸ್ಪದವೇನೋ ಎನ್ನಿಸುತ್ತದೆ. ಅದೃಶ್ಯನು ಮೂವರ ಹೆಸರುಗಳನ್ನು ನೂರೊಂದು ವಿರಕ್ತರವೆಂದು ಹೇಳಿ ಚಾಮರಸನೊಬ್ಬನನ್ನೇ ಪ್ರತ್ಯೇಕಿಸಿ ಹೇಳಿರುವ ಸಾಧ್ಯತೆ ಇದೆಯೇ? ಹಾಗೆ ಹೇಳುವದರ ಉದ್ದೇಶವಾದರೂ ಏನು? ಏಕೋತ್ತರ ಷಟ್‌ಸ್ಥಲದ ಮೆರವಣಿಗೆಯಲ್ಲಿ ಪಾಲುಗೊಂಡವರೊಳಗೆ ನೂರೊಂದು ವಿರಕ್ತರೆಂದು ತನ್ನ ಕಾಲಕ್ಕೆ ಪ್ರಸಿದ್ಧರಾದವರ ಹೆಸರುಗಳನ್ನು ನಿರ್ಧಿಷ್ಟವಾಗಿ ಹೇಳುವದು ಅವನಿಗೆ ಸಾಧ್ಯವಾಗಿದೆಯೇ ಹೊರತು ಎಲ್ಲರನ್ನೂ ಅವನು ಹೆಸರಿಸಹೋಗಿಲ್ಲ. ಚಾಮರಸನ ಹೆಸರು ಇಲ್ಲಿರುವದರಿಂದ ಇದು ನೂರೊಂದರ ಮಾಲಿಕೆಗೇ ಸೇರುವಂತೆ ಕಾಣುತ್ತದೆ.

ಡಾ|| ಹಿರೇಮಠರ ಅಭಿಪ್ರಾಯದ ಮೇರೆಗೆ ಇಲ್ಲಿ 'ಸಮುಚ್ಚಯದ ಉಮುವಿಧಿ' ಅಡ್ಡಿಯಾಗುತ್ತಿದ್ದರೂ ಅದು 'ಕೇವಲ ಛಂದಸ್ಸು, ಭಾಷೆಗೆ

---

೧. ಪ್ರೌ. ಕಾ. ಸಂ. ೧–೪೨ ಸಂ. ಪ್ರೊ|| ಸಂ. ಶಿ. ಭೂಸನೂರಮಠ
೨. ಷಟ್‌ಸ್ಥಲ ಜ್ಞಾನ ಸಾರಾಮೃತ– ಪೀಠಿಕೆ.

ಸಂಬಂಧಿಸಿದ ತೊಡಕೇ ವಿನಾ ಅನ್ವಯ ಮತ್ತು ಅರ್ಥ ಪ್ರತೀತಿಯ ತೊಡಕೇನಲ್ಲ. ಕವಿ ಅದೃಶ್ಯನು ಶಿವಭಕ್ತ ತತಿಯಲ್ಲಿ ಚಾಮರಸನೊಬ್ಬನನ್ನೇ ಏಕೆ ಹೆಸರಿಸಿದ ? ಅದರ ಔಚಿತ್ಯವೇನು ? ಎಂಬುದಕ್ಕೆ ಅಲ್ಲಿ ಉತ್ತರವಿಲ್ಲ, ಅವನು ನೂರೊಂದು ವಿರಕ್ತರ ಗುಂಪಿಗೇ ಸೇರಿದ ವ್ಯಕ್ತಿಯೆಂಬುದಕ್ಕೆ ಬೇಕಾದರೆ ಆ ಕಾವ್ಯದಲ್ಲಿ ಅದೇ ಸನ್ನಿವೇಶದಲ್ಲಿ ನಮಗೆ ಸಮಂಜಸವಾದ ಉತ್ತರ ದೊರಕುತ್ತದೆ. ಮುಕುಂದ ಪೆದ್ದಿಯು ಜಕ್ಕಣಾರ್ಯನನ್ನು ಕುರಿತು ಏಕೋತ್ತರ ಶತಸ್ಥಲದ ಮೆರವಣಿಗೆಯನ್ನು ವಿಡಂಬಿಸುತ್ತ "ಅದೇನು ಸತ್ತವರ ಒಸಗೆಯೋ ಹೆತ್ತ ಸೌರಂಭವೋ" ಎಂದು ನಿಂದಿಸಿ ನುಡಿದಾಗ ಅವನ ನುಡಿಯನ್ನು ಖಂಡಿಸಿ 'ಶರಣರು ಸತ್ತವರಲ್ಲ, ಅವರು ನಿತ್ಯರು' ಎಂದು ನುಡಿದ ಧೀರ ಚಾಮರಸ. ಅವನು ಏಕೋತ್ತರ ಶತಸ್ಥಲದ ಮತವನ್ನು ಪ್ರತಿಷ್ಠಾಪಿಸಿ, ಶರಣರು ನಿತ್ಯ ಮುಕ್ತರೆಂಬುದನ್ನು ಪ್ರತಿಪಾದಿಸುವದಕ್ಕಾಗಿಯೇ ದಿನಕ್ಕೆ ೧೦೧ ರಂತೆ ೧೧ ದಿನಗಳಲ್ಲಿ ೧೧೧೧ ಪದ್ಯಗಳನ್ನು ಬರೆದು 'ಪ್ರಭುಲಿಂಗ ಲೀಲೆ' ಎಂಬ ಮಹಾಕಾವ್ಯವನ್ನು ಪೂರ್ತಿ ಮಾಡಿದನು. ಹೀಗೆ ಈ ಕ್ರಾಂತಿಯಲ್ಲಿ ಮುಖ್ಯ ಪಾತ್ರವಹಿಸಿದ ವ್ಯಕ್ತಿ ಚಾಮರಸ. ಇಲ್ಲಿ ಆ ಕವಿ ದಿನವೊಂದಕ್ಕೆ ೧೦೧ ಪದ್ಯಗಳನ್ನು ಬರೆದುದು ಅವನು ೧೦೧ ವಿರಕ್ತರಲ್ಲಿ ಒಬ್ಬನೆಂಬುದಕ್ಕೆ ಸೂಕ್ತ ಆಧಾರವೆನಿಸುತ್ತದೆ. 'ಸಮುಚ್ಚಯದ ಉಮುವಿಧಿ' ಯನ್ನೊಪ್ಪಿಕೊಂಡು ಹೇಳಿದರೆ ಚಾಮರಸನು ವಿರಕ್ತನಲ್ಲಭಕ್ತನೆಂಬ ಹೇಳಿಕೆ ಅದೃಶ್ಯ ಕವಿಯೊಬ್ಬನದೇ ಆಗುತ್ತದೆ. ಅದೃಶ್ಯನ ಕಾಲಕ್ಕೂ ಕೂಡ ೧೦೧ ವಿರಕ್ತರ ಸಂಖ್ಯಾ ನಿರ್ಣಯ ಅಧಿಕೃತವಾ ಗಿಲಾಗಿಲ್ಲ. ಹಾಗಿದ್ದರೆ ಅವನು ಹೇಳುವ ಕರಸ್ಥಲದ ವೀರಣ್ಣೊಡೆಯನ ಹೆಸರು 'ನೂರೊಂದು ವಿರಕ್ತರ ಕಾವ್ಯದಲ್ಲಿ ಏಕಿಲ್ಲ ? ಪ್ರೌಢರಾಯನ ಕಾವ್ಯದಲ್ಲಿ ಅದೃಶ್ಯ ಕವಿ ಹೇಳುವ 'ಕಲ್ಲು ಮಠದ ಪ್ರಭುವರ'ನ ಹೆಸರು ಚೆನ್ನಬಸವ ಪುರಾಣದಲ್ಲಿ ಏಕೆ ಬಂದಿಲ್ಲ ? ಈ ಸಮಸ್ಯೆಗಳಿಗೆ ಸಮಾಧಾನ ಇನ್ನೂ ದೊರಕಿಲ್ಲ. ಇವರು ತಮಗೆ ಗೊತ್ತಿರುವಷ್ಟು ಹೆಸರುಗಳನ್ನು ಹೇಳುತ್ತ ಬಂದಿರುವದೇ ಇದಕ್ಕೆ ಕಾರಣ. ಇವರಾರಿಗೂ ೧೦೧ ರ ಸಂಖ್ಯೆ ನಿರ್ಧಿಷ್ಟವಾಗಿ ತಿಳಿದಿಲ್ಲ. ಇದರಿಂದಾಗಿ ಕೆಲವು ಹೆಸರುಗಳು ಕೆಲವು ಕಡೆ ಹೊಸದಾಗಿ ಸೇರಿವೆ. ಕೆಲವು ಇದ್ದುವು ಕೈಬಿಟ್ಟು ಹೋಗಿವೆ. ಚಾಮರಸನ ಹೆಸರು ಕೈಬಿಟ್ಟು ಹೋದ ಹೆಸರುಗಳಲ್ಲಿ ಒಂದಾಗಿದೆ. ಆದರೂ ಅವನು ವಿರಕ್ತನೇ ಹೌದು. ಕಲ್ಯಾಣ ಕ್ರಾಂತಿಯ ಶರಣರ ಮಾಲಿಕೆಯಲ್ಲಿ ಅಗ್ರಗಣ್ಯನಾದ ಬಸವಣ್ಣನ ಹೆಸರೇ 'ಸಹಸ್ರಗಣನಾಮ'ದಲ್ಲಿ ಇಲ್ಲವೆಂದ ಮಾತ್ರಕ್ಕೆ ಅವನು ಸಹಸ್ರ ಗಣರಲ್ಲಿ ಒಬ್ಬನಲ್ಲವೆನ್ನಬಹುದೇ ? ಹಾಗೆಯೇ ಚಾಮರಸ, ಕಲ್ಲುಮಠದ, ಪ್ರಭುದೇವ, ಮಗ್ಗೆಯ ಮಾಯಿದೇವರ ಹೆಸರುಗಳು ಅಲ್ಲಿ ಕಾಣಿಸದೆ ಇದ್ದರೂ, ತತ್ವತಃ ಇವರನ್ನು ನೂರೊಂದು ವಿರಕ್ತರ ಗುಂಪಿಗೇ ಸೇರಿಸುವುದು ಸೂಕ್ತವೆನಿಸುತ್ತದೆ.

ನೂರೊಂದು ವಿರಕ್ತರು ಅಸಾಮಾನ್ಯ ವಿಭೂತಿ ಪುರುಷರು. "ಶಿವನ ಬೆಸನವನಾಂತು ಭುವನಕೆ ಅವತರಿಸಿ ಮೀಸಲಳಿಯದ ಲಿಂಗ ನಿಷ್ಠೆಯನು ಪ್ರಭುವಿಗೆ ತೋರಿದವರು" (ನೂ. ವಿ. ಕಾ) "ಕೈಲಾಸದಿಂದಿಳೆಗೈತಂದು ಜಂಗಮ ಸ್ಥಲವನಂಗೀಕರಿಸಿದವರು" (ಚೆ. ಬ. ಪು.) "ಪರಶಿವನಾಜ್ಞೆಯಿಂ ಕೈಲಾಸದಿಂದ ಮರ್ತ್ಯಲೋಕಕ್ಕೆ ದಯಮಾಡಿಸಿ ಲೀಲೆಯ ಮಾಡಿ ಶಿವಭಕ್ತಿಯಂ ನೆಲೆಗೊಳಿಸಿದವರು (ನಿ. ವ. ರ.). ಸ್ವರ ಏಕೋತ್ತರ ಶತಸ್ಥಲ ಟೀಕೆಯೊಂದರಲ್ಲಿ ಒಟ್ಟು ಶರಣರನ್ನು, ಆದ್ಯರು, ವೇದ್ಯರು, ಸಾಧ್ಯರು ಎಂದು ವರ್ಗೀಕರಿಸಿ ಬಸವಾದಿ ಪ್ರಮಥರು ಆದ್ಯರೆಂದೂ, ಕೋಲ ಶಾಂತಯ್ಯ, ಕುದುರೆ ಶಾಂತಯ್ಯ, ಮಂಚದ ಶಾಂತಯ್ಯ. ಸರವಿ ಶಾಂತಯ್ಯ ಮೊದಲಾದವರು ಚಿನ್ನಬಣ್ಣದ ಹಾಂಗೆ ತಮ್ಮ ವಸ್ತುವಿಗೂ, ತಮಗೂ ಭೇದವಿಲ್ಲದಂತೆ. ನೂರೊಂದು ಸ್ಥಳ-ಕುಳ ಆಚರಣೆಯ ಆಚರಿಸಿದಂಥ ನೂರೊಂದು ವಿರಕ್ತರು ವೇದ್ಯರೆಂದೂ, ಗುಮ್ಮಳಾಪುರದ ಸಿದ್ಧಲಿಂಗ ಸ್ವಾಮಿಗಳು ಚೆನ್ನಂಜೆ ಸ್ವಾಮಿಗಳು ಸಾಧ್ಯರೆಂದೂ ವಿನೂತನವಾಗಿ ವರ್ಣಿಸಲಾಗಿದೆ.

ಅಲೌಕಿಕ ವ್ಯಕ್ತಿತ್ವ— ನೂರೊಂದು ವಿರಕ್ತರಲ್ಲಿ ಹಲ್ಲವರ ಲೀಲೆಗಳು ಅವರ "ವಿಪರೀತ ಚರಿತ"ಕ್ಕೆ ಕಾರಣವಾಗಿ ಹೆಚ್ಚು ರಂಜಕವಾಗಿ ಕಂಡರೂ ಅಲ್ಲಿ ಅವರ ಸಹಜಾಚರಣೆಗಳು ಲಿಂಗಾಂಗಸಾಮರಸ್ಯದ ಒಂದೊಂದು ಸಂಕೇತಗಳಾಗಿವೆ. ಹೇಟೆಯ ಕಾಳಗವೇ ಕಾಯಕವಾಗಿದ್ದ ಹೇಟೆಯ ಮಗುಳನೆಂಬ ವಿರಕ್ತನಿಗೆ ಪ್ರೌಢದೇವರಾಯನು "ಕೋಳಿಯ ಒಡನಾಟ ನಿಮಗೇಕೆ"ನ್ನಲು "ಕೋಳಿಯು ಉದಯ ಕಾಲವ ಬಲ್ಲದು" ಎಂದು ಉತ್ತರಿಸಿ ಅದರೊಡನೆ ನಿರ್ವಯಲಾಗುತ್ತಾನೆ. ಟಗರ ಕಾಳಗದ ಪ್ರಭುವಿಗೆ ಪ್ರೌಢರಾಯನು ಆ ತೂಕದ ಬಂಗಾರ ಕೊಡುವದಾಗಿ ಹೇಳಿದರೂ ತನ್ನ ಟಗರವನ್ನು ಕೊಡುವದಿಲ್ಲ. ಅದು ಅವನ ಪ್ರಾಣವಾಗಿತ್ತು. ಬಾಲ ಲಿಂಗಣ್ಣನು ಪ್ರಾಣಲಿಂಗಾನುಸಂಧಾನಿಯೆಂಬುದನು ಕರಸ್ಥಲ ವೀರಣ್ಣೊಡೆಯ ಅವನ ಪ್ರಸಾದ ಮಹಿಮೆಯಿಂದರಿಯುತ್ತಾನೆ. ಕಾಲಿಗೆ ಲಿಂಗ ಕಟ್ಟಿಕೊಂಡು ವಿಜಯನಗರದ ಬೀದಿಯಲ್ಲಿ ತಿರುಗಾಡುತ್ತಿದ್ದ ಓರ್ವ ವಿರಕ್ತನು ತಾನು ಸರ್ವಾಂಗಲಿಂಗಿಯೆಂಬುದನ್ನು ಪ್ರತಿನಿಧಿಸುತ್ತಾನೆ. ಶಿವನು ತ್ರಿಪುರದಹನ ಕಾಲಕ್ಕೆ ಕನಕಾದ್ರಿಯನ್ನು ಬಿಲ್ಲನ್ನಾಗಿಸಿಕೊಂಡುದುರ ದ್ಯೋತಕವಾಗಿ ಮಿಡಿಬಲ್ಲ ಶಾಂತನು ಬಿಲ್ಲು ಬಾಣದೊಡನೆ ನಿರ್ವಾಣ ಪದಲೀಲೆ ಮೆರೆಯುತ್ತಾನೆ. ಲಿಂಗ ಪತಿಯ ಭೋಗಕ್ಕೆಂದು ಮೀಸಲು ಮಂಚವನ್ನು ತಲೆಯ ಮೇಲೆ ಹೊತ್ತು ತಿರುಗಿ ತಾನು ಶರಣ ಸತಿಯಂತೆ ಆಚರಿಸಿ ತೋರಿದ ಮಂಚದ ಶಾಂತ, ಪ್ರಭು ಮದ್ದಳೆ ಬಾರಿಸಿ ಮಾಯೆಯನ್ನೋಡಿಸಿದಂತೆ ತಾನೂ ಮದ್ದಳೆ ಬಾರಿಸುತ್ತ ಲಿಂಗದೊಳಾಡಿ ತೋರಿದ ಮದ್ದಳೆ ಶಾಂತ, ಪರಮಾತ್ಮನು ಡಮರುಧಾರಿಯಾಗಿ ಶಬ್ದಪ್ರಪಂಚವನ್ನು ಹುಟ್ಟಿಸಿದಂತೆ ಶರಣರ ಮುಕ್ತಿ ಮಾರ್ಗದ ಭವಿಷ್ಯ ನುಡಿವ ಬುಡುಬುಡುಕೆಯ

ಶಾಂತ "ಏಕೋದೇವ ಶಿವ"ನೆಂದು ಸಾರುತ್ತ ನಡೆದ ಡಂಗುರ ಶಾಂತ, ನ್ಯಾಯ ನಿಷ್ಠುರಿ ದಾಕ್ಷಿಣ್ಯಪರನಲ್ಲದ ಖಂಡಣಿ ಶಾಂತ. ಶಿವದ್ರೋಹಿಗಳನ್ನು ಸಂಹರಿಸ ಲೆಂದು ಆಯುಧ ಧರಿಸಿದ ಸಾಣಿ ಖಂಡಿಯ ಶಾಂತ. ಕರಣಾದಿ ಗುಣಗಳನ್ನು ಬೇರು ಸಹಿತ ಕಿತ್ತೊಗೆದ ಮದ್ದಾನಿ ಶಾಂತ. ಅನಾದಿ ಪರಶಿವನೇ ಕಿರಾತನಾಗಿ ಲೀಲೆ ನಡೆಸಿದ ಸಂಕೇತವಾಗಿ ಆ ವೇಷದಲ್ಲಿಯೇ ಮೆರೆವ ಸಿಂಗಾಡಿ ಶಾಂತ, ವಿಷ್ಣುವು ಚಕ್ರಾಯುಧವನ್ನು ಧರಿಸಿ ದನುಜರನ್ನು ಸಂಹರಿಸಿದಂತೆ ಚಕ್ರದಿಂದ ಮುಂದಿದ್ದ ವಟವೃಕ್ಷವನ್ನು ಭೇದಿಸಿ ಬಯಲಾದ ಚಕ್ರದ ಶಾಂತ, ಜೀವಿಗಳನ್ನು ಗೊಂಬೆ ಮಾಡಿಸಿ ಆಡುವ ಸೂತ್ರಧಾರಿ ಪರಶಿವನಂತೆ ಗೊಂಬೆಗಳಿಗೆ ಜೀವ ತುಂಬಿ ಆಡಿದ ಬೊಂಬೆ ಕಟ್ಟಿ ಮೆರೆಸುವ ಶಾಂತ, ಅಂತರಂಗವು ಲಿಂಗವಾದ ಶರಣನ ಹೊರ ವೇಷವೆಂತಿದ್ದರೇನೆಂದು ಕಾಸಿ ಚಲ್ಲಣವನ್ನುಟ್ಟು ಅರಮನೆಯ ಜಗಜಟ್ಟಿ ಗಳನ್ನು ಸೋಲಿಸಿದ ಜಟ್ಟಿ ಶಾಂತ. ಪರಶಿವನು ತಾಂಡವನೃತ್ಯ ಮಾಡುವಾಗಿನ ವೇಷ ಧರಿಸಿ ಮೆರೆದ ಡೊಂಬರ ಶಾಂತ, ಲಲನಾ ಸಂಗಕ್ಕೆ ಭ್ರಮಿಸದೆ ಕುಂಡಲಿನಿಯ ಬ್ರಹ್ಮಾನಂದದಲ್ಲಿ ಇಂದ್ರಿಯಗಳನ್ನು, ದಹಿಸಿದ ವರ್ದ್ಧೀಂದ್ರಿಯದ ಶಾಂತ. ಸಕಲ ರಾಗಗಳನ್ನು ಹಾಡುತ್ತ ಖೇಚರ ಮಾರ್ಗದಲ್ಲಿ ನಡೆದ ಗುರು ಬಸವೇಶ್ವರ, ಇಂತಿ ವರಲ್ಲದೆ ಇನ್ನೂ ಅನೇಕ ಶಾಂತರಾದ ಬಿಸಿನೀರಿನ ಶಾಂತ, ಇದ್ದಲಿ ಶಾಂತ, ಕುದುರೆ ಶಾಂತ, ಮರವಿಕ್ರಯಿಪ ಶಾಂತ, ಚಕ್ಕಿ ಶಾಂತ, ಬೊಗರಿ ಶಾಂತ, ಕೋಲ ಶಾಂತ, ಬಾಲಗಸಿ ಶಾಂತ, ಎಚ್ಚರನೀವ ಶಾಂತ, ಬಯಲ ಶಾಂತ ಮೊದಲಾದ ಶಾಂತ ಮೂರುತಿಗಳ ಒಂದೊಂದು ವೇಷ ಆವೇಷಗಳಿಂದ ಲೋಕದ ಕಣ್ಣಿಗೆ ಮರುಳಾಗಿ ತೋರಿದರೂ ಅವರು ಅಘಟಿತ ಘಟನಾ ನೂತನ ಬ್ರಹ್ಮರಾಗಿ ಅಂತ ರಂಗದಲ್ಲಿ ಅರಿವು ಬಹಿರಂಗದಲ್ಲಿ ಕ್ರಿಯೆಗಳೆರಡೊಂದಾಗಿ ಬಾಳಿ ನೂರೊಂದು ಸ್ಥಲದಾಚರಣೆಯಲ್ಲಿ ನಿಜವ ಕಂಡ ನಿರಂಜನರಾಗಿದ್ದಾರೆ. ನಿಶ್ಚಿಂತರಾಗಿದ್ದಾರೆ.

**ಸಾಹಿತ್ಯ ಸೃಷ್ಟಿ—** ನೂರೊಂದು ವಿರಕ್ತರಲ್ಲಿ ಕೆಲವರು ತಮ್ಮ ಶಿವಯೋಗಾನುಭವದ ನಿಬ್ಬೆರಗಿನಲ್ಲಿ ಲೋಕವನ್ನೇ ಮರುಳುಗೊಳಿಸುವ ಮಹಾತ್ಮ ರಿದ್ದರೆ, ಹಲವರು ಅನುಭಾವ ಕವಿಗಳಾಗಿದ್ದಾರೆ. ಸಾಹಿತ್ಯ ಸೃಷ್ಟಿಯಲ್ಲಿ ಪಾಲು ಗೊಂಡ ವಿರಕ್ತರಲ್ಲಿ ಪ್ರಸಿದ್ಧರೆಂದರೆ ಕರಸ್ಥಲದ ನಾಗಿದೇವ, ಸಪ್ತ ಕಾವ್ಯದ ಗುರುಬಸವ, ನಿರ್ವಾಣಿ ಬೋಳೇಶ, ಬತ್ತಲೇಶ್ವರ ಇತ್ಯಾದಿ. ಚಾಮರಸ, ಕಲ್ಲು ಮಠದ ಪ್ರಭುದೇವರನ್ನು ನೂರೊಂದು ವಿರಕ್ತರ ಗುಂಪಿನಿಂದ ಹೊರಗು ಮಾಡಿ ದಾಗಲೂ, ಉಳಿದ ಮಹಾನುಭಾವರು ಕನ್ನಡಕ್ಕೆ ಸಲ್ಲಿಸಿದ ಕಾಣಿಕೆ ಅಲ್ಪವೇನಲ್ಲ.

ನೂರೊಂದು ವಿರಕ್ತರಲ್ಲಿ ಆದಿಯೂ, ಅಗ್ರಗಣ್ಯನೂ ಆದವನು ಕರಸ್ಥಲದ ನಾಗಿದೇವ. ಈತ, ಕರಸ್ಥಲದ ವೀರಣ್ಣೊಡೆಯರ ಕರಕಮಲ ಸಂಜಾತ. ಒಮ್ಮೆ

ವೀರಣ್ಣೊಡೆಯರು ಪುಷ್ಪವಾಟಿಕೆಗೆ ಹೋಗಿರಲು ನಾಗಿದೇವನು "ಮೂರಿಡೆಯಲ್ಲಿ ಮಲವ ಬಿಟ್ಟು" ಅಲ್ಲಿದ್ದ ತರುಣಿಗೆ "ನಿಮ್ಮೊಡೆಯರು ಮಲಕ್ಕೊಳಗಾದರೆ ಇಲ್ಲಿಯೇ ಇರಲಿ ಇಲ್ಲದಿದ್ದರೆ ಎಮ್ಮ ಕೂಡೆ ಬರಲಿ" ಎಂದು ಹೇಳಿ ಹೋಗು ತ್ತಾನೆ. ಒಮ್ಮೆ ವಿದ್ಯಾನಗರಿಯಲ್ಲಿ ಭಿಕ್ಷಕ್ಕೆಂದು ಹೋದಾಗ ಹುಚ್ಚರಾಹುತನ ಸತಿ ತನ್ನನ್ನೇ ಕೈಕೊಂಬುದೆನ್ನುತ್ತಾಳೆ. ಅಲೌಕಿಕನಾದ ನಾಗಿದೇವ ಅವಳ ಕೂಡಿರುವದನ್ನು ರಾಹುತ ಕಂಡು ಖಡ್ಗದಿಂದಿರಿಯಲು ಅಲಗು ಕಿತ್ತಿ ಬಂದರೂ ಗಾಯವೇ ಆಗಿರುವದಿಲ್ಲ. ನಾಗಿದೇವ "ನೀನೊಂದು ಭಿಕ್ಷವನಿತ್ತೆ ಮೆಚ್ಚಿ ಇವಳೊಂದು ಭಿಕ್ಷವನಿತ್ತಳು. ಇದರೊಳಗೆ ಹೆಚ್ಚು ಕುಂದಿಲ್ಲೆಮಗೆ" ಎನ್ನುವನು. ಪ್ರೌಢದೇವೇಂದ್ರನ ಅರಮನೆಯಲ್ಲಿ ಪೂಜೆಗೊಂಡ ಪ್ರತಿಷ್ಠಿತ ವಿರಕ್ತ ಕವಿ ಗುರುಬಸವನಿದ್ದಲ್ಲಿಗೆ ನಾಗಿದೇವ ಹೋಗಿ ಅವನ ಆಡಂಬರದ ಪೂಜೋಪಕರಣ ಗಳಲ್ಲಿ ಒಂದಾದ ದಂಡಿಗೆಯನ್ನೆತ್ತಿ ನೆಲಕ್ಕಪ್ಪಳಿಸಲು ಧ್ಯಾನದಿಂದೆಚ್ಚತ್ತ ಗುರುಬಸವ "ಏನು ಮಾಡಿತ್ತು ದಂಡಿಗೆ?" ಎಂದು ಕೇಳಿದರೆ 'ಲಿಂಗವ ಬಿಟ್ಟು ನಿನ್ನ ಧ್ಯಾನವೆಲ್ಲಿತ್ತು'? ಎಂದು ನಾಗಿದೇವ ಪ್ರಶ್ನಿಸಿ ನಿರಾಡಂಬರ ಪೂಜೆಯ ಹೊಲಬುದೋರುವನು. ಇನ್ನೊಂದು ಸಂದರ್ಭದಲ್ಲಿ ವಿಜಯನಗರದ ವಿರಕ್ತರೆಲ್ಲರೂ ಸೇರಿ 'ಸಿಂಗಾರ ತೋಟ'ಕ್ಕೆ ಹೋದಾಗ ಅಲ್ಲಿನ ತೆಂಗಿನಮರದ ಎಳಗಾಯಿ ಗಳನ್ನು ಕಂಡು ಅವುಗಳ ನೀರು ತಮ್ಮ ಲಿಂಗಕ್ಕರ್ಪಿತವಾದುವೆನ್ನುತ್ತಾರೆ. ತೋಟಗನು ಅವನ್ನು ಇಳಿಸಿ ತಂದು ಒಡೆದುನೋಡಲು ನಾಗಿದೇವನೊಬ್ಬನು ಹೇಳಿದ ಕಾಯಿಯೊಳಗಿನ ನೀರು ಮಾತ್ರ ಬತ್ತಿ ಉಳಿದ ಕಾಯಿಗಳಲ್ಲಿ ನೀರಿ ರುತ್ತದೆ. ಕರಸ್ಥಲದ ವೀರಣ್ಣೊಡೆಯನು ಅವನ ದೃಷ್ಟಿಯೋಗಕ್ಕೆ ಬೆರಗಾಗಿ "ನಾಗಿದೇವನ ತೆರದೊಳು ಕ್ರಿಯೆಗಳಿಂತು ನಡೆಯಬೇಕು. ಭಕ್ತಿ ಎರಡಕ್ಕೆ ಬಿಟ್ಟ ಕರುವಂತಾಗಬಾರದೆಂದು" ಶರಣರಿಗೆ ವಿವರಿಸುವನು. ಹೀಗೆ ನಾಗಿದೇವನ ಜೀವನದ ಪರಿಯೊಂದು ಬೆಡಗಾಗಿದೆ. ಅಂತೆಯೇ ಅವನ ಸಾಹಿತ್ಯದಲ್ಲೂ ಬೆಡಗು ಹೆಚ್ಚಿದೆ. ಕರಸ್ಥಲದ ನಾಗಿದೇವ ತ್ರಿವಿಧಿ, ಅಕ್ಷರದ ಚೌಪದಿ, ಏಕವಿಂಶತಿ ದೀಕ್ಷಾ ವಿಧಾನ, ಮಡಿವಾಳಯ್ಯನ ತಾರಾವಳಿ, ವಚನಗಳು, ಹಾಡುಗಳು ಇವು ಈತನ ಕೃತಿಗಳಾಗಿವೆ. "ಗುರುಶಾಂತ" ಇವನ ಮುದ್ರಿಕೆ. "ಉಟ್ಟಸೀರೆಯ ಬಿಟ್ಟು ಉಣ್ಣದೂಟವನುಂಡು" (ತ್ರಿವಿಧಿ) ಎಂಬಲ್ಲಿ ನಾಗಿದೇವನು ಅಜ್ಞಾನದ ಪರದೆಯನ್ನು ಹರಿದು ಲೋಕದ ಹಂಗಿನೂಟವನೊಲ್ಲದೇ ಶುದ್ಧ-ಸಿದ್ಧ-ಪ್ರಸಿದ್ಧ ಪ್ರಸಾದವನ್ನು ಸ್ವೀಕರಿಸಿ ನಿತ್ಯಸುಖಿಯಾಗುವ ವಿವರ ತಿಳಿಸಿದ್ದಾನೆ. ಗುರು-ಬಸವನು ರಾಜಯೋಗ, ಶಿವಯೋಗ ವಿದ್ಯಾಪರಿಣಿತನೂ, ತರ್ಕಶಾಸ್ತ್ರಕೋವಿದನೂ, ವೇದವೇದಾಂತದ ಶ್ರೀರೋಹಣಗಿರಿಯಾದ ಶ್ರಿಂಗೇರಿಯ ಶಾರದಾ ಪೀಠವನ್ನೇರಿ ೧೫ ನೆಯ ಶತಮಾನದ ಅದ್ವೈತಿಗಳನ್ನು ತನ್ನ ಪಾಂಡಿತ್ಯದಿಂದ ಅಚ್ಚರಿಗೊಳಿಸಿ ಅದ್ವೈತ ಸಿದ್ಧಾಂತವನ್ನು ಷಟ್‌ಸ್ಥಲ ಜ್ಞಾನಕ್ಕೆ ಅಳವಡಿಸಿ ಹೇಳಿದ

ಮಹಾ ವಿರಕ್ತನೂ ಆಗಿದ್ದಾನೆ. ಶಿವಯೋಗಾಂಗ ವಿಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ, ಮನೋವಿಜಯವೆಂಬ ಏಳು ಕಾವ್ಯಗಳನ್ನು ರಚಿಸಿ 'ಸಪ್ತಕಾವ್ಯದ ಗುರುಬಸವನೆಂದು' ನಾಮಾಂಕಿತನಾಗಿದ್ದಾನೆ. ಇವಲ್ಲದೆ ವಚನ ಹಾಗೂ ಹಾಡುಗಳನ್ನು ಕೂಡ ಇವನು ಬರೆದಿದ್ದಾನೆ. ಇವನ ಕೃತಿಗಳಿಗೆ ಸಂಗೀತದ ಸ್ವರ ಮೇಳವಿರುವದು ಅಪೂರ್ವ ಸಂಗತಿಯಾಗಿದೆ. ನೂರೊಂದು ವಿರಕ್ತರಲ್ಲಿ ಬತ್ತಲೇಶ್ವರನು ರಾಮಾಯಣವನ್ನು ರಚಿಸಿದ ಸಂಗತಿ ಆಶ್ಚರ್ಯವನ್ನು ಮಾಡುತ್ತಿದ್ದರೂ ಅದು ಅವನು ಪೂರ್ವಾಶ್ರಮದಲ್ಲಿ ಪೂರೈಸಿದ ಕೃತಿ. ಅವನು ಮೊದಲು ಸಂಸಾರಿಯಾಗಿ, ನಂತರ ಶಿವಯೋಗಿಯಾಗಿ ಹಾಡುಗಳನ್ನು ಬರೆದಿರುವನು.

ವಾಗ್ಗೇಯ ಪಂಥ— ನೂರೊಂದು ವಿರಕ್ತರು ಸ್ವತಂತ್ರ ಕೃತಿಗಳನ್ನು ರಚಿಸಿದಂತೆ ಸ್ವಯಂ ಪೂರ್ಣ ಹಾಡುಗಳನ್ನು ರಚಿಸಿರುವರೆಂಬ ಸಂಗತಿ ಅನೇಕರಿಗೆ ಗೊತ್ತಿಲ್ಲ. ಕಾರಣ ಅವು ಇನ್ನೂ ಒಂದೆಡೆ ಸಂಕಲನಗೊಂಡು ಪ್ರಕಟವಾಗಿಲ್ಲದಿರುವದೇ ಆಗಿದೆ. ಕರಸ್ಥಲದ ನಾಗಿದೇವ, ನಿರ್ವಾಣಿ ಬೋಳೇಶ, ಬತ್ತಲೇಶ್ವರ ಇವರು ರಾಗ, ತಾಳಲಯಬದ್ಧವಾದ ಹಾಡುಗಳ ರಚಕರಾಗಿದ್ದಾರೆ. ಆಯಾ ಪದಗಳಿಗೆ ಅವರವರ ಅಂಕಿತ ಅವುಗಳ ಕೊನೆಯಲ್ಲಿದ್ದು ಬಹುಮಟ್ಟಿಗೆ ದಾಸರ ಉಗಾಭೋಗ ಸಂಪ್ರದಾಯಕ್ಕೆ ಮೊದಲಾಗಿರುವದನ್ನು ಕಾಣುತ್ತೇವೆ. ಮಧುಮಾಧವಿ ಭೂಪಾಳಿ, ಶಾಂತಮುಲಹರಿ, ಧನ್ಯಾಸಿ, ದೇಶಿ, ಭೈರವಿ, ಮಂಗಳಕಾಶಿ, ವಸಂತ ಗುಂಡಶ್ರೀ, ಕನ್ನಡ ಗೌಳ ಮೊದಲಾದ ರಾಗಗಳನ್ನು ಅವರು ಹೆಸರಿಸಿದ್ದಾರೆ. ಅವು ಅತ್ತ ದಕ್ಷಿಣಾದಿ ಇತ್ತ ಉತ್ತರಾದಿ ಥಾಟಗಳೆರಡನ್ನೂ ಆಶ್ರಯಿಸುತ್ತವೆ. ದೇಸಿ ನಿಷ್ಠವಾದ ಚೌಪದ, ಸಾಂಗತ್ಯಗಳ ಶೈಲಿ ಅವುಗಳದಾಗಿದೆ. ತಮಿಳಿನ ತಿರುಜ್ಞಾನ ಸಂಬಂಧರ ಭಕ್ತಿಗೀತೆಗಳಾದ ತೇವಾರಂ, ತೆಲುಗಿನ ತಾಳ್ಲಪಾಕಂ ಪಾಡುಗಳು ಹಾಗೂ ಕನ್ನಡದ ಹರಿದಾಸದ ಕೀರ್ತನಗಳೊಂದಿಗೆ ನೂರೊಂದು ವಿರಕ್ತರ ಹಾಡುಗಳು ಉಪಲಬ್ಧವಾಗಿರುವ ಸಂಗತಿ ದ್ರಾವಿಡ ಭಕ್ತಿ ಪಂಥದ ವಾಗ್ಗೇಯಕಾರರ ಚರಿತ್ರೆಯಲ್ಲಿ ಈಗ ಹೊಸ ವಿಷಯವಾಗಿದೆ. ಕರ್ನಾಟಕ ಸಂಗೀತದ ಪಿತಾಮಹರೆನ್ನಿಸಿದ ಪುರಂದರದಾಸರು ತಮ್ಮ ಕೀರ್ತನೆಗಳನ್ನು ರಚಿಸುವದಕ್ಕಿಂತ ಪೂರ್ವದಲ್ಲಿಯೇ ಕನ್ನಡದಲ್ಲಿ ನೂರೊಂದು ವಿರಕ್ತರು ವೈವಿಧ್ಯ ಪೂರ್ಣವಾದ ಹಾಡುಗಳನ್ನು ರಚಿಸಿ ಸಾಹಿತ್ಯಕ್ಕೆ ಸಂಗೀತದ ಸಂಸ್ಕಾರ ನೀಡಿದ್ದಾರೆ. ಕನ್ನಡದಲ್ಲಿ ದಾಸವರೇಣ್ಯರು ದೇವರ ನಾಮ, ಉಗಾಭೋಗ, ಕೀರ್ತನೆ ಸುಳಾದಿಗಳನ್ನು ರಚಿಸಿರುವದರಿಂದ ಅವರೇ ಇಡೀ ಕೀರ್ತನ ಸಾಹಿತ್ಯದ ವಿಸ್ತಾರವನ್ನು ಹೆಚ್ಚಿಸಿದರು ಎಂಬ ಸಾಮಾನ್ಯ ತಿಳುವಳಿಕೆ ಕೆಲವರಿಗಿದೆ. ಆದರೆ ನೂರೊಂದು ವಿರಕ್ತರ ಹಾಡುಗಳನ್ನು ಸಂಶೋಧಿಸಿದರೆ ಕನ್ನಡದ ಜನವಾಣಿಯನ್ನು ಕನ್ನಡ ಲಯದ

ಕರ್ಣಾನಂದಕರವಾದ ಸೊಬಗನ್ನು ಅನುಭಾವದ ವಿಷಯಕ್ಕೆ ಹೊಂದಿಸಿ ಹಾಡುಗಬ್ಬದ ಸಂಭ್ರಮವನ್ನು ಸೃಷ್ಟಿಸಿದವರು ವೀರಶೈವ ಕವಿಗಳೆಂಬುದು ಸ್ಪಷ್ಟವಾಗುತ್ತದೆ. ಈ ಪರಂಪರೆ ನಿಜಗುಣರಂತಹ ಆದ್ಯರ್ಕಳಿಂದ ಆರಂಭವಾಗಿ ನೂರೊಂದು ವಿರಕ್ತರ ಕಾಲಕ್ಕೆ ಸಮೃದ್ಧಿಯ ಗಡುವನ್ನು ಮುಟ್ಟಿತು. ನೂರೊಂದು ವಿರಕ್ತರು ರಚಿಸಿದ ಹಾಡುಗಳು ಎಷ್ಟು ವೈವಿಧ್ಯ ಪೂರ್ಣವಾಗಿವೆಯೆಂಬುದಕ್ಕೆ ಅವರ ಕೆಲವು ಪದ-ಪಲ್ಲವಿಗಳನ್ನಿಲ್ಲಿ ಉದಾಹರಿಸಬಹುದು.

ಯೋಗದ ಹಾಡು

ಆರುಬಲ್ಲರು ಶಿವಯೋಗದ ನೆಲೆಯ
ಊರಿಂದ ಹೊರಗಾದನಾಮಿಕಗಲ್ಲದೆ (ಕರಸ್ಥಲದ ನಾಗಿದೇವ)

ಶರಣಸತಿ-ಲಿಂಗಪತಿ ಭಾವದ ಹಾಡು

ಆದಿ ಮದವಣಿಗಂಗೆ ಬ್ರಹ್ಮದ ಬಾಸಿಂಗ
ನಾದಿ ಮದವಳಿಗೆಗಾತ್ಮ ತೊಂಡಿಲಕಟ್ಟಿ
ವೇದವರಿಯದಾದಿಯ ಸಾಕ್ಷಿಯ ನಿಟ್ಟು
ಸಾದರದಿಂ ಕೈಗೂಡಿಸಿದರು (ನಿರ್ವಾಣಿ ಬೋಳೇಶ)

ಶರಣನ ತೂರ್ಯಾವಸ್ಥೆಯ ಹಾಡು

ಕಂಡೆ ನಾನೊಂದು ಕನಸವ
ಮಂಡೆಯೊಡೆದು ಮನ ಬೇವುದ ಕಂಡೆ (ಕ. ನಾಗಿದೇವ)

ಕಣಿಯ ಹಾಡು

ಕಣಿಯ ಹೇಳಬಂದೆ ನಾನು
ಕಣಿಯ ಕೇಳೆನೀನು (ಕ. ನಾಗಿದೇವ)

ಬೆಡಗಿನ ಹಾಡು

ಒಂಟಿತಲೆಯ ಸರ್ಪಹರಿದಿದೆ ಮದ
ವೆಂಟರ ಕ್ರಮುಗಳ ನರಿದಿದೆ
ತುಂಟರ ನಾಲ್ವರನಳಿದಿದೆ ಹೋಗಿ
ಮಂಟಿಯ ಗೊಂಚಿಲಿ ಒರಗಿದೆ (ಬತ್ತಲೇಶ್ವರ)

ಸಾಂಕೇತಿಕ ತತ್ತ್ವಪದ

ಹಾರಿತೊ ಹಂಸ ಹಾರಿತೊ
ಮೂರು ನದಿಯ ದಾಟಿ ಮುಕುತಿ ರಾಜ್ಯದತ್ತ (ಬತ್ತಲೇಶ್ವರ)

ಕುಟ್ಟುವ ಹಾಡು

ನವಣೆಯ ಹಿಟ್ಟು ಕುಟ್ಟಿ ನವನೀತ ತುಪ್ಪವ ಕಾಸಿ
ತಂಬಿಟ್ಟ ತಿನಬಾ ತುಪ್ಪವ ಕುಡಿಬಾ
ತುತ್ತೂರು ತುತ್ತೂರು ತುತ್ತೂರೆಂದೆನುತ
ಕೈಯ ಕೊಳಲ ಪಿಡಿದಾಡಿಯರಾಹೊ (ನಿರ್ವಾಣಿ ಜೋಳೇಶ)

ಸ್ವಾನುಭವದ ಹಾಡು

ತನ್ನ ತಾನರಿಯಬೇಕು ತರಹರವಿರಬೇಕು
ಓಂ ನಮಃ ಶಿವಾಯೆಂದು ಪಠಿಸುತ
ಓರೆಯಿಲ್ಲದಿರಬೇಕು ಬತ್ತಲೇಶ್ವರ

ಮಕ್ಕಳ ಹಾಡು

ಐದು ಬಣ್ಣದ ಪಕ್ಷಿ ಮೈದೊಳೆವುದು ಒಂದು ಚಂದಮಾಮ
ನೆಯ್ದಿಲ ಕುಮುದವು ನೆರವಾದುದು ಒಂದು ಚಂದಮಾಮ
(ಬತ್ತಲೇಶ್ವರ)

ಕೋಲಪದ

ಕೋಲೆ ಕೋಲೆ ಕೋಲು ಸುಜ್ಞಾನದ
ಕೋಲೆಕೋಲ ಪದನ ಘನಲೀಲೆ ನೀ
ಪೇಳಂಗ ಲಿಂಗದ ಲೀಲೆ (ಕ. ನಾಗಿದೇವ)

ಕರ್ಪುರಾರತಿ ಪದ

ಕರ್ಪುರ ಮಂಟಪದೊಳಗೆ ಕರ್ಪುರ ಕುಂಭದ ಮೇಲೆ
ಕರ್ಪುರ ಜ್ಯೋತಿಯ ಬೆಳಗಿನ ಬೆಳಗು
ಕರ್ಪುರ ಮುಪ್ಪುರಯೋಗದರ್ಪಣ ಸುಜ್ಞಾನಲಿಂಗ
ಕರ್ಪುರ ನಿರ್ವಾಣಿಪ್ರಿಯ ಬೋಳೇಶಾಹೋ
(ನಿರ್ವಾಣಿ ಬೋಳೇಶ)

ವಚನಕಾರರು ಮೂಲತಃ ತಮ್ಮ ವಚನಗಳನ್ನು ಹಾಡಿನ ರೂಪದಲ್ಲೇ ಸಂಯೋಜಿಸಿದರೆಂದು ಡಾ|| ಎಲ್. ಬಸವರಾಜು ತಮ್ಮ 'ಶಿವದಾಸ ಗೀತಾಂಜಲಿ'ಯಲ್ಲಿ ಸಮರ್ಥಿಸಿಕೊಂಡಿದ್ದಾರೆ. ಇವರ ಹೇಳಿಕೆ ವಿಚಾರಾರ್ಹವಾಗಿದ್ದರೂ ಶಿವಶರಣರಲ್ಲಿ ಕೆಲವರಾದರೂ ಹಾಡಿನ ರೂಪದ ವಚನಗಳನ್ನು ಬರೆದಿರುವದು ಖಂಡಿತ. ಮಹಾಕವಿ ಹರಿಹರದೇವನು 'ಪುರಾತನರ ವಚನ ಗೀತಗಳಂ ಪಾಡುತಂ'

ಎಂದಿರುವದು ಇದಕ್ಕೆ ಸಮರ್ಥನೆ ನೀಡುತ್ತದೆ. ಆದರೆ ಇವಕ್ಕೆ ಸಂಬಂಧಿಸಿದ ಎಲ್ಲ ಪ್ರಮಾಣ ಗ್ರಂಥಗಳು ನಮಗೆ ದೊರಕುತ್ತಿರುವದು ಹದಿನೈದನೆಯ ಶತಮಾನ ದಲ್ಲಿಯೇ. ಆ ಕಾಲದ ವಚನ ಸಂಕಲನಕಾರರಾದ ಮಹಾಲಿಂಗದೇವ, ಜಕ್ಕ ಣಾರ್ಯರು ಸ್ವರ ವಚನಗಳನ್ನು ರೂಪಿಸಿದ್ದಾರೆ. ಸಪ್ತ ಕಾವ್ಯದ ಗುರು ಬಸವ, ರಾಗ ತಾಳ ನಿರ್ದೇಶನದೊಂದಿಗೆ ಷಟ್ಪದಿಗಳನ್ನು ಬರೆದಿದ್ದಾನೆ. ಕಲ್ಲಿನಾಥ, ಸಾಳ್ವಗೋಪ ತಿಪ್ಪರು ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ರಚಿಸಿದ್ದಾರೆ. ನೂರೊಂದು ವಿರಕ್ತರು ವೀರಶೈವ ಸಾಹಿತ್ಯದ ವಸಂತ ಕಾಲವೆಂದು ಹೆಸರಾದ ಹದಿನೈದನೆಯ ಶತಮಾನದಲ್ಲಿ ಅಧ್ಯಾತ್ಮದ ಕೋಗಿಲೆಗಳಾಗಿ ಹಾಡಿದ್ದಾರೆ.

## ನೂರೊಂದು ಸ್ಥಲ ಸಾಹಿತ್ಯ ಮತ್ತು ನೂರೊಂದು ವಿರಕ್ತರು

ನೂರೊಂದು ಸ್ಥಲಗಳು ವೀರಶೈವ ಶರಣನ ಸಾಧನ ಪಥದಲ್ಲಿ ಷಟ್‌ಸ್ಥಲಾಂತ ರ್ಗತವಾಗಿ ಬರುವ ಆಚರಣೆಯ ಸೋಪಾನಗಳಾಗಿವೆ. ಅಂಗಷಟ್‌ಸ್ಥಲ ೪೪, ಲಿಂಗಷಟ್‌ಸ್ಥಲ ೫೭. ಹೀಗೆ ಒಟ್ಟು ೧೦೧ ಸ್ಥಲಗಳಲ್ಲಿ ಹೇಳಿರುವ ಆಚಾರ ಕ್ರಿಯೆಗಳನ್ನು ಅನುಷ್ಠಾನಕ್ಕೆ ತರುವದರಿಂದ ಅವನು ಶ್ರೇಷ್ಠ ಶರಣನೆನ್ನಿಸಿಕೊಳ್ಳು ವನು. ಭಕ್ತಿ ಭಂಡಾರಿ ಜಕ್ಕಣಾರ್ಯನು ಗುರುಗಳಾದ ಮಹಾಲಿಂಗ ದೇವರಿಗೆ 'ಎನ್ನ ಷಡಾಂಗವು ಲಿಂಗದಲ್ಲಿ ಲೀಯವಾಗುವ ಭೇದವ ನಿರೂಪವ ಕೊಟ್ಟು ಹೇಳಿರೆನ್ನಲು' ಮಹಾಲಿಂಗ ದೇವರು 'ಅಸಂಖ್ಯಾತ ಗಣಂಗಳ ಪರಮ ವಾಕ್ಯಾ ಮೃತಮಪ್ಪ ವಚನಂಗಳಿಂದ ತತ್ ಶಿಷ್ಯಂಗೆ ಬೋಧಿಸುತ್ತಿರಲು ಆ ಷಡುಸ್ಥಲದಲ್ಲಿ, ಅಂಗಸ್ಥಲ ೪೪, ಲಿಂಗಸ್ಥಲ ೫೭ ಉಭಯಂ ಏಕೋತ್ತರ ಶತಸ್ಥಲಗಳಾದವು' ಎಂಬ ವಿಷಯ ಮಹಾಲಿಂಗ ದೇವ ವಿರಚಿತ 'ಏಕೋತ್ತರ ಶತಸ್ಥಲ' ಹೆಸರಿನ ಗ್ರಂಥಾದಿಯಲ್ಲಿ ವರ್ಣಿತವಾಗಿದೆ. ೧೦೧ ವಿರಕ್ತರು ಈ ಸ್ಥಳ-ಕುಳಗಳನ್ನಾಚರಿಸಿದ ಮಹಿಮರಾಗಿದ್ದಾರೆ. ಇದರಿಂದಾಗಿ ೧೦೧ ಪದ ವೀರಶೈವ ಷಟ್‌ಸ್ಥಲ ಪರಿಭಾಷೆ ಯಲ್ಲಿ ಸ್ಥಲವಾಚಿಯೂ, ನಾಮವಾಚಿಯೂ ಆಗಿದೆ. ನಮ್ಮಲ್ಲಿ ೬೩ ಪುರಾತನರ ಹಿಂದೆ ೬೩ ಸ್ಥಲಗಳ ವಿಚಾರವಿಲ್ಲ, ಸಹಸ್ರ ಗಣಾಧೀಶ್ವರರ ಹಿನ್ನೆಲೆಯಾಗಿ ಸಹಸ್ರ ಸ್ಥಲಗಳ ನಿರ್ದೇಶವಿಲ್ಲ. ಆದರೆ ೧೦೧ ವಿರಕ್ತರ ಕುರುಹಾಗಿ ೧೦೧ ಸ್ಥಲಗಳಿರುವ ದರಿಂದ ಅವಕ್ಕೆ ಐತಿಹಾಸಿಕ ಮಹತ್ವ ದೊರಕಿದೆ. ೧೫ ನೆಯ ಶತಮಾನದ ನೂರೊಂದು ವಿರಕ್ತರ ಪ್ರಭಾವ ಮುದ್ರೆಯಿಂದ ಕನ್ನಡದಲ್ಲಿ ೧೦೧ ಸ್ಥಲ ಸಂಬಂಧಿ ಯಾದ ಸಾಹಿತ್ಯ ರಚನೆಗೆ ಪ್ರೇರಣೆ ದೊರಕಿದೆ. 'ನೂರೊಂದು ಸ್ಥಲ', 'ನೂರೊಂದು ಸ್ಥಲ ವಚನ', 'ನೂರೊಂದು ಸ್ಥಲ ಸೂತ್ರ', 'ನೂರೊಂದು ಸ್ವರ ವಚನ', 'ನೂರೊಂದು ಸ್ಥಲಷಟ್‌ಪದಿ', ನೂರೊಂದು ಸ್ಥಲ ಶತಕಗಳು ನೂರೊಂದು ವಿರಕ್ತರಿಂದ ಮೊದಲಾದ ವೀರಶೈವ ಸಾಹಿತ್ಯದ ಪ್ರಕಾರಗಳಿವೆ.

ವೀರಶೈವ ವಚನ ಸಂಕಲನ ಹಾಗೂ ವೀರಶೈವ ಸಿದ್ಧಾಂತ ನಿರ್ಣಯದಲ್ಲಿ ೧೦೧ ಸ್ಥಲಕ್ಕೆ ಈ ದೃಷ್ಟಿಯಿಂದ ಅತಿ ಮಹತ್ವದ ಸ್ಥಾನವಿದೆ.

ಹೀಗೆ ಸಾಹಿತ್ಯ, ಸಿದ್ಧಾಂತ, ಅನುಭಾವ, ಜೀವನ ದರ್ಶನಗಳಿಂದಾಗಿ ನೂರೊಂದು ವಿರಕ್ತರ ಹೆಸರು ವೀರಶೈವ ಇತಿಹಾಸದಲ್ಲಿ ಪ್ರಭಾವ ಬೀರಿದೆ. ೧೫ ನೆಯ ಶತಮಾನದಲ್ಲಿ ನಡೆದ ವಚನ ಸಾಹಿತ್ಯದ ಪುನರುದ್ಧಾರ ಕಾರ್ಯಕ್ಕೆ ಇವರು ಕಾರಣಸ್ವರೂಪರಾಗಿದ್ದಾರೆ. ಈ ವಿರಕ್ತರು ವೀರಶೈವರಲ್ಲಿ ಒಂದು ಜಾತಿಯ ಗುಂಪಲ್ಲ, ಅವರ ಜೀವನ ತತ್ವಗಳು ವೀರಶೈವ ಸಿದ್ಧಾಂತ ತಂತ್ರದ ಸಮನ್ವಯ ಸೂತ್ರಗಳಾಗಿವೆ. ಅವರು ಕಾಲ್ಪನಿಕ ವ್ಯಕ್ತಿಗಳಲ್ಲ ಚರಿತ್ರ ಪುರುಷರು.



## ಶಿವಯೋಗ

ಬ್ರಹ್ಮರಂಧ್ರದಲ್ಲಿಪ್ಪ,ನಾದಚೈತನ್ಯವಪ್ಪ, ಪರಮ ಚಿತ್ಕಳೆಯಂ,ಭಾವ ಮನ ಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದವನಾಗಿ, ಭಾವದಲ್ಲಿ ಸತ್‌ಸ್ವರೂಪ ಮಪ್ಪ ಇಷ್ಟಲಿಂಗವೆಂದೆನಿಸಿ, ಒಂದೇ ವಸ್ತು ತನು ಮನ ಭಾವಂಗಳಲ್ಲಿ ಇಷ್ಟ ಪ್ರಾಣ ಭಾವನಾದ ಭೇದವನರಿಯದೆ ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ, ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ, ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ, ಈ ಲಿಂಗತ್ರಯವಿಡಿದು ಆಚರಿಸಿ ಲಿಂಗದೊಡನೆ ಕೂಡಿ, ಲಿಂಗವೇ ತಾನು ತಾನಾಗಿ ವಿರಾಜಿಸುತಿರ್ಪುದೀಗ ಶಿವಯೋಗ ನೋಡಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

— ತೋಂಟದ ಸಿದ್ಧಲಿಂಗ ಯತಿಗಳು

ಷಟಸ್ಥಲವನುದ್ಧರಿಸಿದ

# ತೋಂಟದ ಸಿದ್ಧಲಿಂಗಯತಿಗಳು

— ವ್ಹಿ. ಎಮ್. ಯಕ್ಕುಂಡಿಮಠ

ಪ್ರಭುದೇವರ ಅಪರಾವತಾರವೆಂದು ಪ್ರಸಿದ್ಧಿ ಹೊಂದಿದ ಮಹಾ ವೈರಾಗ್ಯ ಮೂರ್ತಿ ಅನುಷ್ಠಾನ ಸಂಪನ್ನರಾದ ತೋಂಟದ ಸಿದ್ಧಲಿಂಗ ಯತಿಗಳು ವೀರಶೈವ ಸಮಾಜೋದ್ಧಾರ ಕಾರ್ಯ ಮಾಡಿದವರು. ಏಳನೂರು ವಿರಕ್ತರನ್ನೊಳಗೊಂಡು ಷಟಸ್ಥಲ ಧ್ವಜವನ್ನು ಎತ್ತಿ ಹಿಡಿದವರು. ವೀರಶೈವವು ಖಿಲವಾಗುತ್ತಿರುವ ಹದಿನೈದನೆಯ ಶತಮಾನದ ಕೊನೆಯ ಭಾಗದಲ್ಲಿ ತೋಂಟದ ಸಿದ್ಧಲಿಂಗ ಯತಿಗಳ ಅವತಾರವಾಗದಿರ್ದಡೆ ಈ ಮಠದ ಸ್ಥಿತಿಯು ಶೋಚನೀಯವಾಗುತ್ತಿತ್ತೆಂಬುದು ನಿರ್ವಿವಾದ ಮಾತು. ಧರ್ಮ ಕ್ಷೀಣಿಸುತ್ತಿದ್ದಾಗ ಅದರ ಉದ್ಧಾರಕ್ಕಾಗಿ ಮಹಾ ಮಹಿಮರು ಜನ್ಮವೆತ್ತಿ ಬಂದು ಧರ್ಮರಕ್ಷಣೆ ಮಾಡುತ್ತಾರೆಂಬ ಮಾತಿಗೆ ಇವರ ಅವತಾರವೇ ಸಾಕ್ಷಿ. ಈ ದೃಷ್ಟಿಯಿಂದ ವಿಚಾರಿಸಿದಾಗ ವೀರಶೈವ ಸಮಾಜ ಹಾಗೂ ಧರ್ಮೋದ್ಧಾರದ ಇತಿಹಾಸದಲ್ಲಿ ಕೆಳಗಿನಂತೆ ವಿಂಗಡಣೆ ಮಾಡಬಹುದು.

೧. ಬಸವ ಪೂರ್ವಯುಗದಲ್ಲಿ ದೇವರ ದಾಸಿಮಾರ್ಯರನ್ನೊಳಗೊಂಡು ಅವರ ಪೂರ್ವದ ವಚನಕಾರರು, ಶರಣರು, ವೀರಶೈವೋದ್ಧಾರದ ಕಾರ್ಯಗೈದರು. ದಾಸಿಮಾರ್ಯರಿಗೆ ಶ್ರೀಶೈಲ ಪೀಠದ ಜಗದ್ಗುರು ಚಂದ್ರಗುಂಡದೇಶಿಕರೇ ದೀಕ್ಷಾ ಗುರುಗಳು. ಆ ಕಾಲದಲ್ಲಿ ಶ್ರೀಶೈಲ ವೀರಶೈವದ ಕೇಂದ್ರ ಬಿಂದುವಾಗಿದ್ದಿತು.

೨. ಹನ್ನೆರಡನೇ ಶತಮಾನದ ಬಸವಯುಗದಲ್ಲಿ ಅನೇಕ ಅನುಭಾವಿ ಶಿವ-ಶರಣರು, ವಚನಕಾರರು ಕಲ್ಯಾಣವನ್ನೇ ಕೇಂದ್ರ ಬಿಂದುವಾಗಿಟ್ಟುಕೊಂಡು

ಅನುಭವ ಮಂಟಪದ ಮುಖಾಂತರ ಹೆಚ್ಚಿನ ಸುಧಾರಣೆ ಹಾಗೂ ಉದ್ಧಾರ ಕಾರ್ಯ ಮಾಡಿದರು. ಈ ಕಾಲ ವಚನ ವಾಙ್ಮಯದ ಅತ್ಯುಚ್ಚ ಕಾಲ.

೩. ವಿಜಯನಗರ ಸಾಮ್ರಾಜ್ಯದ ಹದಿನೈದನೆಯ ಶತಮಾನದ ಮಧ್ಯಕಾಲ ಹಾಗೂ ಕೊನೆಯ ಕಾಲ.

೪. ಕೆಳದಿ ರಾಜರ ಕಾಲ. ವಿದ್ಯಾಪಕ್ಷಪಾತಿಗಳಾದ ಕೆಳದಿ ನೃಪವರರು ವೀರಶೈವೋದ್ಧಾರಮಾಡಿ ಪುನೀತರಾದರು.

ಹೀಗೆ ಸ್ಥೂಲವಾಗಿ ನಾಲ್ಕು ವಿಭಾಗಗಳನ್ನು ಮಾಡಿದ್ದಾಗಿದೆ.

ತೋಂಟದ ಸಿದ್ಧಲಿಂಗ ಶಿವಯೋಗಿಗಳ ಕಾಲ ಹದಿನೈದನೇ ಶತಮಾನದ ಕೊನೆಯ ಅವಧಿ. ಈ ಅವಧಿಯಲ್ಲಿ ವೀರಶೈವ ಸ್ಥಿತಿ ನಿರಾಶಾಜನಕವಾಗಿದ್ದಿತು. ಪ್ರೌಢದೇವನ ನಂತರ ಬಂದ ವಿರುಪಾಕ್ಷ ಅರಸನು ಜನರಿಗೆ ಸುಖವಾಗುವಂತೆ ರಾಜ್ಯವಾಳಲಿಲ್ಲ. ವೀರಶೈವ ಧರ್ಮವನ್ನು ಬಿಟ್ಟು ಕೊನೆಗೆ ವೈಷ್ಣವ ಧರ್ಮ ಸ್ವೀಕರಿಸಿ ಧರ್ಮಾಂತರ ಹೊಂದಿದ ಅಪವಾದವನ್ನು ಹೊತ್ತುಕೊಂಡ. ಮುಂದೆ ನರಸಣ್ಣನಾಯಕನೆಂಬ ವೈಷ್ಣವ ರಾಜನು ಪಟ್ಟಕ್ಕೆ ಬಂದನು. ಈ ಸಮಯದಲ್ಲಿ ಅನಾದಿ ಗಣೇಶ್ವರನಿಂದ ಪ್ರಾರಂಭವಾದ ಗುರು ಪರಂಪರೆಯ ಗೋಸಲ ಚನ್ನಬಸವೇಶ್ವರ ಶಿವಯೋಗಿಗಳ ಶಿಷ್ಯರಾಗಿ ತೋಂಟದ ಸಿದ್ಧಲಿಂಗ ಯತಿಗಳು ವೀರಶೈವೋದ್ಧಾರ ಕಾರ್ಯ ಮಾಡುತ್ತಾರೆ. ಈ ಮಹಿಮರ ಅವತಾರ ಕುರಿತು ನಿರಂಜನ ರತ್ನಾಕರದಲ್ಲಿಯೂ ಉಲ್ಲೇಖವಿದೆ.

"ವಾಣಿಜ್ಯಪುರದಿ ಶೂನ್ಯ ಸಿಂಹಾಸನಸ್ಥ ಗೋಸಲ ಚೆನ್ನಬಸವರಾಜೇಂದ್ರರು ಒಪ್ಪುತ್ತ ಇರ್ದ ಕಾಲದಲ್ಲಿ ಪಂಪಾ ಕ್ಷೇತ್ರದಿ ವಿದ್ಯಾನಗರಿಯನ್ನಾಳಿದ ಪ್ರೌಢ ರಾಯನು ಸಾಂಬಲೋಕಕ್ಕೆ ಹೋದ ನಂತರ ಕೆಲವು ದಿವಸದಿ ಆ ರಾಜ್ಯದಲ್ಲಿ ಅನಾಚಾರವು ಹೆಚ್ಚಾಗಿ ಶಿವಾಚಾರವಡಗಿ ಮೇಲಾಧರಣಿಯೊಳು ವೀರಶೈವಾಚಾರ ವಿಲ್ಲದೆ ಪರವಾದಿಗಳು ಘನವಾಗಲು ಕೈಲಾಸಕ್ಕೆ ನಾರದನು ಹೋಗಿ" ಪರಶಿವನಿಗೆ ಅರಿಕೆ ಮಾಡಿಕೊಳ್ಳಲು, ಆತನು ತನ್ನ ಏಳುನೂರು ನಿರಂಜನ ಗಣೇಶ್ವರರನ್ನು ಭೂಮಿಗೆ ಕಳಿಸಿದನೆಂದಲೂ ಈ ನಿರಂಜನ ಗಣೇಶ್ವರನು ಶಿಶುರೂಪ ತಾಳಿ ವಾಣಿಜ್ಯಪುರದ ಗೋಸಲ ಚನ್ನಬಸವ ಸ್ವಾಮಿಗಳವರ ವರ ಸನ್ನಿಧಾನಕ್ಕೆ ಇಳಿದ ನೆಂತಲೂ ವರ್ಣಿತವಾಗಿದೆ. ಹೀಗೆಯೇ ಅನೇಕ ಕವಿಗಳು ಶರಣರು ತೋಂಟದ ಸಿದ್ಧಲಿಂಗ ಯತಿಗಳ ಬಗ್ಗೆ ತಮ್ಮ ಪುರಾಣದಲ್ಲಿ ಅವರ ಸ್ತುತಿ ಮಾಡಿದ್ದಾರೆ. ಅವರೆಲ್ಲರೂ ಯತಿಗಳನ್ನು ಗುರುಕರಕಮಲ ಸಂಜಾತರೆಂದೇ ಸ್ತೋತ್ರ ಮಾಡಿದ್ದಾರೆ

ಹೊರತು ಅವರಿಗೆ ಜನ್ಮ ಕೊಟ್ಟ ತಂದೆ-ತಾಯಿಗಳ ವಿಷಯವಾಗಿ ಹೇಳಿಲ್ಲ. ಸ್ವತಃ ಸಿದ್ಧಲಿಂಗ ಶಿವಯೋಗಿಗಳ ವಚನಗಳಲ್ಲಿಯೂ ಈ ಬಗ್ಗೆ ತಿಳಿಯಬರುವದಿಲ್ಲ.

"ಶಿವಾಶ್ರಯದಲ್ಲಿ ಹುಟ್ಟಿ ಭವಾಶ್ರಯವ ನೆನೆವ ಭಂಡರ ಮುಖವ ನೋಡೆ, ನೋಡೆ. ಶಿವಾಶ್ರಯವೆಂದರೆ, ಶ್ರೀಗುರುವಿನ ಕರಕಮಲವೆಂಬ ಪರಿ; ಭವಾಶ್ರಯ ವೆಂದರೆ, ತನ್ನ ಹಿಂದಣ ತಾಯಿ ತಂದೆಗಳೆಂಬ ಪರಿ, ಇಂತು ಗುರುಕರಜಾತನಾಗಿ ಗುರುಕುಮಾರನಾಗಿ, ನರರ ಹೆಸರು ಹೇಳುವ ನರಕ ಜೀವಿಯ ಎನಗೊಮ್ಮೆ ತೋರ ದಿರಾ. ತಾನು ಶುದ್ಧ ನಿರ್ಮಲನಾಗಿ ಮಲಸಂಬಂಧವ ಬೆರಸುವ ಮರುಳು ಮಾನವನ ಪರಿಯ ನೋಡಾ. ಇಂತಪ್ಪ ಅಜ್ಞಾನಿಯ ಶಿಷ್ಯನೆಂದು ಕೈವಿಡಿಯ ಬಹುದೆ. ಇಂತಿವರಿಬ್ಬರ ಗುರು ಶಿಷ್ಯ ಸಂಬಂಧವ ಕಂಡು ನಾನು ಹೇಸಿದೆನು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ."

" ಗುರುವಿನಿಂದ ಉಪದೇಶವ ಪಡೆದು, ಗುರುಪುತ್ರನೆನಿಸಿಕೊಂಡ ಬಳಿಕ ಪೂರ್ವದ ತಾಯಿ-ತಂದೆಯೆಂದು, ಬಂಧುಗಳೆಂದು ಮಲ ಸಂಬಂಧವ ನೆನೆಯ ಲಾಗದು ಕಾಣಿರೋ. ಇನ್ನಿವ ನೆನೆದಿರಾದರೆ ಶಿವದ್ರೋಹ ತಪ್ಪದಯ್ಯ. ಇನ್ನು ನಿಮಗೆ ತಾಯಿ ತಂದೆಗಳ ಹೇಳಿಕೆ ಕೇಳಿರೇ. ಗುರುವೇ ತಾಯಿ, ಗುರುವೇ ತಂದೆ, ಗುರುವೇ ಬಂಧುಗಳು; ಗುರುವಿನಿಂದ ಪರವಿನ್ನಾರೂ ಇಲ್ಲವೆಂದು ನಂಬಬಲ್ಲರೆ ಶಿಷ್ಯನೆಂಬೆನಯ್ಯ, ಮಹಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ "

ಗುರುಕರಸಂಜಾತರಾದ ಮೇಲೆ ಪೂರ್ವಾಶ್ರಮದ ಎಲ್ಲ ಸಮ್ಬಂಧಗಳೂ ಕಳಚಿ ಹೋಗುತ್ತವೆ. ಈ ತತ್ವವನ್ನೇ ಕಟ್ಟುನಿಟ್ಟಾಗಿ ಅನುಸರಿಸಿದ ವೀರಶೈವ ಕವಿ ಗಳೆಲ್ಲ ಸಿದ್ಧಲಿಂಗ ಯತಿಗಳ ಬಗ್ಗೆ ಗುರುಪರಂಪರೆಯನ್ನೇ ಹೇಳಿರುವರು. ಆದರೆ ಶೈವನಾದ ಹೇರಂಬ ಕವಿಯು ತನ್ನ ಸಿದ್ಧಲಿಂಗೇಶ್ವರ ಸಾಂಗತ್ಯದಲ್ಲಿ ತಂದೆ-ತಾಯಿಗಳ ಹೆಸರನ್ನು ಹೇಳಿದ್ದಾನೆ. ಹರದನಹಳ್ಳಿಯ ಮಲ್ಲಿಕಾರ್ಜುನ ಹಾಗೂ ಜ್ಞಾನಾಂಬೆಯರೇ ಸಿದ್ಧಲಿಂಗೇಶ್ವರರ ತಂದೆ-ತಾಯಿಗಳೆಂದೂ, ಗೋಸಲ ಚನ್ನ ಬಸವೇಶ್ವರರ ವರಪ್ರಸಾದದಿಂದ ಈ ಮಗುವನ್ನು ಪಡೆದರೆಂದೂ ಕವಿ ಹೇಳಿದ್ದಾನೆ. ಹೀಗೆ ಹೇರಂಬ ಕವಿಯ ಸಾಂಗತ್ಯದಿಂದ ಇದೊಂದು ಹೆಚ್ಚಿನ ವಿಷಯ ತಿಳಿಯಲು ಅನುಕೂಲವಾಗಿದೆ.

ಜಗವನ್ನುದ್ಧರಿಸಲು ಜನ್ಮವೆತ್ತಿಬಂದ ಸಿದ್ಧಲಿಂಗ ಶಿಶು ಲೋಕದ ಮಕ್ಕಳಂತೆ ಲೌಕಿಕಜ್ಞಾನ ಬೆಳಸಿಕೊಳ್ಳಲು ಇಷ್ಟಪಡಲಿಲ್ಲ. ಶಾಲೆಯಲ್ಲಿ ಕಲಿಸುವ ಅಕ್ಷರಜ್ಞಾನ ವಿವಿಧ ವಿಷಯಗಳ ಅಭ್ಯಾಸ ಅವರಿಗೆ ಹಿಡಿಸದಾದವು. ಗುರು ಕಾರುಣ್ಯವ ಪಡೆದು ಭೂಮಿಗವತರಿಸಿದ ಈ ಶಿಶು ಪುಣ್ಯದ ಪುಂಜವಾಗಿತ್ತು. ತನ್ನನುದ್ಧರಿಸುವ

ಗುರುಕೃಪೆ ಪಡೆದು, ಮಾಡುವ ಮಣಿಹವನ್ನು ಪೂರೈಸುವ ದೃಷ್ಟಿಯಲ್ಲಿದ್ದರು. ಯಾರ ವರ ಪ್ರಸಾದದಿಂದ ಹುಟ್ಟಿದ್ದರೊ ಆ ಮಹಾಮಹಿಮನಾದ ಗೋಸಲ ಚನ್ನಬಸವೇಶ್ವರರ ಸನ್ನಿಧಿಗೆ ಐತಂದು ದೀಕ್ಷೆಯನ್ನಿತ್ತು ಕರುಣಿಸಬೇಕೆಂದು ಕೇಳಿಕೊಳ್ಳುವರು.

"ಗುರುಸಾರ್ವಭೌಮ ನೆನಿಸುವ ಚನ್ನಬಸವಯತಿ
ವರನಡಿಗೆ ವಂದನಂಗೆಯ್ದು ಕರಕಮಲವುಂ
ಹರಸದಿಂ ಮುಗಿದು ಮದ್ಗುರುವೆ ಸದ್ಗುರುವೆ ಚಿದ್ಗುರುವೆ
ಸಾಕ್ಷಾನ್ಮುಕ್ತಿಯ ||
ಕರುವೆ ಕಾರುಣ್ಯ ಸಾಗರವೆ ಚಿದ್ಘನಾ ಪರಾ
ತ್ಪರವೆ ಕಾರುಣ್ಯ ಸಾಗರವೆ ನಿತ್ಯಾನಂದ
ದಿರವೆ ಪಶುಪಾಶ ನಿರ್ಹರಣ ಕಾರಣರೂಪ ಸಲಹೆನುತಿರ್ದನು ||

ಹೀಗೆ ಗೋಸಲ ಚನ್ನಬಸವೇಶ್ವರರ ಶಿಷ್ಯರಾಗಿ ಅವರ ಸೇವೆಯನ್ನು ಅನನ್ಯಭಕ್ತಿಯಿಂದ ಮಾಡಿ ಗುರುಕೃಪೆಗೆ ಪಾತ್ರರಾಗುವರು. ಈ ಗುರು ಪರಂಪರೆಯನ್ನು ಸಿದ್ಧಲಿಂಗ ಶಿವಯೋಗಿಗಳು ತಮ್ಮ ವಚನದಲ್ಲಿಯೂ ಅಪ್ಪಣೆ ಕೊಡಿಸಿದ್ದಾರೆ.

ಅನಾದಿ ಗಣೇಶ್ವರನ ಶಿಷ್ಯ ಆದಿಗಣೇಶ್ವರ
ಆದಿಗಣೇಶ್ವರನ ಶಿಷ್ಯ ನಿರ್ಮಾಯನೆಂಬ ಗಣೇಶ್ವರ
ನಿರ್ಮಾಯನೆಂಬ ಗಣೇಶ್ವರನ ಶಿಷ್ಯರು ನಿರಂಜನನೆಂಬ ಗಣೇಶ್ವರ
ನಿರಂಜನನೆಂಬ ಗಣೇಶ್ವರನ ಶಿಷ್ಯರು ಜ್ಞಾನಾನಂದನೆಂಬ ಗಣೇಶ್ವರನು
ಜ್ಞಾನಾನಂದನೆಂಬ ಗಣೇಶ್ವರನ ಶಿಷ್ಯರು ಆತ್ಮಗಣೇಶ್ವರನು
ಆತ್ಮಗಣೇಶ್ವರನ ಶಿಷ್ಯರು ಅಧ್ಯಾತ್ಮ ಗಣೇಶ್ವರ
ಅಧ್ಯಾತ್ಮ ಗಣೇಶ್ವರನ ಶಿಷ್ಯರು. ರುದ್ರನೆಂಬ ಗಣೇಶ್ವರ
ರುದ್ರನೆಂಬ ಗಣೇಶ್ವರನ ಶಿಷ್ಯರು ಬಸವ ಪ್ರಭುದೇವರು
ಬಸವ ಪ್ರಭುದೇವರ ಶಿಷ್ಯರು ಆದಿಲಿಂಗದೇವರು
ಆದಿಲಿಂಗದೇವರ ಶಿಷ್ಯರು ಚನ್ನ ವೀರೇಶ್ವರ ದೇವರು
ಚನ್ನವೀರೇಶ್ವರ ದೇವರ ಶಿಷ್ಯರು ಹರದನಹಳ್ಳಿಯ ಗೋಸಲದೇವರು
ಹರದನಹಳ್ಳಿಯ ಗೋಸಲದೇವರ ಶಿಷ್ಯರು ಶಂಕರದೇವರು
ಶಂಕರದೇವರ ಶಿಷ್ಯರು ದಿವ್ಯಲಿಂಗದೇವರು, ದಿವ್ಯಲಿಂಗದೇವರ
ಶಿಷ್ಯರು ಚನ್ನಬಸವೇಶ್ವರ ದೇವರು; ಚನ್ನಬಸವೇಶ್ವರ ದೇವರ
ಕಲಕಮಲದಲ್ಲಿ ಉತ್ಪತ್ತಿಯಾದ ಶಿಸುಸಿದ್ಧಲಿಂಗ ನಾನಯ್ಯ
ಹೀಗೆ ಅನಾದಿವಿಡಿದು ಬಂದ ಗುರು, ಅನಾದಿವಿಡಿದು ಬಂದ ಲಿಂಗ,
ಅನಾದಿವಿಡಿದು ಬಂದ ಜಂಗಮ, ಅನಾದಿವಿಡಿದು ಬಂದ ಗುರುಶಿಷ್ಯ
ಸಂಬಂಧ, ಅನಾದಿವಿಡಿದು ಬಂದ ಪಾದೋದಕ ಪ್ರಸಾದ

ಅನಾದಿವಿಡಿದು ಬಂದ ಭಕ್ತಿ ಜ್ಞಾನ ವೈರಾಗ್ಯ, ಅನಾದಿ ಸಂಸಿದ್ಧವಾದ ವೀರಶೈವಾಚಾರ ಸಂಪತ್ತು ಮಹಲಿಂಗ ಗುರು ಶಿವಸಿದ್ಧೇಶ್ವರಪ್ರಭುವೆ. ಈ ಕ್ರಮವಿಡಿದರೆ ಅನಾದಿಗಣೇಶ್ವರರ ಗುರುಪರಂಪರೆಯಲ್ಲಿ ಸಿದ್ಧಲಿಂಗೇಶ್ವರರು ಹದಿನಾರನೆಯವರಾಗುತ್ತಾರೆ.

ಗೋಸಲ ಚನ್ನಬಸವೇಶ್ವರರ ಶಿಷ್ಯರಾದ ಸಿದ್ಧಲಿಂಗ ಯತಿಗಳಲ್ಲಿಯ ಅಸಾಧಾರಣ ಶಕ್ತಿಯನ್ನೂ ಗುರ್ತಿಸಿ ಅವರಿಗೆ ಪಟ್ಟಾಧಿಕಾರಮಂ ಮಾಡಿಕೊಟ್ಟರು. ಷಟ್‌ಸ್ಥಲೋದ್ಧಾರ ಕಾರ್ಯವನ್ನು ಪೂರೈಸಬೇಕೆಂಬ ತಮ್ಮ ಮನದಿಂಗಿತವನ್ನು ಗುರುಗಳು ಶಿಷ್ಯನಲ್ಲಿ ನಿವೇದಿಸುತ್ತಾ

"ಶಾಂತನೆ ಬಾ ಗುಣಾನ್ವಿತನೆ ಬಾ ಗುರುಭಕ್ತನಿದಾನ ಬಾ ಸದಾ
ಅಂತವೈರಿ ಬಾ ಕರುಣಿ ಬಾ ವರ ಸತ್ಯತಿ ಕಾಂತ ಬಾರೊ ಕಾ-
ಮಾಂತಕ ಬಾರೋ ಎನ್ನ ಶಿವ ಬಾ ಗುರು ಬಾ ಚರಲಿಂಗ ಬಾರೋ
ವೇದಾಂತನೆ ಬಾರೋಯೆಂದು ಗುರುಕರೆದಂ ಬಣ್ಣಿಸಿ
ಸಿದ್ಧಲಿಂಗನಂ ||೧||

ಚರಸಂತಾನವೆ ಸುಯಿಧಾನಿಯೆ ಬಾ ದ್ವೈತೆ ಬಾ ಪಂಚಾಸ್ಯ ಬಾ
ಹರ ಭಕ್ತ್ಯಾಬ್ಧಿ ಸುಧಾಮಯೂಖ ನಿಧಿ ಬಾರೆನ್ನಾಯುಷ್ಯ
ಸಂಜೀವ ಬಾ
ಧರೆಯಂ ಪಾಲಪದೇವ ಬಾ ಸುಗುಣ ಬಾ ಸಿದ್ಧೇಶ ಬಾರೆಂದು ತಂ
ಕರೆದು ಶ್ರೀಗುರು ಲಿಂಗಮೂರ್ತಿ
ಹರ್ಷಾನಂದಾಶ್ರುವಿಂದುಕ್ಕುತಂ ||೨||

ಇಂತು ಕೇಳಿದ ಗುರುವಚನಮಂ ಚಾಚೂ ತಪ್ಪದೆ ವೀರಶೈವೋದ್ಧಾರ ಕಾರ್ಯವನ್ನು ಕೈಕೊಳ್ಳಲು ಸಿದ್ಧಲಿಂಗ ಯತಿಗಳು ಅನೇಕ ಚರವರ್ಯರನ್ನು ಕೂಡಿಕೊಂಡು ಸಂಚಾರವ ಕೈಕೊಳ್ಳುವರು. ಶಿವಯೋಗಿಗಳ ಈ ಷಟಸ್ಥಲೋದ್ಧಾರ ಕಾರ್ಯದಲ್ಲಿ ಬೆಂಬಲಿಗರಾಗಿ, ಅನೇಕ ಮಹಾನುಭಾವರಾದ ವಿರಕ್ತರೂ ಜೋಡಿಗರಾದರು. ಅವರುಗಳಲ್ಲಿ ಮುಖ್ಯರೆಂದರೆ ಕಂಬಳಿದೇವರು, ಸಿದ್ಧನಂಜೇಶ್ವರರು, ಚನ್ನದೇವರು, ದೊಡ್ಡಸಿದ್ಧಲಿಂಗೇಶ್ವರರು, ಕಂಕಣದೇವರು, ಲಂಬಕರ್ಣದೇವರು, ಸಿದ್ಧಮಲ್ಲೇಶ್ವರರು, ವರದ ಸಿದ್ಧಲಿಂಗೇಶರು, ಎಡೆತೊರೆಯ ಪುರದ ಗುರುಸಿದ್ಧ, ವೀರಣ್ಣೊಡೆಯರು, ಘನಲಿಂಗದೇವರು, ಚಿಕ್ಕಮಲ್ಲೇಶ್ವರ, ಮರುಳ ಸಿದ್ಧೇಶ್ವರ, ಚಂದ್ರಶೇಖರ, ಸುರಗಿಯಾರ್ಯ, ಶಾಂತ ಮಲ್ಲಿಕಾರ್ಜುನ, ಬೆಡಗಿನ ಪರ್ವತೇಶ್ವರ, ಪಟ್ಟಣದೇವರು, ಜಿಗುನಿಯ ಮರುಳದೇವರು, ಮುಳೆಯದೇವರು, ಛತ್ತಲೆಯಾರ್ಯರು ಸಂಪಿಗೆ ರಾಚವಟ್ಟದೇವರು, ಸಪ್ಪೆಯಾರ್ಯರು, ಉಪ್ಪಿನಹಳ್ಳಿಯಾರ್ಯರು,



ಜಗದ್ಗುರು ತೋಂಟದಾರ್ಯ ಮಠ, ಡಂಬಳ, ಗದಗ.
ಶಾಖಾ ಮಠಗಳು
ಕರ್ನಾಟಕ ರಾಜ್ಯ
ಉ
ಪ
ಪೂ
ಬೀದರ
ಗುಲ್ಬರ್ಗಾ
ಬಿಜಾಪೂರ
ಬೆಳಗಾಂವ
ರಾಯಚೂರು
ಧಾರವಾಡ
ಬಳ್ಳಾರಿ
ಉ. ಕನ್ನಡ
ಶಿವಮೊಗ್ಗ
ಚಿತ್ರದುರ್ಗ
ಚಿಕ್ಕಮಗಳೂರು.
ತುಮಕೂರು
ಕೋಲಾರ
ಬೆಂಗಳೂರು
ದ. ಕನ್ನಡ
ಹಾಸನ
ಮಂಡ್ಯ
ಕೊಡಗು
ಮೈಸೂರು

# ಶ್ರೀ ಜಗದ್ಗುರು ತೋಂಟದಾರ್ಯ ಮಠದ
## ಸಧ್ಯದ ಶಾಖಾ ಮಠಗಳು.



ವಿಜಾಪುರ ಜಿಲ್ಲಾ

ಹುನಗುಂದ ತಾಲೂಕ

ಬಾದಾಮಿ ತಾಲೂಕ

ರಾಯಚೂರ ಜಿಲ್ಲಾ

ಯಲಬುರ್ಗಿ ತಾಲೂಕ

ನರಗುಂದ ತಾಲೂಕ

ರೋಣ ತಾಲೂಕ

ನವಲಗುಂದ ತಾಲೂಕ

ಧಾರವಾಡ ತಾಲೂಕ

ಹುಬ್ಬಳ್ಳಿ ತಾಲೂಕ

ಗದಗ ತಾಲೂಕ

ಮುಂಡರಗಿ ತಾಲೂಕ

ಧಾರವಾಡ ಜಿಲ್ಲಾ

ಹೂವಿನಹಡಗಲಿ ತಾಲೂಕ

ಬಳ್ಳಾರಿ ಜಿಲ್ಲಾ

ಜೋಲಿಯ ಬಸವೇಶ್ವರರು, ಕೋರಿಯ ಸಿದ್ಧಬಸವೇಶ್ವರರು, ಹಿರಣ್ಯಾರ್ಯರು, ಬೋಳ ಬಸವೇಶ್ವರರು, ಕಿತ್ತೂರ ವರದ ಚನ್ನಮಲ್ಲೇಶ್ವರರು, ಆದಿಯಾಗಿ ಏಳುನೂರು ವಿರಕ್ತರನ್ನೊಳಗೊಂಡು ಈ ಕಾರ್ಯವನ್ನು ಪೂರೈಸುವಲ್ಲಿ ಅನೇಕ ಪವಾಡಗಳನ್ನು ಮಾಡಿ ತೋರಿಸಿ ಜನರ ಭಕ್ತಿಗೆ ಪಾತ್ರರಾದರು. ಈ ವಿಷಯವನ್ನು ವಿರುಪಾಕ್ಷ ಪಂಡಿತರು ತಮ್ಮ ಪುರಾಣದಲ್ಲಿ ನಿರೂಪಿಸಿದ್ದಾರೆ.

"ಅಲ್ಲಲ್ಲಿ ನಾನಾ ಪವಾಡಮಂ ಮೆರೆವುತಿರ
ಲಲ್ಲಲ್ಲಿ ಗಣನಾಥರುದಿಗ ಚರರೂಪಿನಿಂ
ದಲ್ಲಲ್ಲಿ ಪೂಜೆಗೊಳುತೈದಿ ತೋಂಟದ ಯತಿಯ ಸಾರಲತಿ
ಪ್ರೀತಿಯಿಂದೆ"
ಮೆಲ್ಲಮೆಲ್ಲನೆ ತೋಂಟದಾರ್ಯರಾ ವಿರತರೋಳ್
ಬಲ್ಲ ಬಲ್ಲರೊಳು ತತ್ವಾನುಭಾವಂಗಳಿಂ
ಸೊಲ್ಲು ಸೊಲ್ಲಿಗೆ ಪರಮ ಷಟ್ಸ್ಥಲವನುಸಿರ್ವರ್"

ತೋಂಟದ ಸಿದ್ಧಲಿಂಗ ಯತಿಗಳ ತರುವಾಯ ಒಂದುನೂರು ವರ್ಷಗಳ ಒಳಗಾಗಿಯೇ ಜೀವಿಸಿರುವ ವಿರುಪಾಕ್ಷ ಪಂಡಿತರಿಗೆ ಯತಿಗಳ ಬಗೆಗೆ ಹೆಚ್ಚಿನ ಸಂಗತಿಗಳು ತಿಳಿದ ಮೂಲಕ ತಮ್ಮ ಪುರಾಣದಲ್ಲಿ ವಿಶದವಾಗಿ ವರ್ಣಿಸಿದ್ದಾರೆ.

" ಇಂತಪ್ಪ ಅನಾದಿ ಜಂಗಮನೇ ಜಗದ್ಧಿತಾರ್ಥವಾಗಿ ಚರಿಸಿದ ಕ್ರಮ ವೆಂತೊಡೆ ಜ್ಞಾನಕ್ರಿಯಾ ಸ್ವರೂಪನುಂ, ಸರ್ವಾಂಗಲಿಂಗಿ, ಷಟ್‌ಸ್ಥಲಜ್ಞಾನಿ, ಸರ್ವಾಚಾರ ಸಂಪನ್ನ ಪಾದೋದಕ ಪ್ರಸಾದ ಪ್ರತಿಷ್ಠಾಪನಾಚಾರ್ಯನುಂ, ಅಷ್ಟಾವರಣಾಲಂಕಾರಣ, ದ್ವೈತಾದ್ವೈತ ಶಿಃಖರಮಾರ್ತಾಂಡನುಂ ಇಂತಪ್ಪ ದಿವ್ಯ ಶಿವಯೋಗಿ ಸಿದ್ಧಲಿಂಗೇಶ್ವರನಿಗೆ ಸಮ್ಯಗ್ ಜ್ಞಾನೋದಯವಾಗಿ ಸಂಸಾರ ಹೇಯಮಂ ಮಾಡಿ ಶರಣ ಹೊಕ್ಕ ಶಿಷ್ಯಜನಗಳ ನಾನು ಪರಿಕ್ರಮಗಳೆಂತೆಂ ದೊಡೆ ಸಪ್ಪೆದೇವರು, ಉಪ್ಪಿನ ಹಳ್ಳಿಯ ಸ್ವಾಮಿ ಸಿದ್ಧದೇವರು, ನಂಜೇದೇವರು, ಬೋಳ ಬಸವರಾಜ ದೇವರು, ಗುಮ್ಮಳಾಪುರ ಸಿದ್ಧಲಿಂಗದೇವರು, ಪಟ್ಟಣದೇವರು, ರೇವಣಸಿದ್ಧದೇವರು, ಸೀಲವಂತ ದೇವರು, ಚಿಟ್ಟಗೆದದೇವರು, ಇಂತೆ ಇವರು ಮುಖ್ಯವಾಗಿ ಭಕ್ತ ಮಹೇಶ್ವರಗಳ್ ಷಟ್‌ಸ್ಥಲ ಜ್ಞಾನ ಲಿಂಗಾಂಗ ಸಂಬಂಧ ಸಮರಸೈಕ್ಯಾರ್ಥನುಂ ಬೋಧಿಸಿ ಮುಕ್ತರಂ ಮಾಡಿ ಷಟ್‌ಸ್ಥಲೈಕಾರ್ಥವಾಗಿ ಮಾಡುವ ಕ್ರಿಯೆಗಳೆಲ್ಲ ನಿಷ್ಪತ್ತಿಯಾಗಿ ಎಡೆಯೂರಲ್ಲಿ ತಮಗೆ ಕಟ್ಟಿಸಿದ ಮಠದಲ್ಲಿ ಶಿವಯೋಗ ಸಮಾಧಿ ಸನ್ನದ್ಧರಾದರು. ತೋಂಟದ ಸ್ವಾಮಿಯ ಪಾದ ಪದ್ಮಾರಾಧರಾದ ವಾನಿವಾಸ ನಿವಾಸಿಗಳಾದ ಚೆನ್ನರಾಯ ಒಡೆಯರು ಚೆನ್ನರಾಯ ಒಡೆಯನ ಮಕ್ಕಳು ಲಿಂಗಪ್ಪ ಒಡೆಯರು ಲಿಂಗಪ್ಪ ಒಡೆಯರ

ಮಕ್ಕಳು, ಪಾದೋದಕ ಪ್ರಸಾದ ಸಂಪನ್ನರಾದ ಚೆನ್ನವೀರಪ್ಪ ಒಡೆಯರು, ಚೆನ್ನವೀರಪ್ಪ ಒಡೆಯರ ಸತಿ ಪರ್ವತಮ್ಮ ದಂಪತಿಗಳು ತಮ್ಮ ಭಕ್ತಿಯಿಂದ ತೋಂಟದ ಸ್ವಾಮಿಗೆ ಕಲ್ಲುಮಠವ ಕಟ್ಟಬೇಕೆಂದು ಚಿಟ್ಟಗ ದೇವರಿಗೆ ಪದಾರ್ಥಮಂ ಕೊಟ್ಟು ನಮಸ್ಕಾರವಂ ಮಾಡಲಾಗಿ ಭಕ್ತಿ ಪದಾರ್ಥಮಂ ಕೈಕೊಂಡು ಎಡೆಯೂರಿಗೆ ಬಿಜಯಂಗೈಯ್ದು ತೋಂಟದ ಸ್ವಾಮಿಗೆ ಕಲ್ಲುಮಠವನು ಎಂಟು ಜಡೆಯ ಬಗೆಯ ಹಿರಿಯರು ಚಿಟ್ಟಗ ದೇವರಿಗೆ ಕಟ್ಟಿಸಿದರು" ಎಂಬ ಎಡೆಯೂರಲ್ಲಿಯ ಶಾಸನದಿಂದ ಯತಿಗಳ ಬಗೆಗೆ ಹೆಚ್ಚಿನ ವಿವರಗಳು ತಿಳಿಯುತ್ತವೆ.

ಮಠೋದ್ಧಾರದ ಜೊತೆಗೆ ವಚನ ವಾಙ್ಮಯದ ಉದ್ಧಾರದ ಕೆಲಸವನ್ನು ತೋಂಟದಾರ್ಯರು ಕೈಕೊಂಡರು. ಅದರೆ ವಚನಕಾರರಾಗಿದ್ದು, ಷಟ್‌ಸ್ಥಲ ಜ್ಞಾನಸಾರಾಮೃತವೆಂಬ ಹೆಸರಿನಲ್ಲಿ ಏಳನೂರಕ್ಕೂ ಹೆಚ್ಚು ವಚನಗಳನ್ನು ರಚಿಸಿ ತಮ್ಮ ಪಾಲಿನ ಸೇವೆ ಸಲ್ಲಿಸುತ್ತಿದ್ದಾರೆ ವಚನಗಳನ್ನು ಸ್ತೋತ್ರ ವಚನಗಳಿಂದ ಪ್ರಾರಂಭ ಮಾಡಿ ಷಟ್‌ಸ್ಥಲ ವಿವರಣೆ ಮಾಡುವ ಸಮಗ್ರ ವಚನ ರಚಿಸಿದ್ದಾರೆ.

ಆಗಿನ ಕಾಲದಲ್ಲಿ ವೀರಶೈವ ಮಠಗಳಲ್ಲಿ ಹೊಸ ವ್ಯವಸ್ಥೆ ಮಾಡಿ, ಸಮಾಜದ ಉನ್ನತಿಗೆ ಸಂಸ್ಕೃತಿ ಕಾಯ್ದುಕೊಂಡು ಹೋಗಲು ಅನುವು ಮಾಡಿಕೊಟ್ಟರು. ಪುರಾಣ ಚರಂತಿಕೆ ಹಾಗೂ ವಿರಕ್ತ ಮಠಗಳೆಂದು ಒಂದೊಂದು ಬುಡಕಟ್ಟಿಗೆ ಹೊಂದಿಕೆಯಾಗುವಂತೆ ರಚಿಸಿ ಏಳುನೂರು ವಿರಕ್ತರನ್ನೂ ಅವುಗಳ ವ್ಯವಸ್ಥೆ ಇಟ್ಟು ವಿವಿಧ ಮುಖದಿಂದ ಸಮಾಜ ಸುಧಾರಣೆ ಮಾಡಿದರು. ಶಿವಪೂಜಾ ಬುಡಕಟ್ಟು, ಕಂಥೆ ಬುಡಕಟ್ಟು, ಅಗ್ಗವಣಿ ಬುಢಕಟ್ಟು ಇತ್ಯಾದಿಯಾಗಿ ವಿಂಗಡಣೆ ಮಾಡಿದರು. (ಆದರೆ ಬುಡಕಟ್ಟುಗಳೆಲ್ಲ ಈಗ ಇಲ್ಲದಂತಾಗಿವೆ. ಈಗ ಇರುವ ವಿರಕ್ತಮಠಗಳೆಲ್ಲ ಸಮಯ ವಿಂಗಡನೆಯಿಂದ ತಮ್ಮ ತಮ್ಮ ಭಾಗ ಮಾಡಿಕೊಂಡಿವೆ). ಈ ಎಲ್ಲ ವಿರಕ್ತರ ಪರಿಶ್ರಮದಿಂದ ಹೊಸ ಸಮಾಜ ರಚನಾ ಕಾರ್ಯದಿಂದ ವೀರಶೈವ ಸಮಾಜ. ಪುನಃ ಪ್ರಗತಿ ಹೊಂದಿತು. ಮುಂದೆ ತಾವು ಕಗ್ಗೆರೆಯ ತೋಟದಲ್ಲಿ ಬಹುಕಾಲ ಶಿವಪೂಜಾ ಅನುಷ್ಠಾನದಲ್ಲಿ ಕಾಲಕಳೆದು ತೋಂಟದಾರ್ಯರೆಂದು ಪ್ರಸಿದ್ಧಿ ಪಡೆದರು. ಎಡೆಯೂರಲ್ಲಿ ಯೋಗ ಸಮಾಧಿಯನ್ನು ರಚಿಸಿ ಅಲ್ಲಿಯೇ ಬಯಲಾದರು.

ಈ ಪರಂಪರೆ ಇಂದಿನವರೆಗೂ ಸಾಗಿ ಬಂದಿದೆ. ಇದೀಗ ಈ ನಿರಂಜನ ಸಿಂಹಾಸನವನ್ನು ಡಂಬಳ ಗದುಗಿನ ಸಂಸ್ಥಾನ ಮಠದಲ್ಲಿ ಪೂಜ್ಯ ಶ್ರೀ ಸಿದ್ಧರಾಮ ದೇವರು ಅಭಿನವ "ಸಿದ್ಧಲಿಂಗೇಶ"ನಾಮದಿಂದ ಆರೋಹಣಮಾಡಲಿರುವರು.

ಸದುವಿನಯವೇ ಸದಾಚಾರವೆಂದು ನಂಬಿ ಸತತಾಭ್ಯಾಸಿಗಳಾಗಿ ಎಲ್ಲರಿಗೂ ಬೇಕಾದವರಾಗಿದ್ದಾರೆ. ಹುಬ್ಬಳ್ಳಿ ಮೂರುಸಾವಿರ ಮಠದ ಪೂಜ್ಯ ಜಗದ್ಗುರುಗಳ ದಿವ್ಯ ಕೃಪಾಶೀರ್ವಾದದ ಬಲದಿಂದ ಗುರು ಕುಮಾರಾಶ್ರಮದ ನಿಷ್ಠಾವಂತ ಸಾಧಕರಾಗಿ ಕ. ವಿ. ವಿ. ಎಂ.ಎ. ( ಕನ್ನಡ) ಉಚ್ಚಪದವೀಧರರಾಗಿ "ಸಾಧಕ" ರೆಂಬ ನಾಮದಿಂದ ಸಾಹಿತ್ಯ ಸೇವೆ ಮಾಡಿದ್ದಾರೆ. ಸಾಹಿತ್ಯ ಸೂರ್ಯಸಿಂಹಾಸ ನಾಧೀಶ್ವರರಾದ ಡಾ. ಜ. ಚ. ನಿ. ಸಾಹಿತ್ಯರಾಧಕರಾಗಿ, ತತ್ವ ಸಾಹಿತ್ಯದಲ್ಲಿ ವಿಶೇಷ ಕೃಷಿಗೈದಿದ್ದಾರೆ. ಮೇಲಾಗಿ ಉತ್ತಮ ವಾಗ್ಮಿಗಳು, ತುಂಬಿದ ಸಭೆ ಆಹುದಹುದೆಂಬಂತೆ ಮಾತನಾಡುವ ದೇವದತ್ತ ವಾಣಿಯನ್ನು ಪಡೆದು ಬಂದ ಕುಶಾಗ್ರಮತಿಗಳಾಗಿದ್ದಾರೆ ಇಂತಹ ಪುಣ್ಯ ಪುರುಷರನ್ನು. ಆಚಾರ ಸಂಪನ್ನರನ್ನು ಲಿಂಗಪೂಜಾ ನಿಷ್ಠರನ್ನು ಪಡೆದ ಸಮಾಜ ಧನ್ಯ ಹಾಗೂ ಭಕ್ತರ ಪುಣ್ಯ ವಿಶೇಷ. ಅನಾದಿ ನಿರಂಜನ ಮೂರ್ತಿ ತೋಂಟದ ಸಿದ್ಧಲಿಂಗ ಸಿದ್ಧರಾಮರಾಗಿ ಉದಿಸಿ ಉಳಿದ ಮಣಿಹವನ್ನು ಪೂರೈಸಿ ಭಕ್ತರ ಉದ್ಧಾರ ಮಾಡಲು ಅವತರಿಸಿರಬೇಕು. ಇಂತಹ ಪುಣ್ಯ ಪುರುಷರ ಪೂಜ್ಯ ಸ್ವಾಮಿಗಳ ಈ ಸಿಂಹಾಸನಾರೋಹಣದ ಮಂಗಲಮಯ ಪರ್ವಕಾಲದಲ್ಲಿ ನನ್ನ ಪಾಲಿನ ಭಕ್ತಿ ಪುಷ್ಪಗಳನ್ನು ಅವರ ಪಾದಂಗಳಲ್ಲಿ ಅರ್ಪಿಸಿ ಪುಣ್ಯಭಾಗಿಯಾಗುತ್ತೇನೆ.

## ನಿರಂಜನ ಜಂಗಮ ಸ್ತೋತ್ರ

— ವೈಲಾರ ಬಸವಲಿಂಗ ಶರಣ

ಶೈವನಲ್ಲದ ವೀರಶೈವ ಷಟ್‌ಸ್ಥಲ ಬ್ರಹ್ಮ।
ಐವರಧಿದೈವ ಜಂಗಮದೇವನು ॥ ಪಲ್ಲವಿ ॥

ನಾಮರೂಪಿಗನಲ್ಲ। ಸೀಮೆಹಂಗಿಗನಲ್ಲ।
ಹೇಮದಾಸಿಗನಲ್ಲ। ಕಾಮಿನಿಯರ ॥
ಕಾಮದವನಲ್ಲ ಜಡ। ನೇಮವಿಡಿದವನಲ್ಲ।
ಸ್ವಾಮಿ ಚರಮೂರ್ತಿ। ಜಂಗಮದೇವನು ॥ ೧ ॥

ಓತುಷಣ್ಮತನಲ್ಲ। ಭೂತಭವಿಷ್ಯನಲ್ಲ।
ಜಾತಿಸ್ಮರತಾನಲ್ಲ। ಭೂತಳದೊಳು ॥
ಖ್ಯಾತಿಯುತನಲ್ಲನವ। ಧೂತಮಾರ್ಗಿಗನಲ್ಲ।
ಈತನೇ ಸಹಜ ಜಂಗಮದೇವನು ॥ ೨ ॥

ಮದುವೆಯಾದವನಲ್ಲ। ವಧುವನಾಳ್ದವನಲ್ಲ।
ಮೆದವನೀಳ್ದವನಲ್ಲ। ಮಚ್ಚರಿಸುತ ॥
ಕದನಕರ್ಕಶನಲ್ಲ। ಮುದಡಜನವಶನಲ್ಲ।
ಸದಮಲಾನಂದ। ಜಂಗಮದೇವನು ॥ ೩ ॥

ಖಂಡಿತೈಮೊಗನಲ್ಲ। ಕೆಂಡಗಣ್ಣಿಗನಲ್ಲ।
ಕಂಡನಿಂದವರೊಡನೆ। ಕಲಹವಿಲ್ಲ ॥
ರುಂಡಮಾಲಿಗನಲ್ಲ। ಗಂಡುಗಾಸಿಗನಲ್ಲ।
ಗಂಡರಿಗೆಗಂಡ। ಜಂಗಮದೇವನು ॥ ೪ ॥

ಪಡಿಯಚಾಟಕನಲ್ಲ । ಒಡನೆ ಬೂಟಕನಲ್ಲ ।
ನಡುವೆ ಚಾಟಕನಲ್ಲ । ಶೈವನಂತೆ ॥
ಕಡಿವಕಾಟಕನಲ್ಲ । ಬಡಿವ ಕೀಟಕನಲ್ಲ ।
ಒಡೆಯರಿಗೆ ಒಡೆಯ । ಜಂಗಮ ದೇವನು ॥ ॥ ೫ ॥

ಮುಗಿಲೊಳಿದ್ದವನಲ್ಲ । ತೊಗಲಪೊದ್ದವನಲ್ಲ ।
ಬಗೆಬಗೆಯ ಗಾರುಡದ । ಸಿದ್ಧನಲ್ಲ ॥
ಹಗಲ ಗೆದ್ದವನಲ್ಲ । ಮಗನ ಮೆದ್ದವನಲ್ಲ ।
ಹಗರಣಿಗನಲ್ಲ । ಜಂಗಮದೇವನು ॥ ॥ ೬ ॥

ಎಲುಮಾಲೆಧರನಲ್ಲ । ತಲೆಯೋಡಕರನಲ್ಲ ।
ಜಲಜಡೆಸಿವೆಣ್ ಪೊತ್ತು । ಮೆರೆವನಲ್ಲ ॥
ಒಲುವಾಹಿಮೆಪರನಲ್ಲ । ಕಲಹಧಾರಕನಲ್ಲ ।
ಸುಲಭಚರಮೂರ್ತಿ । ಜಂಗಮದೇವನು ॥ ೭ ॥

ಕಣಿಯನುಸುರುವನಲ್ಲ । ಮಣಿಯಧರಿಸುವನಲ್ಲ ।
ಕ್ಷಣಕೊಂದು ರೂಪ । ಬೋಧಿಸುವನಲ್ಲ ॥
ಪೆಣನಮೆರೆಸುವನಲ್ಲ । ಪಣವಸುರಿಸುವನಲ್ಲ ।
ತ್ರಿಣಯನಧಿದೈವ । ಜಂಗಮದೇವನು ॥ ॥ ೮ ॥

ಈ ರೀತಿಯೊಳು ಶೂನ್ಯಾ । ಕಾರ ಮೂರ್ತಿಯು ತನ್ನ ।
ವೀರಶೈವಾಚಾರ । ಸುಪ್ರಸನ್ನ ॥
ದೋರಿಸಲಹಿದನೆನ್ನ । ಚಾರುನಡೆನುಡಿಚೆನ್ನ ।
ವೀರಮಹೇಶ । ಜಂಗಮದೇವನು ॥ ॥ ೯ ॥

## ಶಿವಾನುಭವ ಮಾರ್ಗದ

# ವಿಶೇಷತೆಯೇನು?

— ಸ. ಸ. ಮಾಳವಾಡ

ನುಡಿವ ಎಡೆಯಲ್ಲಿ, ನೋಡುವ ಎಡೆಯಲ್ಲಿ, ವಸ್ತುವಂ ಪಿಡಿವ ಎಡೆಯಲ್ಲಿ, ಭೋಗಿಪ ಎಡೆಯಲ್ಲಿ, ದೇಹಮಂ ಬಿಡುವ ಎಡೆಯಲ್ಲಿ, ಲಿಂಗ ಕಳೆ, ಲಿಂಗ ಗುಣಂ, ಘನಲಿಂಗಯೋಗಂ ಆದೊಡೆ ಬಳಿಕ ಆ ಮಹಾತ್ಮನಂ, ಅದು ಏನ್ ಎನ ಬರ್ಪುದು ?– ಇದು ಶತಕತ್ರಯದಲ್ಲಿ ಮಗ್ಗೆ ಮಾಯಿದೇವನ ಪ್ರಶ್ನೆಯಾಗಿದೆ.

ಈ ಪ್ರಶ್ನೆಯನ್ನು ಕೇಳುವ ಬಗೆಯಲ್ಲಿಯೇ ಪ್ರಶ್ನೆಯ ಉತ್ತರವೂ ಗರ್ಭೀಕೃತವಾಗಿದೆ. ಆ ಮಹಾತ್ಮನನ್ನು ಶಿವಾನುಭವಿ ಎನ್ನಬೇಕು, ಇದೇ ಆ ಉತ್ತರವಾಗಿದೆ. ಎಲ್ಲೆಲ್ಲಿಯೂ ಲಿಂಗಕಳೆ, ಲಿಂಗಗುಣ, ಲಿಂಗಯೋಗ ಸಮನಿಸುವುದೇ ಶಿವಾನುಭವ.

ಸ್ವಾನುಭವದ ಸುಖವನು ಅರಿಯದವನು ಏತರ ಸುಖಿ ?– ಇದು ಸಿದ್ಧರಾಮನ ವಾಣಿಯಲ್ಲಿ ಮೂಡಿ ಬಂದ ಪ್ರಶ್ನೆ.

ನಿಜ ಸುಖವನ್ನು ಪಡೆಯಬೇಕೆಂಬುದು ಎಲ್ಲ ಮಾನವರ ಗುರಿ. ಅದು ಸಾಧ್ಯವಾಗುವುದು ಸ್ವಾನುಭವದ ಅನುವನ್ನು ಅರಿತಾಗ ಮಾತ್ರ. ಸ್ವಾನುಭವದ ಅನುವನ್ನು ಅರಿಯುವುದು ಶಿವಾನುಭವ.

ಮಾನವನಿಗೆ 'ಇರು'ವ ಅರಿಯುವ ಹಂಬಲವಿದೆ. ಇರುವುದು ಹೊರಗಿನಿಂದ ಆದಾಗ, ಅರಿತುಕೊಳ್ಳಬೇಕಾದುದು ತನ್ನ ಹೊರಗೆಯಿದೆಯೆಂದು ಅರಸು

ವಾಗ ಅದು ಭ್ರಮೆಯಾಗುತ್ತದೆ. ಇಂತಹ ಭ್ರಮೆಯನ್ನು ಅಳಿದ ಶಿವಶರಣನ ಮನವೇ ಲಿಂಗವಾಗಿ, ಭಾವವೇ ಐಕ್ಯವಾಗಿ ಪರಿಣಮಿಸಿದಾಗ ನಿಜದ ನಿಲವು ಸಾಧ್ಯವಾಗುತ್ತದೆ. ನಿಜದ ನಿಲುವನ್ನು ಪಡೆಯುವುದು ಶಿವಾನುಭವ.

ಬಾಹ್ಯ ವಸ್ತುಗಳ ಅರಿವು ಅನುಭವಗಳು ಎಷ್ಟೇ ಮಹತ್ವದವುಗಳಾದರೂ ಅವು ಮಾನವನಿಗೆ ಸಂತೃಪ್ತಿಯನ್ನು ತರಲಾರವು. ಅಂತೆಯೇ ಅಂತಃಪ್ರಜ್ಞೆಯ ಮೂಲಕ ಪರಮಾತ್ಮನ ನಿರಂತರ ಅನುಸಂಧಾನ, ಆ ಮೂಲಕ ಸಾಧ್ಯವಾಗುವ ಅನುಭವದ ತೃಪ್ತಿಯು ಮಾನವನ ಪರಮ ಗುರಿಯಾಗಬೇಕು. ವಿಶ್ವದ ನಾನಾ ಭಾಗಗಳಲ್ಲಿಯ ಸಂತರು ಬಗೆಬಗೆಯಾಗಿ ಪರಮಾರ್ಥ ಸಿದ್ಧಿಯ ಪಥದಲ್ಲಿ ಸಾಗಿದ್ದಾರೆ. ಈ ಪಥದಲ್ಲಿ ಸಾಗಿದ ಸಂತರ ಕೆಲವೊಂದು ಸಾಮಾನ್ಯ ವೈಶಿಷ್ಟ್ಯಗಳನ್ನು ಗುರುತಿಸುವ ಪ್ರಯತ್ನವೂ ನಡೆದಿದೆ.

ಪರಮಾತ್ಮ ಸಾಕ್ಷಾತ್ಕಾರದ ಅನುಭವವು ಬುದ್ಧಿಯ ಸೀಮೆಯಾಚಿನದಾಗಿದೆ. ಅದು ಪರೋಕ್ಷ ಅನುಭೂತಿಯ ವಿಷಯವಾಗಿದ್ದು, ಬೌದ್ಧಿಕ ಸಿದ್ಧಿಯನ್ನು ಅವಲಂಬಿಸಿಲ್ಲ. ಸತ್ಯದ ಆಳವನ್ನು ಕುರಿತ ಅಂತರಿಕ ದೃಷ್ಟಿಯದು. ಅದು ಭಾವನಾತ್ಮಕವಾದುದು. ವಾದದ ಬಲೆಗೆ ಸಿಲುಕದಂತಹದು. ಅದು ಮಿಂಚಿನಂತೆ ಪ್ರಕಾಶಮಯ. ಆದರೆ ಮಿಂಚಿನಂತೆ ಕ್ಷಣದಲ್ಲಿ ತೋರಿ ಮತ್ತೆ ಅಡಗುವ ದರ್ಶನವೂ ಆಗಬಹುದು. ಇಂತಹ ದರ್ಶನದ ಸಾತತ್ಯವನ್ನು ಪಡೆಯಬೇಕೆಂಬುದೇ ಅನುಭಾವಿಗಳ ಪ್ರಯತ್ನವಾಗಿದೆ. ವಿಶ್ವದ ಸಂತರ ಪಥಗಳನ್ನು ವಿವೇಚಿಸಿದವರು ಪರಮಾತ್ಮ ಸಾಕ್ಷಾತ್ಕಾರದ ದರ್ಶನದಲ್ಲಿ ಸಾತತ್ಯವು ಸಾಧ್ಯವಾಗಿಲ್ಲವೆಂದು ಹೇಳಿರುವುದೂ ಉಂಟು. ಸಂತರ ಬಾಳಿನ ಕ್ಷಣಕಾಲದ ಪರವಶತೆಯನ್ನು, ಅಗೋಚರ ಶಕ್ತಿಗೆ ಒಳಗಾದ ಅಪೂರ್ವ ಸಿದ್ಧಿಯ ಕೆಲವೊಂದು ಕ್ಷಣಗಳನ್ನು ಗುರುತಿಸಲಾಗಿದೆ. ಆ ಬಗೆಯ ಸಿದ್ಧಿಯ ಇಹದ ಬಾಳಿನಲ್ಲಿ ಸತತವಾಗಿ ನೆಲೆಗೊಂಡ ಉದಾಹರಣೆಗಳು ಹೆಚ್ಚಾಗಿ ಕಂಡು ಬಂದಿಲ್ಲ. ಆಕಸ್ಮಿಕ ಭಾವನೆಯಿಂದ ಪರವಶಗೊಂಡು ಆಳವಾದ ಅರ್ಥಪೂರ್ಣವಾದ ಅನುಭವವನ್ನು ಆಗಾಗ ಪಡೆದ ಸಂತರು ಜಗತ್ತಿನಲ್ಲಿ ಆಗಿ ಹೋಗಿದ್ದಾರೆ. ಆಗಾಗ ಪಡೆಯುವ ಅನುಭವಕ್ಕಿಂತ ಪರಮಾತ್ಮನೊಂದಿಗೆ ಏಕತೆಯ ಅನುಭವವನ್ನು ಸತತವಾಗಿ ಉಳಿಸಿಕೊಳ್ಳುವಲ್ಲಿಯೇ ಅನುಭಾವಿಯ ಸಫಲತೆಯಿದೆ. ವಿಶ್ವದ ಅನುಭಾವಿಗಳ ಚರಿತ್ರೆಯಲ್ಲಿ ಈ ಬಗೆಯ ಸಾತತ್ಯದ ಉದಾಹರಣೆಗಳು ವಿರಳವಾಗಿವೆ. ಅಲ್ಲದೆ ಪರಮಾತ್ಮನೊಂದಿಗೆ ಏಕತೆಯ ಅನುಭವ ಪಡೆದ ಕ್ಷಣಗಳಲ್ಲಿ ಇಹದ ಬಾಳು ಸ್ಥಗಿತಗೊಂಡಿರುವದನ್ನೂ ನಾವು ಕಾಣುತ್ತೇವೆ. ಏಕತೆಯ ಅನುಭಾವವು ವ್ಯಕ್ತಿಗತ ಮಾತ್ರವಾಗಿದ್ದು ಸಾಮೂಹಿಕವಾಗಿ ಅದು ರೂಢಿಸಿಲ್ಲವೆಂಬ ಸಂಗತಿಯೂ ಇದೆ.

ಉಯಿಲ್ಯಮ್ ಜೋನ್ಸ್ ಎಂಬವರು ಧಾರ್ಮಿಕ ಅನುಭವಗಳ ವೈವಿಧ್ಯದ ಬಗೆಗೆ ಗ್ರಂಥ ಬರೆದಿದ್ದಾರೆ. ಅವರು ಅನುಭಾವಿಗಳ ಹಂತವು ಸಾಮಾನ್ಯ ಮಾನವೀಯ ಪ್ರಜ್ಞೆಗೆ ಅತೀಂದ್ರಿಯದ ಒಂದು ನವೀನ ಅರ್ಥವನ್ನು ಒದಗಿಸುತ್ತಿದೆ ಯೆಂಬ ನಿರ್ಣಯಕ್ಕೆ ಬಂದಿದ್ದಾರೆ. ಅದು ಮನಸ್ಸಿಗೆ ಒಂದು ಹೊಸ ಬೆಳಕಿಂಡಿ ಯನ್ನು ಒದಗಿಸುತ್ತಿದೆಯೆಂದು ಆ ಬೆಳಕಿಂಡಿಯ ಮೂಲಕ ಬೇರೊಂದು ವ್ಯಾಪಕ ವಾದ ಆಳವಾದ ಲೋಕ ಕಂಡು ಬರುತ್ತಿದೆಯೆಂದೂ ಜೋನ್ಸ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಅನುಭಾವಿಗಳ ವಿಷಯದಲ್ಲಿ ಇದಕ್ಕಿಂತ ಹೆಚ್ಚಿಗೆ ಏನನ್ನೂ ಹೇಳಲು ಬರುದಿಲ್ಲವಾಗಿ ಇಷ್ಟರಿಂದಲೆ ನಾವು ಸಮಾಧಾನಪಟ್ಟುಕೊಳ್ಳಬೇಕೆಂದು ಅವರು ಪ್ರತಿಪಾದಿಸಿದ್ದಾರೆ. ಅರ್ಥಾತ್ ಒಂದು ಹೊಸ ಬೆಳಕಿಂಡಿಯನ್ನು ಆಗಾಗ ತೆರೆದು ತೋರುವ ವ್ಯಕ್ತಿಗತ ಅನುಭವದ ಮುಂದೆ ಸಾಗುವುದಾಗಲಿ, ಅದಕ್ಕೊಂದು ಸಾರ್ವತ್ರಿಕವಾದ ಪ್ರಮಾಣವನ್ನು ಕಂಡುಕೊಳ್ಳುವುದಾಗಲಿ ಕಠಿಣವಾಗಿದೆಯೆಂಬ ನಿರ್ಣಯದಿಂದ ಜೋನ್ಸರು ಸಮಾಧಾನಪಟ್ಟುಕೊಂಡಿದ್ದಾರೆ.

ಭಾರತದ ಸಂತರ ಸಾಧನೆಯ ವಿವೇಚನೆಯನ್ನು ಗುರುದೇವ ರಾನಡೆಯವರು ಒದಗಿಸಿದ್ದಾರೆ. ಕರ್ನಾಟಕದ ಅನುಭಾವಿಗಳ ಸಾಧನೆಯ ವಿಷಯವನ್ನು ಅವರು ಕೈಗೆ ಎತ್ತಿಕೊಳ್ಳುವ ಪೂರ್ವದಲ್ಲಿ ಡಾ. ರಾನಡೆಯವರು ಪಟ್ಟ ಅಭಿಪ್ರಾಯ ಹೀಗೆ :

i. ದೈವೀ ಅನುಭಾವದ ಸಂದರ್ಭದಲ್ಲಿ ಐಹಿಕ ಬಾಳು ಸ್ಥಗಿತಗೊಳ್ಳುತ್ತಿದೆ.
ii. ದೈವೀ ಅನುಭಾವದ ಪ್ರವಾಹವು ಸತತವಾಗಿರುವುದಿಲ್ಲ.
iii. ಅದು ಸಾಮೂಹಿಕವಾಗಿ ರೂಢವಾಗಿರುವುದಿಲ್ಲ.

ಮೇಲ್ಕಂಡ ಜೋನ್ಸರ ಡಾ. ರಾನಡೆಯವರ ವಿಚಾರಧಾರೆಯು ಶರಣರ ಶಿವಾನುಭಕ್ಕೆ ಅನ್ವಯಿಸುವುದಿಲ್ಲ. ಶರಣರ ಶಿವಾನುಭವವು ಮೇಲ್ಕಂಡ ವಿಚಾರ ಧಾರೆಗೆ ವ್ಯತಿರಿಕ್ತವಾಗಿ ಅದಕ್ಕಿಂತ ಮುಂದೆ ಸಾಗಿದ ಉದಾಹರಣೆಯನ್ನು ಒದಗಿಸುತ್ತಿದೆ. ಆದುದರಿಂದ ವಿಶ್ವದ ಅನುಭಾವಿಗಳ ಚರಿತ್ರೆಗೆ ಶಿವಾನುಭಾವವು ಹೊಸದೊಂದು ಅಧ್ಯಾಯವನ್ನು ಜೋಡಿಸುತ್ತಿದೆ. ಶಿವಾನುಭಾವವು ನವೀನತೆ ವೈಶಿಷ್ಟ್ಯಗಳಿಂದ ಕೂಡಿದೆ.

ಆರಂಭದಲ್ಲಿ ಉಲ್ಲೇಖಿಸಿದ ಮುಗ್ಗಿಯ ಮಾಯಿದೇವನ ಉಕ್ತಿಯಲ್ಲಿ ಶಿವಾನುಭವದ ವಿಶೇಷತೆ ಸಂಚಿತವಾಗಿದೆ. ನಾವೀಗ ಪ್ರಭುದೇವನ ಉಕ್ತಿ ಯೊಂದನ್ನು ಗಮನಿಸಬೇಕು.

ಮನವೇ ಲಿಂಗವಾದ ಬಳಿಕ ನೆನೆವುದು ಇನ್ನಾರನಯ್ಯ
ಭಾವವೇ ಐಕ್ಯವಾದ ಬಳಿಕ ಬಯಸುವುದು ಇನ್ನಾರನಯ್ಯ

ಭ್ರಮೆ ಅಳಿದು ನಿಜವು ಸಾಧ್ಯವಾದಬಳಿಕ
ಅರಿವುದು ಇನ್ನಾರನಯ್ಯ?

ಪ್ರಭುದೇವನ ಈ ಉಕ್ತಿಯಂತೆ ಮನವೇ ಲಿಂಗವಾಗುತ್ತಿದೆ, ಭಾವವೇ ಐಕ್ಯವಾಗುತ್ತಿದೆ. ಆದುದರಿಂದ ಶಿವಾನುಭವವು ಆಗಾಗ ತೆರೆಯುವ ಒಂದು ಬೆಳಕಿಂಡಿ ಮಾತ್ರವಲ್ಲ. ಅದು ಸತತವಾದ ಬೆಳಕಿನ ಹೊನಲು.

'ನಿಚ್ಚಕ್ಕೆ ಮನವಂ ಅಂದಂದಿಗೆ ಅತ್ತಿತ್ತ ಹರಿಯಲ್ ಈಯದೆ
ಚಿತ್ತದಲ್ಲಿ ಧರಿಸಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರಲಿಂಗ'

ಚಿತ್ತದಲ್ಲಿ ಬಚ್ಚಬರಿಯ ಬೆಳಗನ್ನು ನಿರಂತರವೂ ಧರಿಸಬಲ್ಲ ಸಾಧನೆ ಯತ್ತ ಶಿವಶರಣರು ಸಾಗಿದರು. ಇಂತಹ ಸಾಧನೆ ವ್ಯಕ್ತಿಗತ ಮಾತ್ರವಲ್ಲ. ಸಾಮೂಹಿಕವಾಗಿ ರೂಢವಾಗುವಂತಹ ಸಂಘಟನೆಯನ್ನು ಕೈಕೊಂಡರು. ಅದು ನಡೆದುದು ಶಿವಾನುಭವ ಮಂಟಪದಲ್ಲಿ. ಈ ಬಗೆಯ ಸಾಧನೆಗೆ ತೊಡಗಿರುವ ಶಿವಶರಣರ ಐಹಿಕ ಬಾಳು ಸ್ಥಗಿತಗೊಂಡಿರಲಿಲ್ಲ. ಇಲ್ಲಿಯೂ ಅಲ್ಲಿಯೂ ಸಲ್ಲು ವಂತಹ ಪಥವು ಅದಾಗಿತ್ತು. ಶಿವಾನುಭವದ ಪಥದಲ್ಲಿ ಸಾಗಿದವರು ಕಾರ್ಯ ವನ್ನು ಕೈಬಿಟ್ಟಿರಲಿಲ್ಲ. ಶಿವಶರಣರೆಲ್ಲ ಸಂಸಾರವನ್ನು ತೊರೆದ ಸನ್ಯಾಸಿ ಗಳಾಗಿರಲಿಲ್ಲ.

ಅನುಭಾವವು ಆತ್ಮವಿದ್ಯೆ, ಅಂತರಂಗದ ರತ್ನ, ಎಂಬುದಾಗಿ ಹೇಳಿದ ಶಿವಶರಣರು ಆ ಪದವನ್ನು ವ್ಯಾಪಕವಾದ ಅರ್ಥದಲ್ಲಿ ಬಳಸಿದ್ದಾರೆ. ಅನುಭಾವ ಪದವು ಆಂತರಿಕ ಪ್ರಜ್ಞೆಯ ಆನಂದಮಯ ಸ್ಥಿತಿಯನ್ನು,ಆ ಪದವು ಸೂಚಿಸುತ್ತಿದೆ. ಈ ಅರ್ಥದಲ್ಲಿ ಅದು ವ್ಯಕ್ತಿಗತವೂ ಅಹುದು. ವ್ಯಕ್ತಿಗತ ಪ್ರಕಾಶಮಯ ಸ್ಥಿತಿ, ಸತ್ಯದರ್ಶನ, ಅಂತಃಸ್ಫುರಣಗಳ ಬೋಧೆ ಆ ಪದದಲ್ಲಿದೆ. ಆದರೆ ಶರಣರು ಇನ್ನೂ ಮುಂದೆ ಸಾಗಿ ಸುತ್ತಣ ಬದುಕಿನಲ್ಲಿ ಸತ್ಯದರ್ಶನವನ್ನು, ಪ್ರಕಾಶಮಯತೆ ಯನ್ನು ಕಾಣುವ ಸಾಧನೆಗೆ ತೊಡಗಿದರು. ಅಂತಃಸ್ಫುರಣಕ್ಕೆ ಗೋಚರವಾದ ಬೆಳಕನ್ನು ಬಾಳಿನಲ್ಲಿಯ ಸಮನ್ವಯಕ್ಕಾಗಿ ಶಿವಶರಣರು ಬಳಸಿಕೊಂಡರು.

'ಶರಣರಲ್ಲಿ ಅನುಭಾವ ಕೇಳಿದರೆ ಅದೇ ಮುಕ್ತಿ' ಎಂಬಂತಹ ಉಕ್ತಿ ಗಳಿಂದ ಅನುಭಾವ ಪದದ ವ್ಯಾಪ್ತಿಯ ಕಲ್ಪನೆ ನಮಗೆ ಆಗುತ್ತಿದೆ. ಈ ಸಂದರ್ಭದಲ್ಲಿ ಆ ಪದವು ಶಿವಶರಣರಲ್ಲಿ ನಡೆದ ಗೋಷ್ಠಿ ಎಂಬ ಅರ್ಥವನ್ನು ಪಡೆಯುತ್ತಿದೆ. 'ಗೋಷ್ಠಿ' ವ್ಯಕ್ತಿಗತವಲ್ಲ, ಅನುಭಾವವನ್ನು ಸಾಮೂಹಿಕ ವಾಗಿ ರೂಢಿಸುವ ಶರಣ ಪಥದ ವೈಶಿಷ್ಟ್ಯವು 'ಗೋಷ್ಠಿ'ಯಿಂದ ವ್ಯಕ

ವಾಗುತ್ತಿದೆ. 'ತನ್ನಲ್ಲಿ ತಾ ಸನ್ನಿಹಿತ' ವಾಗುವ ನಿಲುಮೆಗೇ ಶರಣರು ನಿಲ್ಲಲಿಲ್ಲ. 'ಶರಣರ ಸಂಗ' ದತ್ತಲೂ ಅವರು ಮುಂದುವರೆದರು. ಅಂದರೆ ಶರಣರ ಗೋಷ್ಠಿಯ ಮೂಲಕ ಸಾಮೂಹಿಕವಾಗಿ ಅನುಭಾವವನ್ನು ರೂಢಿಸುವ ನಿಲುಮೆ ಅದು.

ಶಿವಾನುಭವ ಪಥವನ್ನು ಕೈಕೊಂಡವರು ಒಂದೆಡೆ ಸೇರಿ ತಂತಮ್ಮ ಅನುಭವಗಳನ್ನು ನಿರೂಪಿಸಿ, ಸಂದೇಹಗಳನ್ನು ಚರ್ಚಿಸಿ, ಸಾಮೂಹಿಕ ಸಿದ್ಧಿಯತ್ತ ಸಾಗುವುದಕ್ಕೆಂದು ಶಿವಾನುಭವ ಮಂಟಪವನ್ನು ಸಂಘಟಿಸಿದರು. ವಿವಿಧ ಮನೋಧರ್ಮದವರ ಮುಕ್ತ ಮನದ ವಿಚಾರ ಸರಣಿಯನ್ನು ಶಿವಾನುಭವ ಮಂಟಪದಲ್ಲಿ ಮಂಡಿಸಲು ಅವಕಾಶವಿತ್ತು. ಅನುಭಾವವು ಕೇವಲ ಅವರವರ 'ಅಂತರಂಗದ ರತ್ನ' ವಾಗಿ ಅಲ್ಲಿ ಉಳಿದಿರಲಿಲ್ಲ. ಆದುದರಿಂದ

Mystic truth exists for the idividual who has the transport for one one else.........mysticim is for private is too private in itis utterances.

ಎಂಬ ಜೋನ್ಸ್‌ರ ನಿರ್ಣಯಗಳು ಶಿವಶರಣರ ಅನುಭಾವ ಪಥಕ್ಕೆ ಅನ್ವಯಿಸಲಾರವು. ಅಂತರಂಗದ ಅನುಭವವನ್ನು ಬಹಿರಂಗವಾಗಿ ಶಿವಾನುಭವ ಮಂಟಪದಲ್ಲಿ ಚರ್ಚಿಸಲಾಗುತ್ತಿತ್ತು, ಶಿವಾನುಭವ ಪಥದಲ್ಲಿ ಮುಂದುವರಿದವರು ಉಳಿದವರಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಎಲ್ಲರೂ ತಂತಮ್ಮ ಅನುಭವವನ್ನು ಮಂಡಿಸುತ್ತಿದ್ದರು. ಇದು ಬೌದ್ಧಿಕ ಚರ್ಚೆಯ ಕೂಟವಾಗಿರಲಿಲ್ಲ. ಅನುಭಾವ ಪಥವನ್ನು ಕುರಿತ ಈ ಬಗೆಯ ಸಂಘಟನೆಯು ಅನುಭಾವಿಗಳ ಇತಿಹಾಸದಲ್ಲಿ ಹೊಸ ಸಂಗತಿಯಾಗಿದೆ.

ಭಕ್ತಿಗೆ ಅನುಭಾವವೇ ಬೀಜ ಕಾಣಿರೋ
ಭಕ್ತಿಗೆ ಅನುಭಾವವೇ ಆಚಾರ ಕಾಣಿರೋ

ಶರಣಪಥದಲ್ಲಿ ಅನುಭಾವವು ಭಕ್ತಿಗೆ ಬೀಜವಾಗಿತ್ತು. ಭಕ್ತಿಯ ಆಚಾರವೂ ಆಗಿತ್ತು. ಶಾಸ್ತ್ರಗಳ ಚರ್ಚೆಗೆಂದು ಸೇರಿದ ಕೂಟವಾಗಿರಲಿಲ್ಲ, ಶಿವಾನುಭವ ಮಂಟಪ. ಬರಿಯ ಭಕ್ತರ ಕೂಟವೂ ಅದಾಗಿರಲಿಲ್ಲ, ಅದು ಪ್ರಾಚೀನ ಪದ್ಧತಿಯ ಗುರುಕುಲ ಮಾತ್ರ ಆಗಿರಲಿಲ್ಲ. ಸಾಮೂಹಿಕ ಪೂಜೆಯ ಮೇಳವೂ ಅಲ್ಲ,

ಅನುಭಾವವಿಲ್ಲದವನ ಭಕ್ತಿ ಅನುವಿಂಗೆ ಬಾರದು
ಅನುಭಾವವಿಲ್ಲದ ಲಿಂಗ ಸಮರಸ ಸುಖವನರಿಯದು
ಅನುಭಾವವಿಲ್ಲದ ಪ್ರಸಾದಿ ಪರಿಣಾಮವ ಕೊಡದು
ಅನುಭಾವವಿಲ್ಲದೆ ಅರಿಯಬಾರದು

ಭಕ್ತಿ, ಜ್ಞಾನ ಕ್ರಿಯೆಗಳಿಗೆ ಅನುಭಾವವೇ ಮೂಲ. ಅನುಭಾವವಿಲ್ಲದ ಭಕ್ತಿ, ಜ್ಞಾನ, ಕ್ರಿಯೆಗಳು ಸಫಲತೆ ಪಡೆಯುವುದಿಲ್ಲ. ಲಿಂಗದ ಮೂಲಕ ಸಮರಸ ಪಡೆಯಲೂ ಅನುಭಾವದ ದೃಷ್ಟಿ ಅವಶ್ಯಕ. ಇದು ಶಿವಶರಣರ ವಿಚಾರಧಾರೆಯಾಗಿತ್ತು. ಇಂತಹ ವಿಚಾರಧಾರೆಗೆ ಸಾಮೂಹಿಕವಾಗಿ ಮೂರ್ತ ಸ್ವರೂಪ ಕೊಡುವುದಕ್ಕಾಗಿ ಶಿವಾನುಭವ ಮಂಟಪವು ಏರ್ಪಟ್ಟಿತು. ಈ ದೃಷ್ಟಿಯಿಂದಾಗಿ ಶರಣರ ಅನುಭಾವ ಪಥದಲ್ಲಿ ವಿಶೇಷತೆಯು ಕಂಡು ಬರುತ್ತಿದೆ. ಮೇಲ್ಕಂಡ ಜೋನ್ಸರ ನಿಲುಮೆಯ ಸೀಮೆಯನ್ನು ದಾಟಿದ ಪಥವು ಶಿವ-ಶರಣರದಾಗಿತ್ತು. ಅಂತೆಯೇ ಅನುಭಾವ ಪಥದ ಇತಿಹಾಸದಲ್ಲಿ ಶಿವಶರಣರದು ಅಪೂರ್ವವೆಂದು ಭಾವಿಸಬೇಕಾಗಿದೆ.

ಮಾನವನು ಅಪೂರ್ಣನಾಗಿದ್ದಾನೆ. ಆತನ ಶಕ್ತಿಯು ಸೀಮಿತವಾಗಿದೆ. ಇದನ್ನರಿತ ಮಾನವನು ಎಂದಿನಿಂದಲೂ ಪರಿಪೂರ್ಣತೆಯತ್ತ ಸೀಮಿತ. ಶಕ್ತಿ ಯಾಚೆಗೆ ಸಾಗುವ ಪ್ರಯತ್ನದಲ್ಲಿ ತೊಡಗಿದ್ದು ಮಾನವೀಯ ಚರಿತ್ರೆಯಲ್ಲಿ ಕಂಡು ಬರುತ್ತಿದೆ. ತನ್ನ ಸೀಮೆಯನ್ನು ದಾಟಿ ವಿಶ್ವಂಭರ ವಿಶ್ವಾತೀತ ಪರಮಾತ್ಮನೊಂದಿಗೆ ಏಕತೆ ಪಡೆಯುವ ಪ್ರಯತ್ನವೇ ಅದಾಗಿದೆ. ಈ ಬಗೆಯ ಪ್ರಯತ್ನವನ್ನು ಕುರಿತು ಶ್ರೀ ಅರವಿಂದರು ತಮ್ಮ Life Divine ಎಂಬ ಮಹಾಕೃತಿಯಲ್ಲಿ ವಿವೇಚಿಸಿದ್ದಾರೆ. ಈ ಬಗೆಯ ಪ್ರಯತ್ನ ನಾಲ್ಕು ಬಗೆಯಿಂದ ನಡೆದಿದೆಯೆಂದು ಅವರು ಹೇಳುತ್ತಾರೆ.

There are four main lines which Nature has followed in her attempt to open up the inner being religion, occualtism, Spiritual thought and an inner spiritual realisation and experience. All those four powers have worked by a simultanean action, more or less connected, some lines in a variable colloboration, some times is dispute with each other, some times is a separate independence ............................ Spiritual experience s the final aim and achievement of religion, its sky and summit ............ ...................... all knowledge and endeavour can reach its fruition only if it is turned into experience and has become a part of the consiciousness and its established operations; in the spiritual field of all this religious occulter philosophical knowledge and endeavour must, to bear fruition, end is an opening up of the spiritual consiciousness, in

experiences that found continuelly heighter, expand and enrich that consiciousness and in the building up of a life and action that is in conformity with the truth of the spirit, this is the work of spiritual realisation and experience.

ಇಲ್ಲಿ ಶ್ರೀ ಅರವಿಂದರು ವಿಕಾಸಶೀಲವಾದ ಪ್ರಕೃತಿಯಲ್ಲಿ ಮಾನವನು ಅಂತರಿಕವಾಗಿ ತನ್ನ ಪರಮಗುರಿಯತ್ತ ಸಾಗುವಲ್ಲಿ ನಾಲ್ಕು ಪಥಗಳನ್ನು ನಿರೂಪಿಸಿದ್ದಾರೆ. i. ಧಾರ್ಮಿಕ ii. ಅದೃಶ್ಯ ಶಕ್ತಿಗಳ ಉಪಾಸನೆ iii. ಆಧ್ಯಾತ್ಮಿಕ ತತ್ವ ಜಿಜ್ಞಾಸೆ iv. ಅನುಭಾವ — ಇವು ಆ ನಾಲ್ಕು ಪಥಗಳಾಗಿವೆ. ಮೊದಲಿನ ಮೂರು ಸಾಧನಗಳಂತಿದ್ದು ಸಿದ್ಧಿಯ ಪ್ರವೇಶವಾಗಿವೆ. ಅನುಭಾವವೇ ಧಾರ್ಮಿಕ ಸಿದ್ಧಿಯ ಶಿಖರವೆಂಬುದು ಶ್ರೀ ಅರವಿಂದರ ಅಭಿಪ್ರಾಯವಾಗಿದೆ. ಆವುದೊಂದು ಧರ್ಮವು ಅನುಭಾವದ ಹಂತಕ್ಕೆ ಏರದಿದ್ದರೆ ಅದು ಫಲಪ್ರದವಾಗುವುದಿಲ್ಲ. ಆದುದರಿಂದ ನೇಮ ವ್ರತಾಚಾರಗಳ ಮಟ್ಟದಲ್ಲಿ ನಿಲ್ಲುವ ಧಾರ್ಮಿಕ ಆಚರಣೆಯಿಂದ ಪೂರ್ಣತೆಯನ್ನು ತಲುಪಿದಂತಾಗುವುದಿಲ್ಲ. ಈ ದೃಷ್ಟಿಯಿಂದ ಸಾಮಾನ್ಯವಾಗಿ ಕಂಡು ಬರುವ ಧಾರ್ಮಿಕ ವ್ರತಾಚಾರಗಳು ಅಪೂರ್ಣವಾಗಿಯೇ ಉಳಿಯುತ್ತಿವೆ.

ಮೇಲ್ಕಂಡ ನಾಲ್ಕು ಬಗೆಯ ಪ್ರಯತ್ನಗಳು ಏಕಕಾಲದಲ್ಲಿ ಸಾಗಿ ಅವುಗಳಲ್ಲಿ ಸಮನ್ವಯ ತಲೆದೋರಿದಾಗ ಮಾತ್ರ ಧರ್ಮವು ಸಫಲವೆನ್ನಿಸುತ್ತಿದೆ. ಧಾರ್ಮಿಕ ವಿಚಾರ, ವ್ರತಾಚರಣೆ, ತತ್ತ್ವ ಜಿಜ್ಞಾಸೆಗಳು ಆಧ್ಯಾತ್ಮಿಕ ಅನುಭವವನ್ನು ರೂಢಿಸಿಕೊಳ್ಳುವಲ್ಲಿ ಕೊನೆಗೊಳ್ಳಬೇಕು. ಹಾಗಿಲ್ಲವಾದರೆ ಅವು ನಮ್ಮನ್ನು ಪರಮಗುರಿಯತ್ತ ಒಯ್ಯುವಲ್ಲಿ ಸಮರ್ಥವಾಗುವುದಿಲ್ಲ. ನಮ್ಮ ಅಂತರಂಗದಲ್ಲಿ ದೈವೀ ಪ್ರಜ್ಞೆಯ ಅಂಕುರವು ಮೊಳೆತು, ನಮ್ಮ ಬಾಳನ್ನು ಎತ್ತರದ ಮಟ್ಟಕ್ಕೆ ಏರಿಸಿ, ವಿಸ್ತೃತಗೊಳಿಸಿ, ವೈಭವ ಸಂಪನ್ನಗೊಳಿಸಿ ಸತ್ಯದರ್ಶನವು ಹೊರಹೊಮ್ಮಬೇಕು. ಅಂತಹ ಸತ್ಯದರ್ಶನದಿಂದ ಋತಪ್ರಜ್ಞೆಯಿಂದ ನಾವು ಮುನ್ನಡೆಯುವಂತೆ ನಾವು ಹೊಸ ಬಾಳಿನ ತಳಹದಿಯನ್ನು ಹಾಕಿಕೊಳ್ಳುವುದಕ್ಕೆ ಅನುಭಾವವು ಅಗತ್ಯವಾಗಿದೆ. ಆದುದರಿಂದ ಬರಿಯ ಧಾರ್ಮಿಕ ವ್ರತಾಚಾರಗಳಲ್ಲಿ ತೊಡುಗುವುದು ಸಾಲದೆಂಬುದು ಸ್ಪಷ್ಟವಾಗುತ್ತಿದೆ. ಧಾರ್ಮಿಕ ವ್ರತಾಚಾರಗಳ ಆವರಣದ ಹಿಂದೆ ನಡೆಯುವ ಸಂಕುಚಿತ , ಸ್ವಾರ್ಥಸಾಧಕತೆಯಂತೂ ಘಾತುಕವಾದುದೇ ಆಗಿದೆ. ಈ ಬಗೆಯ ಸ್ವಾರ್ಥ ಸಾಧಕತೆಯು ಇಲ್ಲವೆಂದರೂ ಬರಿಯ ಧಾರ್ಮಿಕ ವ್ರತಾಚಾರ ಅಷ್ಟೊಂದು ಪರಿಣಾಮಕಾರಿಯಲ್ಲವೆಂಬುದನ್ನೂ ನಾವು ಗಮನಿಸಬೇಕು. ಧಾರ್ಮಿಕ ವ್ರತಾಚಾರದಿಂದ ಅನುಭಾವದತ್ತ ಸಾಗುವುದು ಸಾಧ್ಯವಾದಾಗ ಮಾತ್ರ ಅಂತಹ ವ್ರತಾಚಾರವು ಧಾರ್ಮಿಕವೆನಿಸುವುದು.

ಶರಣರ ಶಿವಾನುಭವ ಪಥದಲ್ಲಿ ಧಾರ್ಮಿಕ ಉಪಾಸನೆ, ವ್ರತಾಚರಣೆ, ತತ್ತ್ವಜಿಜ್ಞಾಸೆ, ಅನುಭಾವಗಳ ಸಮನ್ವಯ ಕಂಡು ಬರುತ್ತಿದೆ. ಅಲ್ಲಿಯ ವ್ರತಾಚಾರಗಳು ಧಾರ್ಮಿಕ ಉಪಾಸನೆಗೆ ಪರಿಪೋಷಕವಾಗುವಂತಿವೆ. ಆ ಪಥದಲ್ಲಿಯ ತತ್ತ್ವಜಿಜ್ಞಾಸೆಯು ಅನುಭವವಾಗಿ ಪರಿಪಾಕ ಪಡೆಯುತ್ತಿದೆ. ಇದನ್ನು ಕುರಿತು ವಿವರವಾದ ನಿರೂಪಣೆಯು ಇನ್ನೊಂದು ಲೇಖನದ ವಿಷಯ ವಾಗಬಲ್ಲುದು.

ಅನುಭಾವದ ಸಾಹಿತ್ಯವು (Continuity) ಉಳಿಯುವ, ಸಾಮೂಹಿಕವಾಗಿ ರೂಢವಾಗುವ, ಐಹಿಕ ಬಾಳನ್ನು ಸ್ಥಗಿತಗೊಳಿಸದೆ ಅದನ್ನೇ ಲಿಂಗಾಂಗ ಸಾಮರಸ್ಯದ ಸಾಧನವನ್ನಾಗಿ ಮಾರ್ಪಡಿಸುವ ಮಾರ್ಗವು ಶಿವಾನುಭವದ್ದಾಗಿದೆ.

# ಎಡೆಮಾಡು !

— ಉಮೇಶ ಅಂಗಡಿ

ಎಡೆಯೂರ ಶ್ರೀ ಸಿದ್ಧಲಿಂಗನನ ಕಂಡೆನಾ
ಎಡೆ ಮಾಡಿ ತಂದಿಟ್ಟ ಶಿವಭೋಜ್ಯ ಉಂಡೆನಾ

ಎನ್ನೊಳಗೆ ನೀನಿರಲು ಎಡೆಯೂರ ಸಿದ್ಧೇಶ
ನಿನ್ನೂರೆ ನನ್ನೂರು ಎಡೆಯೂರು ಸಿದ್ಧೇಶ
ನನ್ನೂರೆ ನಿನ್ನೂರು ಎಡೆಯೂರ ಸಿದ್ಧೇಶ
ನಿನ್ನೊಳಗೆ ನಾನಿರಲು ಎಡೆಮಾಡು ಸಿದ್ಧೇಶ

ಎತ್ತಿತ್ತ ನೋಡಿದರೆ ನೀನಿರುವೆ ಸಿದ್ಧೇಶ
ಗೊತ್ತಿರಲು ತಮ್ಮೊಳಗೆ ನೀನಿರುದ ಸಿದ್ಧೇಶ
ಅತ್ತಿತ್ತ ಸುತಸುತ್ತಿ ಬರುತಿಹರು ಸಿದ್ಧೇಶ
ಮತ್ತೇಕೆ ಭಿನ್ನತೆಯ ತೋರುವುದು ಸಿದ್ಧೇಶ

ದುಡಿದವನ ಮನದೊಳಗೆ ನೀನಿಪ್ಪೆ ಸಿದ್ಧೇಶ
ದುಡಿಯದನ ನೀನೊಲ್ಲದೂರಿಪ್ಪೆ ಸಿದ್ಧೇಶ
ದುಡಿತದೊಳು ಮನವಿಡಲು ನೀ ಕರೆವೆ ಸಿದ್ಧೇಶ
ಮಡಿಮನದಿ ದುಡಿದವನ ಕೈವಿಡಿವೆ ಸಿದ್ಧೇಶ

ಶುದ್ಧ ಮನದಿಂ ನಿನ್ನ ಬೇಡಲ್ಕೆ ಸಿದ್ಧೇಶ
ಸಿದ್ಧಿಯಕ್ಕುಂ ಸಕಲ ಕಾಮ್ಯಗಳು ಸಿದ್ಧೇಶ
ಆ ಸಿದ್ಧರಾಮರೇ ತಾವೀಗ ಸಿದ್ಧೇಶ
ಶ್ರೀ ಸಿದ್ಧಲಿಂಗನೇ ಅವರೀಗ ಸಿದ್ಧೇಶ

ಈ ಗದುಗು ತಾನೀಗ ಎಡೆಯೂರೆ ಸಿದ್ಧೇಶ
ಈಗಿದುವೆ ಷಟ್‌ಸ್ಥಲದ ಗದ್ದುಗೆಯು ಸಿದ್ಧೇಶ
ಆಗಿಹುದು ಚಿದ್ಘನನ ಆಸ್ಥಾನ ಸಿದ್ಧೇಶ
ಈಗೆಮ್ಮ ಜೋಹರವನೀ ಕೊಳ್ಳು ಸಿದ್ಧೇಶ

ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ
ಶಿವಯೋಗಿಗಳವರ ಹಿಂದಿನ ಹಾಗೂ ಇಂದಿನ

# ಜಗದ್ಗುರುಗಳ ಪರಂಪರೆ

— ಸದಾಶಿವ ಬಡಿಗಣ್ಣವರ

| ನಂ. | ಶೂನ್ಯ ಸಿಂಹಾಸನಾಧಿಪತಿಗಳು | ಪೀಠಾರೋಹಣ ಕಾಲ | ಪೀಠದ ವರ್ಷ | ಗದ್ದಿಗೆ ಸ್ಥಳ |
|---|---|---|---|---|
| ೧. | ಅನಾದಿಗಣೇಶ್ವರ | .... | .... | ಶ್ರೀಶೈಲ |
| ೨. | ಆದಿ ಗಣೇಶ್ವರ | .... | .... | ಗೋವೆ |
| ೩. | ನಿರ್ಮಾಯ ಗಣೇಶ್ವರ | .... | .... | ಮಾದೇಶ್ವರ ಬೆಟ್ಟ |
| ೪. | ನಿರಂಜನ ಗಣೇಶ್ವರ | .... | .... | ” |
| ೫. | ಜ್ಞಾನಾನಂದ ಗಣೇಶ್ವರ | .... | .... | ನೂರೊಂದು ಸ್ವಾಮಿಬೆಟ್ಟ |
| ೬. | ಆತ್ಮಗಣೇಶ್ವರ | .... | .... | ತಿರುವಣ್ಣಾಮಲೆ |
| ೭. | ಅಧ್ಯಾತ್ಮ ಗಣೇಶ್ವರ | .... | .... | ಶ್ರೀಶೈಲ |
| ೮. | ರುದ್ರ ಗಣೇಶ್ವರ | .... | .... | ನಾಯಕನಹಟ್ಟಿ |
| ೯. | ಬಸವ ಪ್ರಭುದೇವರು | .... | .... | ತೇರದಾಳ (ವಿಜಾಪೂರ) |
| ೧೦. | ಆದಿಲಿಂಗ ದೇವರು | .... | .... | ಕಲ್ಲೂರ |
| ೧೧. | ಚೆನ್ನವೀರೇಶ್ವರ ದೇವರು | .... | .... | ಮುನಿಪಲ್ಲಿ |
| ೧೨. | ಗೋಸಲ ಸಿದ್ಧೇಶ್ವರದೇವರು | .... | .... | ಗೋಸಲ |
| ೧೩. | ಶಂಕರದೇವರು | .... | .... | ಸಿದ್ಧರಬೆಟ್ಟ (ತುಮಕೂರ) |
| ೧೪. | ದಿವ್ಯಲಿಂಗದೇವರು | .... | .... | ವಾಣಿಜ್ಯಪುರ (ಹರದನಹಳ್ಳಿ) |
| ೧೫. | ಗೋಸಲ ಚನ್ನಬಸವ ಸ್ವಾಮಿಗಳು | .... | .... | ಹರದನಹಳ್ಳಿ |

| | | | | |
|---|---|---|---|---|
| ೧೬. | ತೋಂಟದ ಸಿದ್ಧಲಿಂಗ ಶಿವಯೋಗಿಗಳ ಪರಂಪರೆ | ೧೪೨೫—೧೪೫೬ | ೩೧ | ಎಡೆಯೂರ |
| ೧೭. | ಬೋಳಬಸವ ಸ್ವಾಮಿಗಳು | ೧೪೫೬—೧೪೬೮ | ೧೨ | ಮದ್ದಗಿರಿ |
| ೧೮. | ಸಿದ್ಧೇಶ್ವರ ಸ್ವಾಮಿಗಳು | ೧೪೬೮—೧೪೮೪ | ೧೬ | ಗೂಳೂರ |
| ೧೯. | ಉದ್ಧನಾರ್ಯ ಸ್ವಾಮಿಗಳು | ೧೪೮೪—೧೫೦೪ | ೨೦ | ಭದ್ರರಾಜಪೂರ |
| ೨೦. | ಹರಿಹರ ಸ್ವಾಮಿಗಳು | ೧೫೦೪—೧೫೨೭ | ೨೩ | ಹಿರೇಹಡಗಲಿ |
| ೨೧. | ಬಿಕ್ಷುಕದ ಬಸವಲಿಂಗ ಸ್ವಾಮಿಗಳು | ೧೫೨೭—೧೫೫೭ | ೩೦ | ರದ್ದೂರು |
| ೨೨. | ಕಟಗಿಹಳ್ಳಿ ರಾಜೋಟಿ ಸ್ವಾಮಿಗಳು | ೧೫೫೭—೧೬೦೭ | ೫೦ | ತಿಳವಳ್ಳಿ |
| ೨೩. | ಕೌದೀ ಮಹಾಂತ ಸ್ವಾಮಿಗಳು | ೧೬೦೭—೧೬೭೨ | ೬೫ | ಬಾಚೇಗೊಂಡನಹಳ್ಳಿ |
| ೨೪. | ಅರ್ಧನಾರೀಶ್ವರಸ್ವಾಮಿಗಳು | ೧೬೭೨—೧೭೨೨ | ೫೦ | ಡಂಬಳ |
| ೨೫. | ನಂದೀಶ್ವರ ಸ್ವಾಮಿಗಳು | ೧೭೨೨—೧೭೬೭ | ೪೫ | ಅಣ್ಣಿಗೇರಿ |
| ೨೬. | ಉಗ್ಗದ ತೋಟದಾರ್ಯ ಸ್ವಾಮಿಗಳು | ೧೭೬೭—೧೭೭೩ | ೬ | ಅಣ್ಣಿಗೇರಿ |
| ೨೭. | ಸದಾಶಿವ ಸ್ವಾಮಿಗಳು | ೧೭೭೩—೧೮೩೮ | ೩೫ | ಕೊಪ್ಪಳ |
| ೨೮. | ಮಹಾಂತ ಸ್ವಾಮಿಗಳು | ೧೮೦೮—೧೮೩೮ | ೩೦ | ಹಂಪಸಾಗರ |
| ೨೯. | ವೃದ್ಧತೋಂಟದಾರ್ಯ ಸ್ವಾಮಿಗಳು | ೧೮೩೮—೧೮೭೮ | ೪೦ | ಗದಗ |
| ೩೦. | ಮೃತ್ಯುಂಜಯಸ್ವಾಮಿಗಳು | ೧೮೭೮—೧೮೮೧ | ೩ | ಗದಗ |
| ೩೧. | ಸಿದ್ಧೇಶ್ವರ ಸ್ವಾಮಿಗಳು | ೧೮೮೧—೧೯೨೪ | ೪೩ | ಗದಗ |
| ೩೨. | ಗುರುಬಸವ ಸ್ವಾಮಿಗಳು | ೧೯೨೪—೧೯೬೦ | ೩೬ | ” |
| ೩೩. | ಶಿವಕುಮಾರ ಸ್ವಾಮಿಗಳು | ೧೯೬೧ಜನೇವರಿ೨೬ | ೧೪.... | .... |
| ೩೪. | ತೋಂಟದ ಸಿದ್ಧಲಿಂಗ ಸ್ವಾಮಿಗಳು | ೧೯೭೪ ಜುಲೈ ೨೯ | .... | .... |

ಆಧಾರ : ತೋಂಟದ ಸಿದ್ಧಲಿಂಗಯತಿಗಳು ವಚನ ಹಾಗೂ ಮೈಸೂರಿನ ಮಹಾರಾಜರಾದ ಶ್ರೀ ಜಯಚಾಮರಾಜೇಂದ್ರ ಒಡೆಯರವರು ೧೧ ಸಪ್ಟಂಬರ ೧೯೫೧ ರಂದು ಗದುಗಿನ ತೋಂಟದಾರ್ಯ ಮಠಕ್ಕೆ ಆಗಮಿಸಿದಾಗ ಅವರಿಗೆ ಅರ್ಪಿಸಿದ ಮಾನಪತ್ರದ ಆಧಾರದಿಂದ ಸಂಗ್ರಹಿಸಲಾಗಿದೆ.